

# ಯಶೋದಮ್ಮ ಸಿದ್‌ಬಟ್ಟೆ ಅವರ ಬದುಕು - ಬರಹ

( ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ. ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ )


ಸಂಶೋಧಕರು

**ಸುನೀಲ ತಂದೆ ಶಂಕರ**

ಸಂಶೋಧನ ಮಾರ್ಗದರ್ಶಕರು

**ಡಾ. ಜಗನ್ನಾಥ ಹೆಬ್ಬಾಳೆ**

ನಿರ್ದೇಶಕರು, ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ,

ಬೀದರ







ಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಸೆಪ್ಟೆಂಬರ - ೨೦೦೮



# ಯಶೋದಮ್ಮ ಸಿದ್‌ಬಟ್ಟೆ ಅವರ ಬದುಕು-ಬರಹ

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ಸುನೀಲ ಶಂಕರ



ಸಂಶೋಧನ ಮಾರ್ಗದರ್ಶಕರು

**ಡಾ. ಜಗನ್ನಾಥ ಹೆಬ್ಬಾಳೆ**

ನಿರ್ದೇಶಕರು ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ



ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬

ಸೆಪ್ಟೆಂಬರ-೨೦೦೮

# ಪ್ರಮಾಣ ಪತ್ರ

*`ಯಶೋದಮ್ಮ ಸಿದ್‌ಬಟ್ಟೆ ಅವರ ಬದುಕು-ಬರಹ` ಎಂಬ ನಿಬಂಧವನ್ನು ಡಾ. ಜಗನ್ನಾಥ ಹೆಬ್ಬಾಳೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.*

ಸ್ಥಳಃ ಬೀದರ
ದಿನಾಂಕಃ ೧೫/೦೭/೦೮

ಸುನೀಲ ತಂದೆ ಶಂಕರ
ಎಂ.ಫಿಲ್. ವಿದ್ಯಾರ್ಥಿ,
ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ, ಬೀದರ.

# ಮಾರ್ಗದರ್ಶಕರ ಪ್ರಮಾಣ ಪತ್ರ

*`ಯಶೋದಮ್ಮ ಸಿದ್‌ಬಟ್ಟೆ ಅವರ ಬದುಕು-ಬರಹ`ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸುನೀಲ ತಂದೆ ಶಂಕರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.*

ಸ್ಥಳ: ಬೀದರ
ದಿನಾಂಕ: ೧೫/೦೯/೦೮

ಡಾ. ಜಗನ್ನಾಥ ಹೆಬ್ಬಾಳೆ
ಮಾರ್ಗದರ್ಶಕರು ಹಾಗೂ
ನಿರ್ದೇಶಕರು, ಕ.ರಾ.ಶಿ.ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ,
ಬೀದರ.

# ಯಶೋದಮ್ಮ ಸಿದ್‌ಬಟ್ಟೆ ಅವರ ಬದುಕು-ಬರಹ

## ಪರಿವಿಡಿ

## ಅಧ್ಯಾಯ - ೧

# ಅಧ್ಯಯನದ ಉದ್ದೇಶ ಹಾಗೂ ಮಹತ್ವ

ಕನ್ನಡ ಭಾಷೆಯು ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿರುವ ಭಾಷೆಗಳ ಗುಂಪಿಗೆ ಸೇರಿದೆ. ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಯುಗದ ವರೆಗೂ ಹಲವಾರು ಪ್ರಕಾರ ಹಾಗೂ ವೈವಿದ್ಯೆಗಳಲ್ಲಿ ಹೊರ ಹೊಮ್ಮಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಅಂದಿನಿಂದ ಇಂದಿನವರೆಗೂ ಕನ್ನಡವನ್ನು ಉಳಿಸಿ ಬೆಳೆಸಿ ನೀರೆರೆದು ಬೆಳೆಸಿ ಕೀರ್ತಿಶೇಷರಾದ ಮಹಾನಿಯರ ಕೊಡುಗೆ ಊಹಾತೀತವಾಗಿದೆ.

ದ್ರಾವಿಡ ಭಾಷೆಯಲ್ಲಿ ಗುರುತಿಸಲ್ಪಟ್ಟಿರುವಂತೆ ಒಟ್ಟು ೨೭ ಭಾಷೆಗಳ ಗುಂಪಿನಲ್ಲಿ ಕನ್ನಡ ಭಾಷೆಯು ಸೇರಿರುವುದು ಹೆಮ್ಮೆಯ ವಿಚಾರವಾಗಿದೆ. ಶರವೇಗದಲ್ಲಿ ತನ್ನ ಬಿಂಬ ಪ್ರತಿಬಿಂಬದ ಮೂಲಕ ಕನ್ನಡ ಭಾಷೆಯು ಬೆಳೆಯುತ್ತಿದೆ. ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಪಾಶ್ಚತ್ಯ ಸಾಹಿತ್ಯದ ಪ್ರಭಾವದಿಂದ ಸಣ್ಣಕಥೆ, ಕಾದಂಬರಿ, ನಾಟಕ , ಕಾವ್ಯ , ಪ್ರಬಂಧ, ವಿಮರ್ಶೆ, ಮಕ್ಕಳ ಸಾಹಿತ್ಯ, ಅನುವಾದ ಮುಂತಾದ ಪ್ರಕಾರದ ಸಾಹಿತ್ಯವು ಭರದಿಂದ ಸಾಗುತ್ತಾ ಬಂದುದರ ಪರಿಣಾಮವಾಗಿ ಜೊತೆಗೆ ನಾಡುನುಡಿ, ದೇಶಪ್ರೇಮ, ಸ್ವಾತಂತ್ರ್ಯ ಸಮಾನತೆ, ನಿಸರ್ಗದ ವರ್ಣನೆ, ಪ್ರೀತಿ, ಪ್ರೇಮ, ಸೌಹಾರ್ದತೆ ಹೀಗೆ ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲಿ ಕಾವ್ಯ ಪ್ರಕಾರವು ಈ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ. ಇಂದು ಕನ್ನಡ ಸಾಹಿತ್ಯ ಇಷ್ಟೊಂದು ಹುಲುಸಾಗಿ ಅಭಿವೃದ್ಧಿಯೆಡೆಗೆ ಸಾಗಿಬಂದಿದರಲ್ಲಿ ಹಲವಾರು ಕವಿ ಪುಂಗದವರು ಅನುಪಮ ಸೇವೆ ಸಲ್ಲಿಸಿ ಅವಿಸ್ಮರಣಿಯರಾಗಿದ್ದಾರೆ. ಅಂತಹ ಮಹಾನಿಯರಲ್ಲಿ ಕನ್ನಡದ ಕಣ್ವ ಬಿ.ಎಂ.ಶ್ರೀ, ರಸ ಋಷಿ ಕುವೆಂಪು, ವರಕವಿ ಬೇಂದ್ರೆ, ನವ್ಯಕವಿ ಅಡಿಗರು, ಶೃಂಗಾರ ಕವಿ ಕೆ.ಎಸ್.ನರಸಿಂಹ ಸ್ವಾಮಿ ನಿತ್ಯೋತ್ಸವದ ಕವಿ ನಿಸ್ಸಾರ ಅಹ್ಮದ ಮತ್ತು ರಾಷ್ಟ್ರ ಕವಿ ಜೆ.ಎಸ್. ಶಿವರುದ್ರಪ್ಪ ಮುಂತಾದವರಿದ್ದಾರೆ.

ಕನ್ನಡ ಸಾಹಿತ್ಯ ಚರಿತ್ರೆಯ ಪುಟ ತಿರುವಿದಾಗ ಸಾಂಸ್ಕೃತಿಕ ಖಣಿ ಎಂಬ ಖ್ಯಾತಿಗೆ ಪಾತ್ರವಾಗಿರುವ ಹೈದ್ರಾಬಾದ ಕರ್ನಾಟಕ ಭಾಗವು ಅನೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟು ವೈವಿದ್ಯಮಯ ಭಾಷೆ, ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡಿದೆ. ಮುಖ್ಯವಾಗಿ ಬಿಜಾಪುರದ ಆದಿಲ್‌ಷಾಹಿಗಳು, ಬೀದರನ ಬರೀದಷಾಹಿಗಳು ಹಾಗೂ ಹೈದ್ರಾಬಾದನ ನಿಜಾಂನ ಆಳ್ವಿಕೆಗೆ ಒಳಪಟ್ಟು ಸ್ಥಳೀಯ ಪ್ರಾದೇಶಿಕ ಭಾಷೆಯಿಂದ ಕನ್ನಡ ಬರುಡಾಗಿದೆ. ಆಡಳಿತ ಭಾಷೆಯಾಗಿ ಇವರುಗಳ ಆಳ್ವಿಕೆಯ ಅವಧಿಯಲ್ಲಿ ಉರ್ದು ಭಾಷೆ ಪ್ರಾಬಲ್ಯ ಹೊಂದಿದ ಅವಧಿಯಲ್ಲಿ ಕನ್ನಡ ಭಾಷೆಯ ಬಳಕೆ ಕಲಿಕೆ ನಿಷೇಧಿಸಲಾಗಿತ್ತು. ಕನ್ನಡ ಭಾಷೆಯ ಕಲಿಕೆಯು ಅಪರಾಧವೆಂದು ಪರಿಗಣಿಸಲಾಗುತ್ತಿತ್ತು. ಇಂತಹ ನಿರ್ಭಂದದ ಅವಧಿಯಲ್ಲಿ ಭಾಲ್ಕಿಯಲ್ಲಿ ಶ್ರೀ ಚೆನ್ನಬಸವೇಶ್ವರ ಪಟ್ಟದೇವರು ಧೈರ್ಯ ಮಾಡಿ ಕನ್ನಡ ಶಾಲೆಯನ್ನು ಪ್ರಾರಂಭಿಸಿರುವುದು ಇತಿಹಾಸವೇ ಆಗಿದೆ.

ಹಿಂದುಳಿದ ಭಾಗವೆಂಬ ಪಟ್ಟಕಟ್ಟಿಕೊಂಡಿರುವ ಹೈದ್ರಾಬಾದ ಕರ್ನಾಟಕ ಭಾಗವು ಸಾಹಿತ್ಯದ ಮೂಲ ನೆಲೆಯು ಹೊಂದಿರುವ ನಾಡಾಗಿದೆ. ಕನ್ನಡದ ಮೊದಲ ಉಪಲಬ್ಧ ಕೃತಿಯಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಕವಿರಾಜ ಮಾರ್ಗ ಹಾಗೆಯೇ ಬೀದರ ಜಿಲ್ಲೆಯ ಹಳ್ಳಿಬೇಡದವನೆಂದು ಹೇಳಲಾಗುತ್ತಿರುವ ಬ್ರಾಜಿಷ್ಣು ರಚಿಸಿರುವ `ವಡ್ಡಾರಾಧನೆ` ಮೊದಲ ಗದ್ಯಕೃತಿ ಎಂದೆನಿಸಿದೆ. ಈ ಕೃತಿಗೆ `ಆರಾಧಾನ ಕರ್ನಾಟೀಕಾ` ಎಂಬ ಹೆಸರಿತ್ತೆಂದು ಡಾ. ಹಂಪಾನಾಗರಾಜಯ್ಯ ಅಭಿಪ್ರಾಯಪಟ್ಟಿದ್ದಾರೆ. ಆದರೆ ಇದೆ ಸಾಹಿತ್ಯ ಪರಂಪರೆ ಈ ಕ್ಷೇತ್ರದಲ್ಲಿ ಅಷ್ಟೊಂದು ಪ್ರಮಾಣದಲ್ಲಿ ಮುಂದುವರೆಯಲಿಲ್ಲ ಎಂಬುದು ನೋವಿನ ಮಾತಾಗಿದೆ. [1]ಯಾವುದೇ ಒಂದು ಭಾಷೆ ಉಳಿಯುವುದು ಆಯಾ ಭಾಷೆಯನ್ನಾಡುವ ಜನರಿಂದ, ಆಯಾ ಭಾಷೆಯಲ್ಲಿ ವಿಚಾರ ಮಾಡುವುದರಿಂದ, ಆಯಾ ಭಾಷೆಯ ಅರ್ಥವಂತಿಕೆಯ ಸಾಧ್ಯತೆಗಳನ್ನು ಅನ್ವೇಷಿಸುವುದರಿಂದ ಅದರ ಆಯಾಮವನ್ನು ವಿಸ್ತರಿಸುವ ಪ್ರಯೋಗ ಪರಿಣತಮತಿಗಳಿಂದ ನಡೆಯಬೇಕಾಗುತ್ತದೆ.

ಹನ್ನೆರಡನೆಯ ಶತಮಾನದ ಶಿವಶರಣರು ನಡೆದಾಡಿದ ಪುಣ್ಯ ನಾಡಾದ ಬೀದರ ಜಿಲ್ಲೆಯು ಐತಿಹಾಸಿಕ ಕ್ಷೇತ್ರವೇ ಹೌದು. ತಮ್ಮ ಸಾಹಿತ್ಯ ಪ್ರಕಾರವಾದ ವಚನಗಳ ಮೂಲಕ ವ್ಯಕ್ತಿ, ಸಮಾಜ, ತಿದ್ದುವುದರ ಮೂಲಕ ಮಾಡವ ಕೆಲಸಗಳಿಗೆ ಮನ್ನಣೆಯನ್ನು ದೊರಕಿಸಿಕೊಟ್ಟವರು, ಸ್ತ್ರೀಯರಿಗೆ ಸ್ವಾತಂತ್ರ್ಯವನ್ನು ನೀಡಿದ ಮೊದಲಿಗರು, ಸಮಾನತೆ ಸಾಧಿಸುವುದಕ್ಕೆ ಕಲ್ಯಾಣದ ಕ್ರಾಂತಿಗೂ ಸಿದ್ಧರಾದ ಶರಣರ ಸೇವೆ ಸಾವನ್ನು ಜಯಿಸಬಲ್ಲ ಅಮೃತಕ್ಕೆ ಸಾಮಾನವಾದದ್ದು. ೨೧ ಶತಮಾನದಲ್ಲಿಯು ಮಹಿಳೆಯರಿಗೆ ಸ್ವಾತಂತ್ರ್ಯವೆಂಬುದು ಕೈಗೆಟುಕದ ನಕ್ಷತ್ರದಂತಿರುವಾಗ ಶಿವಶರಣೆಯರು ಸ್ವಾತಂತ್ರ್ಯದ ಬದುಕು ನಡೆಸಿರುವುದು ವಚನಗಳಿಂದ ತಿಳಿದುಬರುತ್ತದೆ. ಅಂದು ಮಹಿಳೆಯರು ವ್ಯವಸ್ಥೆಯಿಂದ ಹೊರಬಂದು, ಅಸ್ತಿತ್ವದಲ್ಲಿದ್ದ ವ್ಯವಸ್ಥೆಯನ್ನು ವಿರೋಧಿಸಿ, ಪ್ರತಿಬಟಿಸಿ ಸ್ವಾತಂತ್ರ್ಯದ ಜೀವನ ನಡೆಸಿ ದೇಶ ಹಾಗೂ ಜಗತ್ತಿಗೆ ಆದರ್ಶವನ್ನು ಸಾರಬಲ್ಲ ಉನ್ನತ ಜೀವನ ನಡೆಸಿದ್ದಾರೆ.

[2]ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಹಿಂದೂಳಿದ ಭಾಗವೆಂದು ಗುರುತಿಸಲ್ಪಟ್ಟಿರುವ ಬೀದರ ಜಿಲ್ಲೆ ಇಂದಿಗೂ ಪ್ರಬುದ್ಧ ಸಾಹಿತ್ಯದ ಹುಡುಕಾಟದಲ್ಲಿದೆ ಹೈದ್ರಬಾದ ಕರ್ನಾಟಕದ ಇನ್ನೂಳಿದ ಜಿಲ್ಲೆಯ ಸಾಹಿತ್ಯದೊಂದಿಗೆ ಹೋಲಿಕೆಯಲ್ಲಿಯು ಹಿಂದುಳಿದಿದೆ. ಜಿಲ್ಲೆಯಲ್ಲಿ ಸಾಹಿತಿಗಳ ಸಂಖ್ಯೆಯೇ ಕಡಿಮೆ ಇರುವಾಗ ಮಹಿಳಾ ಸಾಹಿತಿಗಳ ಸಂಖ್ಯೆಯು ವಿರಳವೆಂದೆ ಹೇಳಬೇಕಾಗುತ್ತದೆ. ನಾಲ್ಕು ಗೋಡೆಗಳ ಮಧ್ಯೆದಲ್ಲಿಯೇ ಅಧೀನಳಾಗಿ ಪರತಂತ್ರ್ಯದ ಬದುಕು ನಡೆಸುತ್ತೀದ್ದ ಸ್ತ್ರೀಯರು ಅಪರೂಪಕ್ಕೆನ್ನುವಂತೆ ಮಹಿಳಾ ಸಾಹಿತಿಗಳು ಕಾಣಿಸಿಕೊಂಡಿದ್ದಾರೆ. ಮದುವೆಗೆ ಮೊದಲು ತಂದೆ, ತಾಯಿ, ಅಣ್ಣಂದಿರ ಅಧೀನದಲ್ಲಿ, ಮದುವೆಯಾದ ನಂತರ ಗಂಡನ ಮತ್ತು ಅತ್ತೆ ಮಾವಂದಿರ ಅಧಿನದಲ್ಲಿ ಬಾಳುವಾಗ ಅವಳಿಗೆ ಸ್ವಾತಂತ್ರ್ಯ ಎಂಬುದು ಸ್ವರ್ಗವೇ ಆಗುತ್ತಾ ಬಂದಿದೆ.

1. ವೈಚಾರಿಕ ಲೇಖನಗಳು -ಡಾ. ಶಾಂತಿನಾಥ ದಿಬ್ಬದ (ಸಂ.) ಪು.ಸಂ. 178
2. ಬೀದರ ಜಿಲ್ಲಾ ದರ್ಶನ -ಡಾ. ಸೋಮನಾಥ ಯಾಳವಾರ (ಸಂ.) ಪುಸಂ. 67

[3]ಚೀನಿ ಗಾದೆಯಂತೆ ಯಾವ ದೇಶದ ಅತ್ತೆಯಾದರೂ ಅತ್ತೆಯೆ ಹಾಗೆಯೇ ಯಾವ ದೇಶದ ಮಹಿಳೆಯಾದರೂ ಮಹಿಳೆಯೆ ಎನ್ನುವ ಹಿನ್ನಲೆಯಲ್ಲಿ ಬೀದರ ಜಿಲ್ಲೆಯ ಮಹಿಳೆಯರ ಸ್ಥಿತಿಗಳು ಇನ್ನುಳಿದ ಪ್ರದೇಶಗಳ ಮಹಿಳೆಯರಿಗಿಂತ ಭಿನ್ನವಾಗಿಲ್ಲವೆಂದು ಹೇಳಬಹುದು. ಪುರುಷ ಸಮಾಜ ಭಾರತೀಯ ಮಹಿಳೆಯರನ್ನು ಅತ್ಯಂತ ಹೀನಾಯವಾಗಿ ನಡೆಸಿಕೊಂಡಿದೆ. ಇದಕ್ಕೆ ಕಾರಣ ಅಂದಿನ ಮುಂದುವರಿದ ಸಾಮಾಜಿಕ ವ್ಯವಸ್ಥೆ. ಒಂದಿಲ್ಲ ಒಂದು ಕಾರಣದಿಂದ ಭಾರತದ ನಾರಿಗೆ ಕಿರುಕುಳ ಕೊಡುತ್ತಾ, ಶೋಷಿಸುತ್ತಾ, ಅಂದಿನಿಂದ ಇಂದಿನವರೆಗೂ ಪುರುಷ ಅವಳನ್ನು ತನ್ನ ಹಿಡಿತದಲ್ಲಿ ಇಟ್ಟಿಕೊಂಡೆ ಬಂದಿದ್ದಾನೆ. ಸ್ತ್ರೀಯ ಸ್ವಾತಂತ್ರ್ಯವನ್ನೇ ಕಸಿದುಕೊಂಡು ಮನುಸ್ಮೃತಿ ರಚನೆ ಮಾಡಿರುವುದು ಕಂಡುಬರುತ್ತದೆ.

ಹನ್ನೆರಡನೆ ಶತಮಾನದ ಶಿವಶರಣೆಯರ ಪ್ರೇರಣೆ ಹಾಗೂ ಪ್ರಭಾವಕ್ಕೆ ಒಳಗಾಗಿ ಅನೇಕ ಜನ ಮಹಿಳೆಯರು ಇಂದು ಸಾಹಿತ್ಯ ಕೃಷಿಗೆ ತೊಡಗಿರುವುದು ಸಂತಸದಾಯಕವಾಗಿದೆ. ಸ್ತ್ರೀಯರ ಶಕ್ತಿ ವೃದ್ಧಿಯಾಗಬೇಕೇ ಹೊರತು ಅದು ಕ್ಷೀಣಿಸಕೂಡದು ಎಂದು ಸ್ವಾಮಿ ವಿವೇಕಾನಂದರು ಹೇಳಿರುವಂತೆ ಮಹಿಳಾ ಸಾಹಿತ್ಯದ ಬೆಳವಣಿಗೆಗೆ ಬೆಂಬಲಿಸುವುದು ಉಚಿತವಾಗಿದೆ. ಯಶಸ್ವಿ ಪುರುಷನ ಹಿಂದೇ ಸ್ತ್ರೀಯು ಇರುವಂತೆ ಯಶಸ್ವಿ ಸ್ತ್ರೀಯ ಹಿಂದೇ ಪುರುಷನು ನಿಲ್ಲಬೇಕು. ಹೈದ್ರಾಬಾದ ಕರ್ನಾಟಕದ ಭಾಗವಾಗಿರುವ ಬೀದರ ಜಿಲ್ಲೆಯಲ್ಲಿ ಮಹಿಳಾ ಸಾಹಿತ್ಯವು ಪ್ರಬುದ್ಧವಾಗಿ ಬೆಳೆಯಬೇಕಾಗಿದ್ದು, ಮಹಿಳಾ ಸಾಹಿತಿಗಳು ಇತ್ತ ಗಮನಿಸಬೇಕಾಗಿರುವುದು ಅವಶ್ಯಕವಾಗಿದೆ. ಮಹಿಳಾ ಸಾಹಿತ್ಯ ಇಲ್ಲಿ ನೆಲೆಯುರುವುದರ ಜೊತೆಗೆ ವಿಪುಲವಾಗಿ ಬೆಳೆಯಬೇಕಾಗಿದೆ. ಸಂಘಟನೆಗಳು ಇಲ್ಲಿ ನಿಷ್ಠೆಯಿಂದ ಕಾರ್ಯನಿರ್ವಹಿಸುವುದು ಅಗತ್ಯವಾಗಿದೆ. ಕನ್ನಡದ ಸೇವೆಯ ಜೊತೆಗೆ ಸತ್ವಯುತವಾದ ಹಾಗೂ ಸಾಹಿತ್ಯದಲ್ಲಿ ಸಹಜವಾಗಿ ಮಣ್ಣಿನ ವಾಸನೆಯಿಂದ ಕೂಡಿರುವ ಸಾಹಿತ್ಯದ ರಚನೆಯಾಗಬೇಕಾಗಿದೆ.

ಸಾಹಿತಿಯಾದವನಿಗೆ ತನ್ನ ಪರಿಸರದಲ್ಲಿದ ಪರಂಪರಾಗತವಾದ ಸಾಹಿತ್ಯದ ಸತ್ವದಿಂದ ಪುಷ್ಟನಾಗದ ಹೊರತು ಅವನಿಂದ ನಿಜವಾದ ಸಾಹಿತ್ಯ ಸೃಷ್ಟಿ ಅಸಾಧ್ಯ. ಸಾಹಿತಿಯು ತನ್ನ ವರ್ತಮಾನದ ಕೇಂದ್ರ ಬಿಂದುವಿನಲ್ಲಿ ನಿಂತರು ಆತ ತಾನು ನಿಂತ ನೆಲೆಗೆ ಹಿನ್ನಲೆಯಾದ ಸಾಹಿತ್ಯ ಪರಂಪರೆಯನ್ನು ತನ್ನದಾಗಿಸಿಕೊಳ್ಳುವ ಜವಾಬ್ದಾರಿ ಪ್ರಮುಖವಾದುದು. ಕನ್ನಡ ಸಾಹಿತಿಯು ಕನ್ನಡಿಗರ ಆಶೆ ಆಕಾಂಕ್ಷೆಗಳನ್ನು, ಭಾವನೆಗಳನ್ನು ಅಭಿವ್ಯಕ್ತಿಸಬೇಕಾಗುತ್ತದೆ. ಕನ್ನಡ ನಾಡಿನ ಲೇಖಕ ತನ್ನ ಪರಿಸರ, ತನ್ನ ಸುತ್ತಣ ಜನರ ಬದುಕು, ತನ್ನ ಸಾಹಿತ್ಯ ಪರಂಪರೆ ಎಂಬ ವಿಶಾಲರ್ಥವುಳ್ಳವನ್ನಾಗಿ ಕನ್ನಡ ನಾಡಿನ ಮಣ್ಣಿನಲ್ಲಿ ಬೇರೂರಿದರೆ ಮಾತ್ರ ಅವರ ಸಾಹಿತ್ಯದಲ್ಲಿ ಸಹಜವಾಗಿ ಮಣ್ಣಿನ ವಾಸನೆ ಸಾಧ್ಯವಾಗುತ್ತದೆ.

3. ಬೀದರ ಜಿಲ್ಲಾ ದರ್ಶನ -ಡಾ. ಸೋಮನಾಥ ಯಾಳವಾರ (ಸಂ.) ಪುಸಂ. 67

ಕರ್ನಾಟಕ ರಾಜ್ಯದ ಮುಕುಟವಾಗಿರುವ ಬೀದರ ಜಿಲ್ಲೆಯಲ್ಲಿ ಬೇರೂರಿ ನೆಲೆನಿಂತಿರುವ ಮಹಿಳಾ ಸಾಹಿತ್ಯ ಆಮೆಗತಿಯಲ್ಲಿ ನಡೆಯುತ್ತಿದೆ. ಜಿಲ್ಲೆಯ ಅನೇಕ ಮಹಿಳಾ ಸಾಹಿತಿಗಳಾದ ಡಾ. ವಿಜಯಶ್ರೀ ಸಬರದ್, ಡಾ. ಪ್ರೇಮಾ ಶಿರ್ಸೆ, ಪ್ರೊ. ವಜ್ರಾ ಪಾಟೀಲ, ಡಾ. ನೀಲಾಂಬಿಕಾ ಪೋಲಿಸ್ ಪಾಟೀಲ್, ಮಲ್ಲಮ್ಮ. ಆರ್. ಪಾಟೀಲ್, ಕಲಾವತಿ ಬಿರದಾರ ಯಶೋದಮ್ಮ ಸಿದ್‌ಬಟ್ಟೆ, ಸುನೀತಾ ವಿ. ಬಿರಾದಾರ, ಡಾ. ಹೇಮಲತಾ ವಡ್ಡೆ, ಡಾ. ಶಿವಗಂಗ ರುಮ್ಮ, ಕಾವ್ಯಶ್ರೀ ಮಹಾಗಾಂವಕರ್, ಕನ್ಯಾಕುಮಾರಿ, ಲೀಲಾ ಪಾಟೀಲ ಮೊದಲಾದ ಮಹಿಳಾ ಸಾಹಿತಿಗಳು ನಮ್ಮಲ್ಲಿದ್ದಾರೆ. ಈ ಮಹಿಳಾ ಸಾಹಿತಿಗಳ ತಮ್ಮ ಸಾಹಿತ್ಯ ಕೃತಿಗಳ ಮೂಲಕ ಜಿಲ್ಲೆಯ ಹೆಸರು ಉನ್ನತ ಮಟ್ಟಕ್ಕೆ ಕೊಂಡೊಯ್ದಿದ್ದಾರೆ.

ಬೀದರ ಜಿಲ್ಲೆಯ ಮಹಿಳಾ ಸಾಹಿತಿಗಳಲ್ಲಿ ಒಬ್ಬರಾದ ಯಶೋಧಮ್ಮ ಸಿದ್‌ಬಟ್ಟೆ ಒಬ್ಬ ಸೃಜನಾತ್ಮಕ ಬರಹಗಾರರಾಗಿದ್ದು, ಅನೇಕ ಕೃತಿಗಳನ್ನು ಹೊರತಂದಿರುವುದಲ್ಲದೆ, ಇಲ್ಲಿಯವರೆಗೆ ಅನೇಕ ಪ್ರಶಸ್ತಿಗಳನ್ನು ಪಡೆದು ಹಲವಾರು ಗೌರವಗಳಿಗೆ ಪಾತ್ರರಾಗಿದ್ದಾರೆ. ಇತ್ತೀಚೆಗೆ ಇಹಲೋಕವನ್ನು ತೇಜಿಸಿರುವ ಇವರು ಮಹಿಳಾ ಸಾಹಿತ್ಯಕ್ಕೆ ಅಪಾರ ಸೇವೆ ಮಾಡಿದಲ್ಲದೆ, ಸಾಹಿತ್ಯ ಕೃಷಿಯು ಮಾಡಿದ್ದಾರೆ. ಸಂಶೋಧನಾ ವಿದ್ಯಾರ್ಥಿಯಾದ ನಾನು ನನ್ನ ಆಂಶಿಕ ಪದವಿಗಾಗಿ ಸಲ್ಲಿಸಬೇಕಾಗಿರುವ ನಿಬಂಧವನ್ನು ಯಶೋದಮ್ಮ ಸಿದ್‌ಬಟ್ಟೆ ಅವರ ಬದುಕು ಬರಹ ಕುರಿತು ಬರೆಯುವ ಅಪೇಕ್ಷೆ ವ್ಯಕ್ತಪಡಿಸಿದಾಗ ನನ್ನ ಮಾರ್ಗದರ್ಶಕರು ಸಂತೋಷದಿಂದ ಒಪ್ಪಿಕೊಂಡರು. ಹೀಗಾಗಿ ಯಶೋದಮ್ಮ ಸಿದ್‌ಬಟ್ಟೆ ಅವರ ಬದುಕು ಬರಹ ಕುರಿತು ಅಧ್ಯಯನ ಕೈಗೊಳ್ಳಲಾಯಿತು.

ನನ್ನ ಅಧ್ಯಯನ ಕುರಿತು ಮನದಟ್ಟು ಮಾಡಿಕೊಂಡಾಗ ಲೇಖಕರೊಬ್ಬರನ್ನು ಎದುರಿಗಿಟ್ಟುಕೊಂಡು ಅವರ ಕೃತಿಗಳ ವಿಮಾರ್ಶಾತ್ಮಕ ಅಧ್ಯಯನ ಮಾಡುವುದು ಕಷ್ಟ ಸಾಧ್ಯವೆಂದು ತಿಳಿಯಿತು. ಏಕೆಂದರೆ ಒಬ್ಬ ಲೇಖಕರ ಸಮಗ್ರ ಕೃತಿಗಳ ಅಧ್ಯಯನಕ್ಕೆ ತೊಡಗುವಾಗ ಆತನ ಜೀವನ ಚರಿತ್ರೆಯನ್ನು ತಿಳಿಯಬೇಕಾದುದು ಅತ್ಯವಶ್ಯಕವೆಂದು ಹೇಳಬೇಕು. ಏಕೆಂದರೆ ಸಂವೇದನಶೀಲ ಸಾಹಿತಿ ಅಥವಾ ಕಲಾವಿದ ಕೇವಲ ಒಬ್ಬ ವ್ಯಕ್ತಿಯಾಗಿರದೆ ತಾನು ಬದುಕುವ ಪ್ರದೇಶದ ಸಾಂಸ್ಕೃತಿಕ ಪ್ರತಿನಿಧಿಯಾಗಿರುತ್ತಾನೆ.

**ಮಹತ್ವ :**

ಸಾಹಿತಿಯ ಬದುಕು ಮತ್ತು ಬರಹ ಒಂದು ನಾಣ್ಯದ ಎರಡು ಮುಖಗಳಿದಂತೆ ಕನ್ನಡ ಹೆಮ್ಮೆಯ ಬರಹಗಾರರು ಹಾಗೂ ಬೀದರ ಜಿಲ್ಲೆಯ ಶ್ರೇಷ್ಠ ಸಾಹಿತಿಗಳು, ಮಹಿಳಾ ಸಂಘಟಕರಾಗಿರುವ ಶ್ರೀಮತಿ ಯಶೋದಮ್ಮ ಸಿದ್‌ಬಟ್ಟೆಯವರು ವೈವಿದ್ಯಮಯ ಸಾಹಿತಿಗಳು. ಅವರ ಬದುಕು ಬರಹಗಳೆರಡನ್ನು ಸಂಶೋಧನಾ ಅಧ್ಯಯನಕ್ಕೆ ಒಳಪಡಿಸುವದು ಅತ್ಯಂತ

ಮಹತ್ವದಾಗಿದೆ. ಅವರು ಸಾಹಿತ್ಯ ಕ್ಷೇತ್ರದಲ್ಲಿ ಬರೆಯಲು ಆರಂಭಿಸಿದಂದಿನಿಂದ ಇಂದಿನವರೆಗೂ ವೈವಿಧ್ಯಮಯವಾದ ಸಾಹಿತ್ಯ ರಚನೆಗೈದಿದ್ದಾರೆ. ಅವರು ಸಾಹಿತ್ಯ ಕ್ಷೇತ್ರದಲ್ಲಿ ವಿಹರಿಸಿದ ರೀತಿ ನೀತಿಯನ್ನು ಸರಿಯಾಗಿ ವಿವರಿಸುವ ಅರ್ಥೈಸುವ ಅಗತ್ಯವಿದೆ. ಆದ್ದರಿಂದ ಇವರ ಬರಹಗಳನ್ನು ಹತ್ತು ಹಲವು ದೃಷ್ಟಿಕೋನಗಳಿಂದ ಅಧ್ಯಯನಕ್ಕೆ ಒಳಪಡಿಸಿ, ವಿಮರ್ಶಾತ್ಮಕವಾಗಿ ವಿಶ್ಲೇಷಿಸುವ ಪ್ರಯತ್ನ ಈ ನಿಬಂಧದಲ್ಲಿ ಮಾಡಲಾಗಿದೆ.

ಮಲೆನಾಡಿನ ಮಗಳಾಗಿ ಜನಿಸಿ, ಧರಿನಾಡಿನ ಸೊಸೆಯಾಗಿ ಬೀದರ ಜಿಲ್ಲೆಗೆ ಪಾದಾರ್ಪಣೆ ಮಾಡಿ ಜಿಲ್ಲೆಯ ಜನತೆಯ ಮನಸ್ಸನ್ನು ಗೆದ್ದ ಯಶೋದಮ್ಮ ಸಿದ್‌ಬಟ್ಟೆ ಬಹುಮುಖ ಪ್ರತಿಭೆಯುಳ್ಳ ಜಿಲ್ಲೆಯ ಶ್ರೇಷ್ಠ ಸಾಹಿತಿ. ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕಿಯಾಗಿದ್ದ ಇವರು ಪದವಿ ಪೂರ್ವ ಕಾಲೇಜಿನ ಉಪನ್ಯಾಸಕಿಯಾಗಿ ನಿವೃತ್ತಿ ಹೊಂದಿದ್ದಾರೆ. ತಮ್ಮ ವೃತ್ತಿ ನೈಪುಣ್ಯತೆಯಿಂದಾಗಿ ಜಿಲ್ಲಾಮಟ್ಟದ, ರಾಜ್ಯ ಹಾಗೂ ರಾಷ್ಟ್ರಮಟ್ಟದ ಪ್ರಶಸ್ತಿಗಳನ್ನು ಕರ್ನಾಟಕ ಸರ್ಕಾರ ಹಾಗೂ ಭಾರತ ಸರ್ಕಾರದಿಂದ ಪಡೆದ ಪ್ರಥಮ ಮಹಿಳೆಯಾಗಿದ್ದಾರೆ. ಸಾಹಿತ್ಯ ಆಸಕ್ತರಾಗಿರುವ ಯಶೋದಮ್ಮ ಸಿದ್ದ್‌ಬಟ್ಟೆ ಕಥೆ, ಕವನ , ಹರಟೆ, ಕಾದಂಬರಿ, ಸಂಪಾದನೆಯಂತಹ ಸಾಹಿತ್ಯ ಸೇವೆ ಮಾಡಿದಲ್ಲದೆ ಸಾಮಾಜಿಕ ಸೇವೆ, ಕನ್ನಡ ಸೇವೆಯು ಮಾಡಿದ್ದವರು.

ಬೀದರನಲ್ಲಿ ಕರ್ನಾಟಕ ಮಹಿಳಾ ಲೇಖಕಿಯರ ಸಂಘ ಸ್ಥಾಪಿಸಿ ಮಹಿಳಾ ಸಾಹಿತ್ಯ ಬೆಳೆಯುವಲ್ಲಿ ಸಹಕರಿಸಿರುವವರು ಆಗಿದ್ದಾರೆ. ಸಾಹಿತಿಕ ಬರದ ಭಾಗವೆನಿಸಿರುವ ಬೀದರನಲ್ಲಿ ಮಹಿಳಾ ಬರಹಗಾರರ ಸ್ಥಿತಿ ಮತ್ತಷ್ಟು ಗಂಭೀರವಾಗಿರುವ ಸಂದಿಗ್ಧ ಪರಿಸ್ಥಿತಿಯಲ್ಲಿ ಸಾಹಿತ್ಯ ರಚನೆಗೈದಿರುವ ಯಶೋದಮ್ಮನವರನ್ನು ಬೀದರ ಜಿಲ್ಲೆಯ ಹಾರಕೂಡನಲ್ಲಿ ಜರುಗಿದ ೭ನೇ ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಪಡೆದವರು ಅಮೇರಿಕಾದ ಫ್ಲೋರಿಡಾ ರಾಜ್ಯದ ಆರ್ಲೆಂಡೊದಲ್ಲಿ ಜರುಗಿದ `ಅಕ್ಕ` ವಿಶ್ವ ಕನ್ನಡ ಸಮ್ಮೇಳನದ ಕವಿಗೋಷ್ಠಿಯಲ್ಲಿ ಕವನವಾಚನ ಮಾಡಿದ್ದಾರೆ. ಗುಲಬರ್ಗಾ ಆಕಾಶವಾಣಿ ಕೇಂದ್ರದಿಂದ ಚಿಂತನ ಹಾಗೂ ರೇಡಿಯೋ ಟಾಕಗಳ ಪ್ರಸಾರದಲ್ಲಿ ಭಾಗವಹಿಸಿದವರು. ಅಕ್ಬರ ನಾಟಕದಲ್ಲಿ ಜೋಧಾಬಾಯಿ ಪಾತ್ರ ನಿರ್ವಹಿಸಿದರು. ಹೀಗೆ ಬಹುಮುಖ ಪ್ರತಿಭೆಯ ಲೇಖಕಿ ಯಶೋದಮ್ಮ ಸಿದ್‌ಬಟ್ಟೆಯವರ ಬದುಕು-ಬರಹ ಪ್ರಬಂಧವು ಮಹಿಳಾ ಸಾಹಿತಿಗಳಲ್ಲಿ ಹೊಸ ಅಲೆಯು ಬೀಸಲಿದ್ದು ಇನ್ನಷ್ಟು ಮಹಿಳಾ ಲೇಖಕಿಯರನ್ನು ಸೃಷ್ಟಿಸುವಲ್ಲಿ ಪ್ರೇರಣೆ ನೀಡುತ್ತದೆ. ಪ್ರತಿಯೊಬ್ಬರ ಬರಹವು ವೈವಿಧ್ಯತೆಯಿಂದ ಕೂಡಿರುವುದರಿಂದ ಒಬ್ಬರು ಇನ್ನೊಬ್ಬರಿಗಿಂತ ಭಿನ್ನ ಹಾಗು ವಿಶಿಷ್ಟ ರೀತಿಯಲ್ಲಿ ಬರೆಯಬಲ್ಲರು. ಅವರ ಚಿಂತನೆ, ಕ್ರಿಯಾಶೀಲ ಬರಹದ ವಸ್ತು, ಭಾಷೆ ಮತ್ತು ಘಟನೆಗಳನ್ನು ಗಮನದಲ್ಲಿಟ್ಟುಕೊಂಡು ಲೇಖಕರ ಜೀವನದ ಅಧ್ಯಯನವಾಗಲಿದೆ. ಈ ದೃಷ್ಟಿಯಿಂದ ಯಶೋದಮ್ಮ ಸಿದ್‌ಬಟ್ಟೆ ಅವರ ಬದುಕು ಬರಹದ ಅಧ್ಯಯನ ಅತ್ಯಂತ ಮಹತ್ವದೆನ್ನಬಹುದು.

ಅಧ್ಯಾಯ : ಎರಡು

# ಲೇಖಕಿಯ ಜೀವನ ಮತ್ತು ಪರಿಸರ

- ಬಾಲ್ಯ ಜೀವನ
- ವೈವಾಹಿಕ ಮತ್ತು ವೃತ್ತಿ ಜೀವನ
- ಹವ್ಯಾಸಗಳು
- ವ್ಯಕ್ತಿತ್ವ

# ಅಧ್ಯಾಯ - ೨

# ಬಾಲ್ಯ ಜೀವನ ಮತ್ತು ಪರಿಸರ

ಕನ್ನಡ ಸಾಹಿತ್ಯ ಕೃಷಿಗೈದ ಸಾಹಿತಿಗಳ ಸಾಲಿನಲ್ಲಿ ನಿಲ್ಲಬಲ್ಲ ಶ್ರೀಮತಿ ಯಶೋದಮ್ಮ ಸಿದ್‌ಬಟ್ಟೆ ತಮ್ಮ ಪರಿಶುದ್ಧವಾದ ನಡೆ-ನುಡಿ, ಆಚರ - ವಿಚಾರಗಳಿಂದ, ವಿನಯ-ವಿವೇಕಗಳಿಂದ, ಬೀದರ ಜಿಲ್ಲೆಯ ಜನರ ಪ್ರೀತಿ ಗೌರವಗಳಿಗೆ ಭಾಜನರಾಗಿದ್ದಾರೆ. ಒಬ್ಬ ಕವಿ ಅಥವಾ ಲೇಖನ ಹಿನ್ನಲೆ ತಿಳಿಯಬೇಕಾದರೆ ಆತ ಹುಟ್ಟಿದ ಊರು, ತಂದೆ-ತಾಯಿ, ಸುತ್ತಮುತ್ತಲಿನ ಪರಿಸರ ಸಂಘ ಸಂಸ್ಥೆಗಳ ಬಗ್ಗೆ ತಿಳಿಯುವದು ಅವಶ್ಯಕ. ಕಾರಣ ಒಬ್ಬ ಸಾಹಿತಿ ಸೃಜನಶೀಲನಾಗಿ ಹೊರಹೊಮ್ಮಲು ಈ ವಿಷಯಗಳು ಮಹತ್ವ ಪಡೆಯುತ್ತವೆ. ಜಿಲ್ಲೆಯ ಆಧುನಿಕ ಸಾಹಿತಿಗಳ ಪಂಕ್ತಿಯಲ್ಲಿ ಪ್ರಮುಖರಾಗಿರುವ ಇವರು ಕಥೆ, ಕಾದಂಬರಿ, ಕವಿತೆಗಳು, ಹರಟೆ, ಮತ್ತು ವೈಚಾರಿಕ ಲೇಖನಗಳ ಬರಹಗಳಿಂದ ಖ್ಯಾತರಾಗಿದ್ದಾರೆ. ``ಕವಿಗಳು ಹುಟ್ಟುತ್ತಾರೆ ಅವರನ್ನು ಮಾಡಲ್ಪಡುವುದಿಲ್ಲ`` ಎನ್ನುವ ಮಾತಿಗೆ ನಿದರ್ಶನದಂತಿರುವ ಇವರು ಚಿಕ್ಕಂದಿನಿಂದಲೇ ಪ್ರತಿಭಾ ಶಕ್ತಿಯನ್ನು ಹೊಂದಿದ ಗಣ್ಯರಾಗಿದ್ದಾರೆ. [1]ಒರ್ವ ವ್ಯಕ್ತಿಯ ಬಾಳನ್ನು ಬಾಳುವದು ಬರಿ ಆ ವ್ಯಕ್ತಿಯಲ್ಲ. ಆ ವ್ಯಕ್ತಿಯೊಡನೆ ಅವನ ದೈವವು ಬಾಳುವದು ಎನ್ನುವಂತೆ ಪುಷ್ಪದ ಮರೆಯ ಪರಿಮಳದಂತೆ ಬಾಳಿ ಬದುಕಿ ನಮ್ಮಿಂದ ಅಗಲಿರುವ ಯಶೋದಮ್ಮನ್ನವರು ಬಾಳಿ ಬದುಕಿದ ಪರಿಸರ ಆದರ್ಶಮಯವಾಗಿದೆ.

## ೨.೧ ಬಾಲ್ಯ ಜೀವನ :

ಮಲೆನಾಡಿನ ಮಗಳಾಗಿ ಜನಿಸಿದ ಯಶೋದಮ್ಮ ಹುಟ್ಟಿದ್ದು ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ಸಮೀಪದ ಜಯಪುರದಲ್ಲಿ. ಶ್ರೀಮತಿ ಶಾರದಮ್ಮ ಮತ್ತು ಶಿವಾಚಾರ್ಯರ ಮುದ್ದಿನ ಮಗಳಾಗಿ ೮ ನೇ ಜೂನ ೧೯೪೩ ರಲ್ಲಿ ಜನಿಸಿದರು. ಆಗ ಅವರ ತಂದೆ ಶಿವಾಚಾರ್ಯರು ಮನೆ ಕಟ್ಟುವ ಗುತ್ತಿಗೆದಾರರಾಗಿ ಕಾರ್ಯನಿರ್ವಹಿಸುತ್ತಿದ್ದರು. ತಾಯಿ ಶಾರದಮ್ಮನವರು ಓದಿದ್ದು ಎಲ್.ಎಸ್. ಆದರೂ ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ದೈತ್ಯ ಪ್ರತಿಭೆ ಹೊಂದಿದವರು. ಹಳೆಗನ್ನಡದ ಮೇಲೆ ಅದ್ಭುತ ಹಿಡಿತ ಸಾಧಿಸಿದವರು ಹಾಗು ಗಮಕ ರಾಗವಾಗಿ ಹೇಳುವಾಗ ಕೇಳುವವರನ್ನು ಮಂತ್ರಮುಗ್ದರನ್ನಾಗಿ ಮಾಡುತ್ತಿದ್ದರು. ಶಬ್ದಮಣಿ ದರ್ಪಣ, ವ್ಯಾಕರಣ, ಮತ್ತು ಕಾವ್ಯಮೀಮಾಂಸೆ ಪಾಠಗಳನ್ನು ತುಂಬ ರಸವತ್ತಾಗಿ ಮಾಡುತ್ತಿದ್ದರು. ತಾಯಿಯ ಈ ಪ್ರತಿಭೆ ಯಶೋದಮ್ಮನವರ ಮೇಲೆ ಪ್ರಭಾವ ಆಗಿದ್ದು ಅಸಹಜವೇನಲ್ಲ.

ಪ್ರಾಥಮಿಕ ಶಿಕ್ಷಣ ಸಮೀಪದ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ಯಶೋದಮ್ಮನವರು ಮುಗಿಸಿ ಪ್ರೌಢ ಶಾಲೆಯಲ್ಲಿ ಪ್ರವೇಶ ಪಡೆದು ಶಿಕ್ಷಣ ಮುಂದುವರೆಸಿದರು. ಎಸ್.ಎಸ್.ಎಲ್.ಸಿ. ಯ ತರುವಾಯ ಮೈಸೂರಿನ ಸುತ್ತೂರು ಜಗದ್ಗುರುಗಳಾದ ಶ್ರೀ. ಶ್ರೀ. ಶ್ರೀ.

ಶಿವರಾತ್ರಿ ಶಿವಾಚಾರ್ಯರ ಮಹಾಸ್ವಾಮಿಗಳ ಆಶ್ರಯದಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿಯನ್ನು ಯಶಸ್ವಿಯಾಗಿ ಮುಗಿಸಿದರು. ಯಶೋದಮ್ಮನವರು ಓದಿದ್ದ ಪ್ರೌಢ ಶಾಲೆಗೆ ಕುವೆಂಪುರವರು ಒಮ್ಮೆ ಅತಿಥಿಯಾಗಿ ಆಗಮಿಸಿದಾಗ ಅವರ ನೃತ್ಯ ಪ್ರದರ್ಶನವನ್ನು ಕಂಡು ಚಕಿತಗೊಂಡು ಹೂಮಾಲೆ ಹಾಕಿ ಹರಿಸಿದರು. ತಾನು ಭರತನಾಟ್ಯ ಕಲಾವಿದೆಯಾಗಿ ಮೆರೆಯಬೇಕೆಂಬ ಆಸೆ ಆಗ ಅವರಲ್ಲಿ ಅಂಕುರಿಸಿತ್ತು. ತಮಗೆ ಬೇಕೆನಿಸುದ್ದುದನೆಲ್ಲಾ ತನ್ನದಾಗಿಸಿಕೊಳ್ಳಬೇಕೆಂಬ ಛಲ ಅವರಲ್ಲಿ ಸದಾ ಜಾಗರುತವಾಗಿರುತ್ತಿತ್ತು. ಕರ್ನಾಟಕ ಸಂಗೀತದ ಅಭ್ಯಾಸ ಮಾಡುವಾಗ ತಂದೆ ತಾಯಿಯರ ಮನವೊಲಿಸಿ ಭರತನಾಟ್ಯ ಕಲಿಯಲು ಬೆಂಗಳೂರಿಗೆ ಬಂದರು. ಬೆಂಗಳೂರಿನ ಕಲಾಕ್ಷೇತ್ರವೊಂದರಲ್ಲಿ ಪ್ರವೇಶ ಪಡೆದು ಉತ್ತಮ ನೃತ್ಯ ಕಲಾವಿದೆಯಾಗಿ ಹೊರಹೊಮ್ಮಿದಾಗ ನೂರಾರು ಪ್ರದರ್ಶನಗಳನ್ನು ನೀಡಿ ಜನಗಳ ಮೆಚ್ಚಿಗೆಗೆ ಪಾತ್ರರಾದರು.

### ೨.೨ ವೈವಾಹಿಕ ಮತ್ತು ವೃತ್ತಿ ಜೀವನ :

ಯಶೋದಮ್ಮನವರ ವೈವಾಹಿಕ ಮತ್ತು ವೃತ್ತಿ ಜೀವನ ಜೊತೆ ಜೊತೆಯಲ್ಲಿಯೇ ಸಾಗುತ್ತ ಬಂದಿತ್ತು. ಎಲ್ಲರ ಜೀವನದಲ್ಲಿ ವೈವಾಹಿಕ ಜೀವನ ಒಂದು ವಿಶಿಷ್ಟವಾದ ತಿರುವು ನೀಡುತ್ತದೆ. ಆ ಘಟನೆ ಯಶೋದಮ್ಮನವರ ಜೀವನದಲ್ಲೂ ನಡೆದು ಪರಿವರ್ತನೆಗೆ ನಾಂದಿಯಾಯಿತು. ಭರತನಾಟ್ಯದಲ್ಲಿ ಹೆಚ್ಚಿನ ಪರಿಣಿತಗಾಗಿ ತನ್ನ ಅಣ್ಣ ಚಂದ್ರಶೇಖರ ಅವರೊಂದಿಗೆ ಬೆಂಗಳೂರಿನಲ್ಲಿ ವಾಸಿಸುತ್ತಿದ್ದಾಗ ಖ್ಯಾತ ಶಿಕ್ಷಕ ಧುರೀಣರೆನಿಸಿದ ಬೀದರಿನ ಬಿ.ಜಿ.ಸಿದ್‌ಬಟ್ಟೆಯವರ ಪರಿಚಯವಾಯಿತು. ಶ್ರೀ ಸಿದ್‌ಬಟ್ಟೆರವರು ಚಂದ್ರಶೇಖರ ರವರ ಆತ್ಮೀಯ ಸ್ನೇಹಿತರಾಗಿದ್ದರು. ಯೋಶದಮ್ಮ ಮತ್ತು ಸಿದ್‌ಬಟ್ಟೆಯವರ ಪರಿಚಯು ಸ್ನೇಹದಲ್ಲಿ ಪರಿವರ್ತನೆಯಾಗಿ ಒಡನಾಟ ಸಹಜವಾಗಿಯೇ ಹೆಚ್ಚಿತ್ತು. ಸಿದ್‌ಬಟ್ಟೆಯವರು ಪ್ರಶಿಕ್ಷಣಾರ್ಥಿ ಎಂದು ಅರಿತಾಗ ಸ್ನೇಹ ಸಂಪರ್ಕ ಆತ್ಮೀಯಗೊಂಡಿತು. ಕಲೆ , ಸಾಹಿತ್ಯ ಸಂಸ್ಕೃತಿಯ ಆರಾಧಕರಾಗಿರುವ ಸಿದ್‌ಬಟ್ಟೆಯವರು ಹುಟ್ಟು ಹೋರಾಟಗಾರರಾಗಿದ್ದರು. ಶಿಕ್ಷಕ ವೃತ್ತಿಯಲ್ಲಿದ್ದ ಅವರು ಶಿಕ್ಷಕ, ಸಂಘಟನೆಯ ಜೀವಾಳವಾಗಿದ್ದರು. ಅವರ ಶೀಲ, ಸ್ವಭಾವ ಹಾಗು ನಿತ್ಯದ ಚಟುವಟಿಕೆಗಳಿಂದ ಅತ್ಯಾಧಿಕ ಪ್ರಭಾವಿತರಾಗಿದ್ದ ಯಶೋದಮ್ಮನವರು ಅವರೊಂದಿಗೆ ಆತ್ಮೀಯವಾಗಿ ಸ್ಪಂದಿಸತೊಡಗಿದರು. ಹೀಗೆ ಅಂಕುರಿಸಿದ ಪ್ರೀತಿ , ಅನುಬಂಧ ವಿವಾಹದಲ್ಲಿ ಪರ್ಯಾವಸನಗೊಂಡು ೧೯೬೮ ರ ಬಸವ ಜಯಂತಿಯ ದಿನ ಮಲೆನಾಡಿನ ಮಗಳಾಗಿದ್ದ ಯಶೋದಮ್ಮ ಧರಿನಾಡಿನ ಸೊಸೆಯಾಗಿ ಸಿದ್‌ಬಟ್ಟೆಯವರ ಮನೆ, ಮನ ತುಂಬಿ ಬೀದರಿಗೆ ಬೆಳಕಾದರು. ತನ್ನಲ್ಲಿ ಅಡಗಿರುವ ಕಲೆ , ಸಾಹಿತ್ಯ ಸಂಸ್ಕೃತಿಯ ಆರಾಧಕರಾಗಿ ಅಪಾರವಾದ ಸಾಧನೆಗಳ್ನು ಗೈದು ರಾಜ್ಯ ಹಾಗು ರಾಷ್ಟ್ರ ಪ್ರಶಸ್ತಿಗಳನ್ನು ತಮ್ಮದಾಗಿಸಿಕೊಂಡು ರಾಜ್ಯಾದ್ಯಂತ ಹೆಸರು ಮಾಡಿದರು.

ಯಶೋದಮ್ಮನವರು ಬೀದರಿಗೆ ಬಂದಾಗ ಇಲ್ಲಿ ಕನ್ನಡ ಸ್ಥಿತಿ ಅತ್ಯಂತ ಗಂಭೀರವಾಗಿತ್ತು. ಗಡಿಯಲ್ಲಿ ಕನ್ನಡದ ಸ್ಥಿತಿ ಕಂಡು ಮಮ್ಮೂಲ ಮರುಗಿ. ಪತಿಯ ಸಮ್ಮುಖದಲ್ಲಿ ಆಡಿಯೇ ತೋರಿಸಿದರು. ಅವರ ಅಂತಃಕರಣದ ಅಭಿಲಾಷೆಗೆ ಆತ್ಮೀಯವಾಗಿ ಸ್ಪಂದಿಸಿದ ಸಿದ್‌ಬಟ್ಟೆಯವರು ಅದಕ್ಕಾಗಿ ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸಲು ಮುಂದಾದರು. ತಾವು ರೂಪಿಸಿದ ಯೋಜನೆಯನ್ವಯ ಔರಾದ ದಿಂದ ಬೀದರಿಗೆ ಬಂದು ನೆಲೆಸಿ ತಮ್ಮ ಆರ್ಥಿಕ ಭದ್ರತೆಗಾಗಿ ಧರ್ಮಪತ್ನಿಯನ್ನು ಶಿಕ್ಷಕ ವೃತ್ತಿಯಲ್ಲಿ ಸೇರಿಸಲು ಮುಂದಾಗಿ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಶಾಲಾ ಶಿಕ್ಷಕರ ಹುದ್ದೆಗೆ ವಿಜ್ಞಾಪನೆ ನೀಡಿದಾಗ ಶಿಕ್ಷಕ ಅಭ್ಯರ್ಥಿಯಾಗಿ ಸಂದರ್ಶನಕ್ಕೆ ಹಾಜರಾಗಿ ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಯನ್ನು ಅಲಂಕರಿಸಿದರು. ಗ್ರಹಸ್ಥ ಜೀವನದೊಂದಿಗೆ ವೃತ್ತಿ ಜೀವನವನ್ನು ಆರಂಭಿಸಿದರು. ಸರಕಾರಿ ಎನ್.ಟಿ.ಎಂ.ಎಸ್. ಮಂಗಲಪೇಟ ಶಾಲೆ ಅವರ ಬದುಕಿನ ಹಲವಾರು ಘಟನೆಗಳಿಗೆ ಸಾಕ್ಷಿಯಾಯಿತು. ಅಲ್ಲಿಂದ ಆರಂಭಗೊಂಡ ಅವರ ಚೈತ್ರ ಯಾತ್ರೆ ಅವರ ಜೀವನದ ಕೊನೆಯ ಉಸಿರನವರೆಗೂ ನಿರಂತರವಾಗಿ ಹರಿದುಬಂದಿತ್ತು.

ಕೆಲಸಕ್ಕೆ ಸೇರಿದ ಆರಂಭದ ದಿನಗಳಲ್ಲಿ ಬೆಂಗಳೂರು ಟೀಚರ ಎಂದೇ ಖ್ಯಾತರಾಗಿದ್ದ ಯಶೋದಮ್ಮನವರು ಶಾಲಾ ಮಕ್ಕಳ ಪಾಲಿಗೆ ಹೆತ್ತ ತಾಯಿ ತಂದೆಯಂತಾಗಿದ್ದರು. ಅವರು ಕನ್ನಡ ಭಾಷಾ ಬೋಧನೆಗೆ ಆರಂಭಿಸಿದರೆ ವಿದ್ಯಾರ್ಥಿಗಳು ಮೈಮರೆತು ಆಲಿಸುತ್ತಿದ್ದರು. ಮಕ್ಕಳ ಹಾಜರಾತಿ ವೃದ್ಧಿಸಿತ್ತು. ಶಾಲೆಯ ಸಾಂಸ್ಕೃತಿಕ ವಿಭಾಗದ ಸಮೃದ್ಧಗೊಳಿಸಿ ವಿಭಾಗ ಮಟ್ಟದ ಪೈಪೋಟಿಯಲ್ಲಿ ಪ್ರಥಮ ಪಾರಿತೋಷಕ ತಮ್ಮ ಶಾಲೆಗೆ ದಕ್ಕುವಂತೆ ಮಾಡಿದರು. ಆ ಸಾಲಿನ ಕಡ್ಡಾಯ ಶಿಕ್ಷಣ ಯೋಜನೆಯ ಜಿಲ್ಲಾ ಮಟ್ಟದ ಪ್ರಶಸ್ತಿ ತಾವೇ ಭಾಜನರಾಗಿ ತಮ್ಮ ಶಾಲೆ ಹಾಗೂ ಜಿಲ್ಲೆಗೆ ಕೀರ್ತಿ ತಂದರು.

ಪತಿ ಬಿ.ಜಿ. ಸಿದ್‌ಬಟ್ಟೆಯವರು ಉನ್ನತ ವ್ಯಾಸಾಂಗಕ್ಕಾಗಿ ಮೈಸೂರಿಗೆ ನಿಯೋಜಿಸಲ್ಪಟ್ಟಾಗ ಒಬ್ಬಂಟಿಗರಾದ ಯಶೋದಮ್ಮನವರು ಆಗ ಬೀದರನಲ್ಲಿ ಅಕ್ಕಮಹಾದೇವಿ ಮಹಿಳಾ ಮಹಾವಿದ್ಯಾಲಯ ಆರಂಭಗೊಂಡಿತು. ಯಶೋದಮ್ಮನವರು ಪಿ.ಯು.ಸಿ. ಪ್ರಥಮ ವರ್ಷದ ವಿದ್ಯಾರ್ಥಿನಿಯಾಗಿ ಮತ್ತೆ ಓದನ್ನು ಪ್ರಾರಂಭಿಸಿದರು. ಕಾಲೇಜಿನ ಶಿಕ್ಷಣದ ಸಂದರ್ಭದಲ್ಲಿ ಸಾಂಸ್ಕೃತಿಕ ವಿಭಾಗದಲ್ಲಿ ಆಸಕ್ತಿಯಿಂದ ಕಾರ್ಯನಿರ್ವಹಿಸಿ ಕಾಲೇಜಿಗೆ ಒಳ್ಳೆಯ ಹೆಸರು ಬರಲು ಕಾರಣರಾದರು. ಪಿ.ಯು.ಸಿ. ಯಲ್ಲಿ ಉತ್ತೀರ್ಣರಾಗಿ ಮೈಸೂರಿಗೆ ವರ್ಗಾಯಿಸಿಕೊಂಡರು. ನಂತರ ಬಿ.ಎ. ಪದವಿಧರೆಯಾದ ಯಶೋದಮ್ಮನವರು ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆಯಬೇಕೆಂಬ ಅಪೇಕ್ಷೆ ತಮ್ಮ ಪತಿಯ ಸಮ್ಮುಖದಲ್ಲಿ ವ್ಯಕ್ತಪಡಿಸಿದಾಗ ಸೂಕ್ತ ಸೌಲಭ್ಯಗಳನ್ನು

ಒದಗಿಸಿ ಹೆಂಡತಿಗೆ ನೆರವಾದರು. ಎಂ.ಎ. ಉತ್ತೀರ್ಣರಾದಾಗ ಅವರ ಇಡೀ ಕುರುಂಬದ ಪರಿಸರ, ಬಂಧು ಬಳಗ ಸಂತಸ ಪಟ್ಟು ತಮ್ಮ ಸೊಸೆಯನ್ನು ಹಾಡಿ ಹೊಗಳಿದರು.

ಈ ಮಧ್ಯೆ ಯಶೋದಮ್ಮನವರು ಆರತಿಗೊಬ್ಬ ಮಗಳು ಕೀರ್ತಿಗೊಬ್ಬ ಮಗ ಎಂಬಂತೆ ಇಬ್ಬರು ಕಂದಮ್ಮಗಳಿಗೆ ಜನ್ಮ ನೀಡಿ ತಾಯಿ ಎನಿಸಿದರು. ಮಗಳು ಕಾವ್ಯಶ್ರೀ ಎಲೆಕ್ಟ್ರಾನಿಕ್ ಆಂಡ್ ಟೆಲಿ ಕಮ್ಯುನಿಕೇಷನ್ ವಿಭಾಗದಲ್ಲಿ ಡಿಪ್ಲೋಮಾ ಇಂಜನಿಯರಿಂಗ ಜೊತೆಗೆ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಬಿ.ಎ. ಪದವಿಧರೆ. ಮದುವೆಯಾಗಿ ಮಕ್ಕಳನ್ನು ಹೆತ್ತು ತಾಯಿ ಪಟ್ಟ ಗಿಟ್ಟಿಸಿಕೊಂಡಿರುವ ಇವರು ಪತಿ ಸುರೇಶ ಮಹಾಗಾಂವಕರರೊಂದಿಗೆ ಗುಲಬರ್ಗಾದಲ್ಲಿ ಸುಖದ ಜೀವನ ಸಾಗಿಸುತ್ತಿದ್ದಾರೆ. ಪ್ರವೃತ್ತಿಯಲ್ಲಿ ಸಾಹಿತಿಗಳಾಗಿರುವ ಕಾವ್ಯಶ್ರೀ ಕನ್ನಡದಲ್ಲಿ ಕಾವ್ಯ , ಕಥೆ, ಕಾದಂಬರಿಗಳನ್ನು ಬರೆದು ವಾಚಕ ವೃಂದವನ್ನು ರಂಜಿಸಿದ್ದಾರೆ.

ಮಗ ಕಾವ್ಯಾನಂದ ಅಕ್ಕಳಂತೆ ಪ್ರತಿಭಾವಂತ. ಆರಂಭದಿಂದಲೂ ಅಗ್ರ ಶ್ರೇಣಿಯ ವಿದ್ಯಾರ್ಥಿ. ಎಲೆಕ್ಟ್ರಾನಿಕ್ ವಿಭಾಗದಲ್ಲಿ ಬಿ.ಇ. ಪದವಿಧರರಾಗಿದ್ದು, ಕಂಪ್ಯೂಟರ ಸಾಫ್ಟವೇರ ವಿಭಾಗದಲ್ಲಿ ವಿಶೇಷ ಪರಿಣಿತಿ ಪಡೆದು ಬೆಂಗಳೂರಿನ ಇಸ್ರೋದಲ್ಲಿ ವಿಜ್ಞಾನಿಯಾಗಿ ಆರಂಭದಲ್ಲಿ ಸೇವೆ ಸಲ್ಲಿಸಿದ ಯುವಕ ತರುವಾಯ ಅಮೇರಿಕಾದ ಚಿಪ್ಸ್ ತಯಾರಿಸುವ ಕಂಪನಿಯೊಂದರಲ್ಲಿ ಸಾಫ್ಟವೇರ ಇಂಜನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸೋಲಾಪುರದ ದೇಗಾಂವ ಗೌಡರ ಮಗಳಾದ ಶ್ವೇತಾಳೊಂದಿಗೆ ವಿವಾಹವಾಗಿ ಕ್ಯಾಲಿಫೋರ್ನಿಯಾದ ಸ್ಯಾನಹೋಸಿ ನಗರದ ಸಿಲಿಕಾನ್ ವ್ಯಾಲಿಯಲ್ಲಿ ಗ್ರಹಸ್ಥ ಜೀವನವನ್ನು ಸಾಗಿಸುತ್ತಿದ್ದಾರೆ. ಒಂದು ಗಂಡು ಮತ್ತು ಒಂದು ಹೆಣ್ಣು ಮಗುವಿನ ತಂದೆ ತಾಯಿಗಳಾದ ಇವರು ಹಾಲು ಸಕ್ಕರೆಯಂತೆ ಬೆರೆತು ಬಾಳುತ್ತಿದ್ದಾರೆ.

ಯಶೋದಮ್ಮನವರು ಪ್ರಾಥಮಿಕ ಶಿಕ್ಷಕರಾಗಿ ೧೯೬೮ ರಲ್ಲಿ ವೃತ್ತಿಯನ್ನು ಆರಂಭಿಸಿ ೧೯೮೨ ರಲ್ಲಿ ಪ್ರೌಢ ಶಾಲಾ ಭಾಷಾ ಬೋದಕರಾಗಿ ಚಿಕ್ಕಮಂಗಳೂರಿನ ಮೂಡಗೇರೆ ಕನ್ಯಾ ಪ್ರೌಢ ಶಾಲೆಗೆ ವರ್ಗವಾದರು. ಮತ್ತೆ ೧೯೮೩ ರಲ್ಲಿ ಮೂಡಗೇರೆಯಿಂದ ಬೀದರಿಗೆ ವರ್ಗವಾಗಿ ಕನ್ಯಾ ಪ್ರೌಢ ಶಾಲೆಯಲ್ಲಿ ಸೇವೆ ಸಲ್ಲಿಸಿ ಪದವಿಪೂರ್ವ ಕಾಲೇಜ ಉಪನ್ಯಾಸಕಿಯಾಗಿ ಪದೋನ್ನತಿ ಹೊಂದಿ ೨೦೦೪ ರ ವರೆಗೆ ಸೇವೆ ಸಲ್ಲಿಸಿ ಇಲ್ಲಿಯೇ ನಿವೃತ್ತರಾದರು. ಎಲ್ಲಿಂದ ವೃತ್ತಿ ಜೀವನ ಆರಂಭವಾಗಿತ್ತೋ ಅಲ್ಲಿಯೇ ವೃತ್ತಿ ಜೀವನದ ಅಂತವು ಆಗಿರುವ ಗೌರವ ಬಹಳ ಕಡಿಮೆ ಜನರಿಗೆ ಲಭಿಸುತ್ತದೆ. ಅಚ್ಚುಕಟ್ಟುತನದ ಬದುಕಿನ ಯಶೋದಮ್ಮ ನಿವೃತ್ತಿಯ ನಂತರ ಸಾಹಿತ್ಯ ಕ್ಷೇತ್ರದತ್ತ ಒಲವು ಹರಿಸಿ ಅವಿರತವಾಗಿ ದುಡಿದು ಕರ್ನಾಟಕ ಲೇಖಕಿಯರ ಸಂಘವನ್ನು ಕಟ್ಟಿ ಸಾಹಿತ್ಯ ರಚನೆಯಲ್ಲಿ ನಿರತರಾಗಿ ಸಾಹಿತ್ಯ ಬದುಕನ್ನು ಸಾಗಿಸುತ್ತಾ ೧೭-೩-೨೦೦೮ ರಂದು ಹೃದಯಘಾತಕ್ಕೆ ತುತ್ತಾಗಿ ಇಹಲೋಕದ ಯಾತ್ರೆ ಮುಗಿಸಿದರು.

ಒಟ್ಟಾರೆ ಹೇಳುವುದಾದರೆ ಯಶೋದಮ್ಮನವರ ಕೌಟಂಬಿಕ ಜೀವನ ಅರ್ಥಪೂರ್ಣ ಮತ್ತು ಯಶಸ್ಸಿನ ತುಟ್ಟ ತುದಿಗೆ ಮುಟ್ಟಿದ ಸಾರ್ಥಕ ಜೀವನವೆಂದೆ ಅಭಿಪ್ರಾಯ ಪಡಬೇಕಾಗಿದೆ.

### ೨.೩ ಹವ್ಯಾಸ :

ಸಾಹಿತ್ಯ ಮತ್ತು ಸಂಸ್ಕೃತಿ ಮತ್ತು ಕಲೆಗಳಲ್ಲಿ ನಿಷ್ಠೆ ಹೊಂದಿದ ಯಶೋದಮ್ಮನವರು ವಸ್ತುಶ ಭರತನಾಟ್ಯ ಕಲಾವಿದೆ, ತಾನೊಬ್ಬ ಭರತನಾಟ್ಯ ಕಲಾವಿದೆಯಾಗಿ ಮೆರೆಯಬೇಕೆಂಬ ಹೆಬ್ಬಯಕೆ ಅವರದಾಗಿತ್ತು. ಪತಿ ಗೃಹದ ಸುತ್ತಲಿನ ಪರಿಸರ ಅದಕ್ಕೆ ಅವಕಾಶ ಕಲ್ಪಿಸದ ಪ್ರಯುಕ್ತ ಅವರು ತಮ್ಮ ಆಸಕ್ತಿ ಹವ್ಯಾಸಗಳಿಗೆ ಮರು ತಿರುವು ನೀಡಬೇಕಾಯಿತು. ಸಾಂಸ್ಕೃತಿಕ ಕ್ಷೇತ್ರದಿಂದ ಸಾಹಿತ್ಯ ಕ್ಷೇತ್ರಕ್ಕೆ ಕಾಲಿರಿಸಿ ಸಾಹಿತ್ಯ ರಚನೆಗೆ ಸ್ಪಂದಿಸ ತೊಡಗಿದರು. ಉತ್ತರ ಕರ್ನಾಟಕ ಪತ್ರಿಕೆಯಲ್ಲಿ ಕಥೆ, ಕವನ , ಪ್ರಬಂಧ, ಹರಟೆಗಳನ್ನು ಬರೆಯಲು ಆರಂಭಿಸದರು.

ಓದುವದು ಯಶೋದಮ್ಮನವರಿಗೆ ಮುಖ್ಯವಾದ ಹವ್ಯಾಸ. ಕನ್ನಡ ದಿನಪತ್ರಿಕೆಗಳಾದ ಪ್ರಜಾವಾಣಿ, ವಿಜಯಕರ್ನಾಟಕ , ಹಾಗೂ ಈ ಪತ್ರಿಕೆಯಲ್ಲಿ ಬರುವ ಮಹಿಳೆಯರಿಗೆ ಸಂಬಂಧಿಸಿದ ವಿಶೇಷ ಪುರವಣಿ ಹಾಗು ಸಾಪ್ತಾಹಿಕ ಪುರವಣಿ ತಪ್ಪದೇ ಓದುತ್ತಿದ್ದರು. ವಾರ ಪತ್ರಿಕೆಗಳಾದ ಸುಧಾ, ತರಂಗ, ಮಂಜುವಾಣಿ, ಸ್ತ್ರೀ ಜಾಗೃತಿ, ಮಹಿಳಾ ಜಾಗೃತಿ, ಸಾಹಿತ್ಯ ಪತ್ರಿಕೆಗಳಾದ ಕನ್ನಡ ನುಡಿ, ಸಾಹಿತ್ಯ ಅಕಾಡೆಮಿಕ ಪತ್ರಿಕೆಗಳು, ಧಾರ್ಮಿಕ ಪತ್ರಿಕೆಗಳಾದ ಮಂಜೂವಾಣಿಯಲ್ಲಿ ಪ್ರಕಟವಾಗುವ ಚಿಂತನಗಳು ತಪ್ಪದೇ ಓದುತ್ತಿದ್ದರು. ಅಂಕಣ ಬರಹ, ಅವರ ಓದಿನ ಅಚ್ಚು ಮೆಚ್ಚಿನ ವಿಷಯ. ದೂರದರ್ಶನದಲ್ಲಿ ಕನ್ನಡ ವಾರ್ತೆ, ವಚನಾಮೃತ, ಬೆಳಗು ಕಾರ್ಯಕ್ರಮ ತಪ್ಪದೇ ವೀಕ್ಷಿಸುತ್ತಿದ್ದರು.

### ೨.೪ ವ್ಯಕ್ತಿತ್ವ :

ಸರಳ ಜೀವನ ಉನ್ನತ ಚಿಂತನೆ ಇಂತಹ ವ್ಯಕ್ತಿತ್ವ ಇವರದಾಗಿತ್ತು. ತಾವು ಮೆಚ್ಚಿದನ್ನು ಉಪ್ಪಿನಕಾಯಿಯಂತೆ ರುಚಿ ರುಚಿಯಾಗಿ ಮಂಡಿಸಬಲ್ಲ ಅವರು ಒಪ್ಪದುದ್ದನ್ನು ಖಾರವಾಗಿ ಟೀಕಿಸುವ ಸ್ವಭಾವದವರು. ಹೀಗೆ ನಿರ್ಭಡೆಯ ವಿಮರ್ಶಕರಾದ ಇವರು ಕಟು ವಿಮರ್ಶೆಯನ್ನು ಅಭಿವ್ಯಕ್ತಿಸುವ ಸಾಮರ್ಥ್ಯ ಹೊಂದಿದ್ದಾರೆ. ವಿದ್ಯಾರ್ಥಿ ಶಿಕ್ಷಕರುಗಳ ಪ್ರೀತಿ ಆದರಗಳಿಗೆ ಪಾತ್ರರಾದ ಇವರು ವೈವಿದ್ಯಮಯ ವ್ಯಕ್ತಿತ್ವ ವೆಂದು ಕರ್ನಾಟಕ ಸರಕಾರದ ಸಾರ್ವಜನಿಕ ಶಿಕ್ಷಣ ಇಲಾಖೆ ಅಭಿಪ್ರಾಯಪಟ್ಟಿದೆ. ಶ್ರೀಮತಿ ಯಶೋದಮ್ಮನವರು ಆದರ್ಶ ಜೀವನ ಶೈಲಿ ಅದ್ಭುತ ಕ್ರೀಯಾಶೀಲತೆ ಹಾಗೂ ಪ್ರಾಮಾಣಿಕತೆಗಳನ್ನು ಮೈದೂಳಿಸಿಕೊಂಡಿರುವ ಪ್ರಭುದ್ಧ ವ್ಯಕ್ತಿತ್ವದವರೆಂದು ಅಖಿಲ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಶ್ರೀಮತಿ ಸಂಧ್ಯಾರೆಡ್ಡಿ ಅಭಿಪ್ರಾಯಪಟ್ಟಿದ್ದಾರೆ.

ತಾವು ಕಾರ್ಯನಿರ್ವಹಿಸಿದ ಎಲ್ಲಾ ಶಾಲಾ ಕಾಲೇಜಿನ ಶಿಕ್ಷಕರು ಮತ್ತು ಉಪನ್ಯಾಸಕರು, ವಿದ್ಯಾರ್ಥಿಗಳು ಇವರಿಂದ ಪ್ರಭಾವಿತರಾಗಿದ್ದರು. ಅವರನ್ನು ಕೂಡ ಅಷ್ಟೇ ಗೌರವದಿಂದ

ಕಾಣುತ್ತಿದ್ದರು ಯಶೋದಮ್ಮನವರು. ವರ್ಗದಲ್ಲಿ ತೀರ ಬಡ ಕುಟುಂಬದ ವಿದ್ಯಾರ್ಥಿಗೆ ಬಟ್ಟೆ, ಪುಸ್ತಕದ ನೆರವು ನೀಡುವ ಉದಾರಿಗಳು, ಮನೆಗೆ ಬಂದ ಬೀಕ್ಷುಕನಿಗೆ ಇರುವ ಊಟ ಕೊಡುತ್ತಿದ್ದು ಏನು ಇಲ್ಲದಿದ್ದಾಗ ಹಣ ಕೊಟ್ಟು ಕಳುಹಿಸುತ್ತಿದ್ದರು. ತಮ್ಮ ಮನೆಗೆ ಬಂದ ಅತಿಥಿಗಳಿಗೆ ಆತಿಥ್ಯ ನೀಡದೆ ಯಾರಿಗೂ ಬಿಡುತ್ತಿರಲಿಲ್ಲ. ಯಾರ ಮನಸ್ಸಿಗೂ ನೋವಾಗದ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು. ಸಮವಯಸ್ಕರರನ್ನು `ಬ್ರದರ್`, ಎಂದು ಹಿರಿಯರಾದ ಮಹಿಳೆಯರಿಗೆ `ಅಕ್ಕ` ಎಂದು ಸಂಬೋಧಿಸುತ್ತಿದ್ದರು.

ಸರಳ ಸಜ್ಜನಿಕೆಯ ಆಕರ್ಷಕ ವ್ಯಕ್ತಿತ್ವದ ಯಶೋದಮ್ಮನವರು ನೇರವಾದ ನಡೆ ನುಡಿ ಮೂಲಕ ಜಿಲ್ಲೆಯ ಜನತೆಯ ಮನ ಗೆದ್ದಿದ್ದಾರೆ. ತಮ್ಮ ಬದುಕಿಗೆ ಪೂರ್ಣವಿರಾಮ ನೀಡಿದರೂ ಜಿಲ್ಲೆಯ ಸಹೃದಯ, ರಸಿಕರ ಮನಸ್ಸಿನಿಂದ ದೂರವಾಗದೆ ಇರುವ ಇವರು ವಿಶಿಷ್ಟ ವ್ಯಕ್ತಿತ್ವದ ಮಹಿಳಾ ಸಾಹಿತಿ ಎನಿಸಿದಾರೆ.

ಅಧ್ಯಾಯ ៖ ಮೂರು

# ಸಾಹಿತ್ಯ ಸೇವೆ

- ಕಾದಂಬರಿಗಳು
- ಸಣ್ಣ ಕಥೆಗಳು
- ಕವನಗಳು
- ಸಂಪಾದನೆ
- ಸೃಜನ ಸಾಹಿತ್ಯ
- ಇತರೆ ಸಾಹಿತ್ಯ

ಅಧ್ಯಾಯ-೩

# ಸಾಹಿತ್ಯ ಸೇವೆ

ಕನ್ನಡ ಸಾಹಿತ್ಯ ಲೋಕವನ್ನು ಕೃಷಿಗೈದಿರುವ ಸಾಹಿತಿಗಳಾದ ಯಶೋದಮ್ಮ ಸಿದ್‌ಬಟ್ಟೆ ಕಥೆ, ಕಾದಂಬರಿ, ಕಾವ್ಯ, ಹರಟೆ, ಸಂಪಾದನೆ ಮುಂತಾದ ಪ್ರಕಾರದ ಸಾಹಿತ್ಯ ರಚನೆಗೈದು ಪ್ರಮುಖವಾದ ಏಳು ಸಾಹಿತ್ಯ ಕೃತಿಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿ ಜಿಲ್ಲೆ ಹಾಗು ರಾಜ್ಯದಲ್ಲಿ ಹೆಸರು ಮಾಡಿದ್ದಾರೆ.

**೩.೧ ಕಾದಂಬರಿ:**

[1]ಕಾದಂಬರಿ ಕನ್ನಡ ಸಾಹಿತ್ಯ ಪ್ರಕಾರಗಳಲೊಂದು. ಇದು ಆಧುನಿಕ ಸಾಹಿತ್ಯದಂತೆ ಕನ್ನಡದಲ್ಲಿಯೂ ಅತ್ಯಂತ ಲೋಕಪ್ರಿಯವಾದ ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದಿದೆ. ಈ ಸಾಹಿತ್ಯ ಪ್ರಕಾರ ಒಂದು ರೀತಿಯಿಂದ ಜನಪದ ಸಾಹಿತ್ಯದಂತೆ ಸಾಮಾನ್ಯ ಜನರ ಆಶೋಕ್ತರಗಳಲ್ಲಿ, ಅಭಿರುಚಿಗಳು, ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ. ಉಳಿದ ಸಾಹಿತ್ಯ ಪ್ರಕಾರಗಳಿಗಿರುವ ರೂಪ ಲಕ್ಷಣಗಳು, ನಿಯಮ, ನಿಬಂರ್ಧಗಳು ಇದಕ್ಕೆ ವಿಶಿಷ್ಟವಾಗಿರುವುದಿಲ್ಲ. ಕಾದಂಬರಿ ಸಮಕಾಲಿನ ಜೀವನಕ್ಕೆ ತೀರ ಯೋಗ್ಯವಾದ ರೂಪವಾಗಿದೆ.

[2]ಕಾದಂಬರಿಯು ಕಾಲ್ಪನಿಕತೆ ಪ್ರಧಾನವಾದುದು, ಮತ್ತು ನಿರೂಪಣೆಯ ಆಯಾಮವನ್ನು ಹೊಂದಿರುವಂತಹದ್ದು ಕಾಲ್ಪನಿಕವಾದದಕ್ಕೆ ವಾಸ್ತವ ರೂಪದ ಪ್ರಮಾಣ ಒದಗಿಸುವುದು ಕಾದಂಬರಿಯ ಗುರಿಯಾಗಿರುವಂತೆ ತೋರುತ್ತದೆ. ಕಾದಂಬರಿ ಜನಪ್ರಿಯವಾದ ಒಂದು ಸಾಹಿತ್ಯ ಪ್ರಕಾರವಾಗಿದ್ದು ಪ್ರತಿಭೆ, ಶಾಸ್ತ್ರಭ್ಯಾಸ, ಜೀವನಾನುಭವ, ಉತ್ತಮ ಹೃದಯ ಇರುವವರು ಕಾದಂಬರಿ ಬರೆಯಬಲ್ಲರು. ಕಾದಂಬರಿ ಜೀವನವನ್ನು ಚಿತ್ರಿಸುವುದಲ್ಲದೆ ಜೀವನವನ್ನು ಕುರಿತು ಹೇಳುತ್ತದೆ. ವ್ಯಕ್ತಿಗಳ ಹೊರ ಮತ್ತು ಒಳ ಮನಸ್ಸಿನ ಜೀವನವನ್ನು ತಿಳಿಸಿಕೊಡಬಲ್ಲ ಸಾಹಿತ್ಯ ಪ್ರಕಾರವಾಗಿದೆ. ಪಾತ್ರಗಳ ಅಂತರಂಗ ಪ್ರವೇಶಿಸಿ ಜೀವನ ಸಿದ್ಧಾಂತವನ್ನು ತಿಳಿಸಿಕೊಡುವುದರ ಜೊತೆಗೆ ಸಾಮಾಜಿಕ ಜಾಗೃತಿಯನ್ನುಂಟು ಮಾಡುತ್ತದೆ.

ಕನ್ನಡ ಸಾಹಿತ್ಯದಲ್ಲಿಯ ಕಾದಂಬರಿಯು ದಿನೆ ದಿನೆ ಜನಪ್ರಿಯತೆಗಳಿಸುತ್ತಿದ್ದು ಅನೇಕ ಮಹಿಳಾ ಸಾಹಿತಿಗಳು ಕಾದಂಬರಿ ಕ್ಷೇತ್ರದಲ್ಲಿ ಕೃಷಿಗೈಯುತ್ತಿರುವುದು ಒಂದು ರೀತಿಯ ಕಾರಣವಾಗಿದೆ. ಈ ಹಿನ್ನಲ್ಲೆಯಲ್ಲಿ ನೋಡಿದಾಗ ಶ್ರೀಮತಿ ಯಶೋದಮ್ಮ ಸಿದ್‌ಬಟ್ಟೆ ಮಲೆನಾಡಿನ ಮಗಳಾಗಿ ಧರಿನಾಡಿನ ಸೊಸೆಯಾಗಿ ಬಂದು ಇಲ್ಲಿನ ಮಹಿಳಾ ಸಾಹಿತಿಗಳನ್ನು ಜಾಗೃತಗೊಳಿಸುವ ಕಾರ್ಯ ಮಾಡಿದ್ದಾರೆ. ತಮ್ಮ ಮೂರು ಕಾದಂಬರಿಗಳನ್ನು ರಚಿಸಿ ಅಪಾರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

---

1. ಯುಗಧರ್ಮ ಹಾಗು ಸಾಹಿತ್ಯ ದರ್ಶನ -ಕಿರ್ತಿನಾಥ ಕುರ್ತಕೋಟಿ
2. ವಿಮರ್ಶೆಯ ಪರಿಭಾಷೆ -ಓ.ಎಲ್.ನಾಗಭೂಷಣ

ಕಾದಂಬರಿಗಳು :

1) ಮಂಗಳಾ

2) ವಿಶ್ವ ಮೇಘ

3) ಹೊಸ ಹೆಜ್ಜೆ

**ಮಂಗಳಾ :**

ಮಂಗಳಾ ಯಶೋದಮ್ಮಾ ಸಿದ್‌ಬಟ್ಟೆಯವರ ಚೊಚ್ಚಲ ಕೃತಿ ಇದೊಂದು ಸಾಮಾಜಿಕ ಕಾದಂಬರಿಯಾಗಿದ್ದು, ಮಂಗಳಾ ಎಂಬ ಮಹಿಳೆಯೋರ್ವಳ ದುರಂತ ಬಾಳಿನ ಸಜೀವ ಚಿತ್ರಣವನ್ನೇ ಕಾದಂಬರಿಯ ವಸ್ತುವನ್ನಾಗಿಸಿಕೊಂಡು ಹೆಣೆದಿರುವ ಪಾತ್ರ ಚಿತ್ರಣ. ಕಲ್ಲು ಹೃದಯವನ್ನು ಕೂಡಾ ಕರಗಿಸಬಲ್ಲ ವಸ್ತು, ವಿಶಿಷ್ಟತೆಯಿಂದ ಕೂಡಿದೆ. ಕಾದಂಬರಿಯ ನಾಯಕಿಯಾಗಿರುವ ಮಂಗಳೆಯನ್ನೇ ಕೇಂದ್ರಿಕರಿಸಿ ಬರೆದಿರುವ ಕಾಂದಬರಿಯು ಇದಾಗಿದೆ. ಪ್ರಾರಂಭದಿಂದ ಕಾದಂಬರಿಯ ಮುಕ್ತಾಯದವರೆಗೂ ನಾಯಕಿಯು ಕಾಂಬರಿಯ ವಸ್ತುವನ್ನು ಹಿಂಬಾಲಿಸಿದಂತೆ, ಕೆಲವೊಮ್ಮೆ ಕಾದಂಬರಿ ನಾಯಕಿಯನ್ನೇ ಹಿಂಬಾಲಿಸುತ್ತಿದ್ದಂತೆ ಕಂಡುಬರುತ್ತದೆ. ಅಂದರೆ ಕಾದಂಬರಿಯುದ್ದಕ್ಕು ಮಂಗಳೆಯ ಘಟನೆ ಅಥವಾ ವಿಷಯಕ್ಕೆ ಬಿಟ್ಟು ಬೇರೆಡೆ ಹೋಗುವುದಿಲ್ಲ.

ಕಾದಂಬರಿಯಲ್ಲಿ ಬರುವ ಪಾತ್ರಗಳು ಸಂಬಂಧ ಹೆಣೆದುಕೊಂಡೆ ಬಂದಿವೆ. ಒಂದು ಹೆಣ್ಣು ಗಂಡನನ್ನು ಕಳೆದುಕೊಂಡು ವಿಧವೆಯಾದಾಗ ಬದುಕಿನುದ್ದಕ್ಕೂ ಹೇಗೆ ಅವಳು ದುಃಖ, ನೋವುಗಳನ್ನುಂಡು ಬದುಕಬೇಕಾಗುತ್ತದೆ ಎಂದೆಂಥಹ ಅವಮಾನ, ಶೋಷಣೆ ನೋವುಂಟು ಮಾಡುವ ಮಾತುಗಳು ಕೇಳಿಸಿಕೊಳ್ಳಬೇಕಾಗುತ್ತದೆ. ಒಬ್ಬ ವಿಧವೆಯನ್ನು ಸಮಾಜ ಹೇಗೆ ನಡೆಸಿಕೊಳ್ಳುತ್ತದೆ ಎಂಬುದರ ಜೊತೆಗೆ ಒಬ್ಬ ವಿಧವೆಯು ಧೈರ್ಯ ಮಾಡಿ ಹೇಗೆ ಜೀವನ ನಡೆಸಬಹುದಾಗಿದೆ ಎಂಬುವಲ್ಲಿ ದುಃಖಿಯಾದವರು ಉನ್ನತ ಮಟ್ಟದ ಚಿಂತನೆಯಲ್ಲಿ ತೊಡಗಿಕೊಳ್ಳಬೇಕು ಎತ್ತರಕ್ಕೆ ಏರುವಂತಹ ಚಿಂತನೆ ಹೊಂದಿರಬೇಕು ಇದಕ್ಕಾಗಿ [1]ಸಾಕ್ಷರತೆ ಮಹಿಳೆಗೆ ಅನಿವಾರ್ಯ ಎಂಬ ಅಂಶಕ್ಕೆ ಒತ್ತು ನೀಡಿದ್ದಾರೆ. ಬದಲಾವಣೆ ಅನಿವಾರ್ಯವಾಗಿದ್ದು ಅದನ್ನು ಒಪ್ಪಿಕೊಳ್ಳಲೇಬೇಕು. ಜೀವನ ಅಗತ್ಯ ಹಾಗೂ ಅನಿವಾರ್ಯವು ಹೌದು ಎಂಬುದು ಕಾದಂಬರಿ ತೋರಿಸಿಕೊಟ್ಟಿದೆ.

ವೈವಿದ್ಯಮಯ ಪಾತ್ರ ಚಿತ್ರಣಗಳಿಂದ ಕೂಡಿರುವ ಕಾದಂಬರಿ ಕೌಟುಂಬಿಕ ಹಾಗೂ ಸಾಮಾಜಿಕ ಸಂಬಂಧಗಳ ಮೂಲಕ ಮುಂದುವರೆಯುತ್ತದೆ. ಮದುವೆಯಾಗಿ ಚಿಕ್ಕ ವಯಸ್ಸಿನಲ್ಲಿಯೆ ಗಂಡನನ್ನು ಕಳೆದುಕೊಂಡಿರುವ ಮಂಗಳಾ ವಿಧವೆಯಾಗಿ ನಾಲ್ಕು ಗೋಡೆಗಳ ಮಧ್ಯದಲ್ಲಿ ಜೀವಿಸದೆ

1. ಪ್ರಗತಿಯ ಪಥದಲ್ಲಿ ಭಾರತೀಯ ನಾರಿ -ಯಶೋದಮ್ಮ ಸಿದ್‌ಬಟ್ಟೆ ಪು.ಸಂ. 30

ಈ ವ್ಯವಸ್ಥೆಯಿಂದ ಹೊರ ಬಂದು ಉನ್ನತ ಶಿಕ್ಷಣ ಪಡೆದು ಸಾಮಾಜಿಕ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಕಷ್ಟ, ನೋವು, ಯಾತನೆಯನ್ನು ಅನುಭವಿಸಿ ಪದವಿಪೂರ್ವ ಕಾಲೇಜ ಉಪನ್ಯಾಸಕಿಯ ಮಟ್ಟಕ್ಕೆ ಬಂದು ಜಿಲ್ಲಾಧಿಕಾರಿಯೊಂದಿಗೆ ಮರು ಮದುವೆಯಾಗುವ ಹಂತದ ವರೆಗೆ ಬರುವಲ್ಲಿ ಅವಳ ಧೈರ್ಯದ ಹೆಜ್ಜೆಗಳು, ಆಕೆಯ ಆದರ್ಶಗಳು ಸಮಾಧಾನ ತರುವ ಅಂಶಗಳಾಗಿವೆ.

ಸಾಂಪ್ರದಾಯಿಕ ಕುಟುಂಬದಲ್ಲಿ ಜನಿಸಿ ಅಂತಹದೆ ಆದ ಕುಟುಂಬದ ಸೊಸೆಯಾದ ಮಂಗಳಾ ತನ್ನ ಗಂಡನಾದ ಶ್ರೀನಾಥನೊಂದಿಗೆ ವೈವಾಹಿಕ ಜೀವನ ನಡೆಸುತ್ತಾಳೆ. ಮದುವೆಯಾದ ಕೆಲವೆ ದಿನಗಳ ನಂತರ ಗರ್ಭಿಣಿಯಾಗಿ ಹೆರಿಗೆಗೆಂದು ತವರು ಮನೆಗೆ ಬಂದಾಗ ಗಂಡ ಅಪಘಾತದಲ್ಲಿ ಮರಣ ಹೊಂದಿದಾಗ ಗಂಡನಿಲ್ಲದ ಮನೆಯಲ್ಲಿ ಹನ್ನೆರಡು ದಿವಸಗಳವರೆಗೆ ಕತ್ತಲೆಯ ಕೋಣೆಯಲ್ಲಿ ತಲೆ ಬೋಳಿಸಿಕೊಂಡು ಯಮ ಯಾತನೆ ಅನುಭವಿಸಿದ್ದು ಗೊಡ್ಡು ಸಂಪ್ರದಾಯಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಪೊಳ್ಳು ಸಂಪ್ರದಾಯವನ್ನು ತಿರಸ್ಕರಿಸುವುದಷ್ಟೇ ಅಲ್ಲದೆ ಈ ಸಂಪ್ರದಾಯವನ್ನು ಮುರಿದು ಕಟ್ಟುವ ಕೆಲಸ ಮಂಗಳಾ ಹಾಗು ಅಮರನ ಮೂಲಕ ಬೆಳಕಿಗೆ ಬಂದಿದೆ. ಕಾದಂಬರಿಯುದ್ದಕ್ಕು ಅಲ್ಲಲ್ಲಿ ಬಂಡಾಯದ ಧ್ವನಿ ಹಾಗೂ ಧೋರಣೆಗಳು ಕಂಡು ಬಂದಿವೆ. ವ್ಯವಸ್ಥೆಯನ್ನು ವಿರೋಧಿಸುವ ಹಾಗೂ ಅದರ ವಿರುದ್ಧ ಬಂಡೇಳುವ ಮನೋ ಧೋರಣೆಗಳು ಕಂಡುಬಂದಿವೆ.

ಕಾದಂಬರಿಯು ಭೀಮರಾಯರ ಮಗಳಾದ ಮಂಗಳಾ ಹಾಗೂ ಶಿವಮೊಗ್ಗದ ಸಾಹುಕಾರ ಸೀತಾರಾಮಪ್ಪರ ಮಗನಾದ ಶ್ರೀನಾಥರ ಮದುವೆಯ ಸಮಾರಂಭದಿಂದ ಪ್ರಾರಂಭವಾಗುತ್ತದೆ. ಇದೊಂದು ಪ್ರೇಮ ವಿವಾಹವಾಗಿದ್ದು, ಶ್ರೀನಾಥ ತನ್ನ ಕುಟುಂಬದ ಹಿರಿಯರಾದ ತಂದೆ ತಾಯಿಯರ ಮಾತು ಮೀರಿ ಮಾಡಿಕೊಳ್ಳುತ್ತಿರುವ ಮದುವೆ ಇದಾಗಿದೆ. ಕಾಸು ಕವಡೆಯಷ್ಟು ವರದಕ್ಷಿಣೆ ತೆಗೆದುಕೊಳ್ಳದೆ ಶ್ರೀನಾಥ ಮದುವೆ ಮಾಡಿಕೊಳ್ಳುತ್ತಿರುವುದು ಎಳ್ಳಷ್ಟು ಇಷ್ಟವಿಲ್ಲದೆ ಒಲ್ಲದ ಮನಸ್ಸಿನಿಂದ, ಮಡದಿಯ ಒತ್ತಾಯದಿಂದ ಮದುವೆಗೆ ಬಂದಿರುವ ಸೀತಾರಾಮಪ್ಪ ಅಕ್ಷರಸ್ಥನಾಗಿರುವ ಒಬ್ಬನೆ ಮಗ ಇಂಜಿನಿಯರಿಂಗ್ ಓದಿರುವವನು ನೂರು ಎಕ್ಕರೆ ಗದ್ದೆ, ಒಂದುವರೆ ಸಾವಿರ ಅಡಿಕೆ ಮರ, ವಿಶಾಲ ತೋಟ, ಸ್ವಂತ ಆಸ್ತಿ ಹೊಂದಿರುವ ಸೀತಾರಾಮಪ್ಪ ಇಂಥ ಗತಿಗೆಟ್ಟ ಹೆಣ್ಣು ಯಾರಿಗೆ ಬೇಕು ? ಎಂದು ಪ್ರಶ್ನಿಸುವಲ್ಲಿ ಎರಡು ಕಾರಣಗಳು ಗೋಚರಿಸುತ್ತವೆ. ಮೊದಲನೆಯದು ವರದಕ್ಷಿಣೆ. ಇದಕ್ಕೆ ಸಾಕ್ಷಿ ಎಂಬಂತೆ ಸೀತಾರಾಮಪ್ಪ ಹೇಳಿರುವ ಮಾತು, ನಿನಗೆ ಕೋಟ್ಯಾಧಿಪತಿ ಮನೆ ಹೆಣ್ಣು ತಂದು ಮದುವೆ ಮಾಡುತ್ತೇನೆಂಬುದು; ಇನ್ನೊಂದು ಕಾರಣ ಮಂಗಳೆಯ ಜಾತಕ ಮೂಲ ನಕ್ಷತ್ರವಾಗಿದ್ದು ವಿಧವಾಯೋಗವಿದೆ ಎಂಬುದು, ಇದರ ಮಧ್ಯೆ ಶ್ರೀನಾಥನ ವೈಚಾರಿಕ ಪ್ರಜ್ಞೆ ಹಾಗೂ ಅವನ ಸಾಮಾಜಿಕ ಕಳಕಳಿಯಿಂದಾಗಿ ಎಲ್ಲರ ಪ್ರೀತಿಗೆ

ಪಾತ್ರನಾಗಿದ್ದಾನೆ. ಹುಡುಗಿಯ ಜಾತಕ ತೆಗೆಸೋಣ ಎಂದಾಗ ತನ್ನ ತಾಯಿಗೆ ನೀಡಿದ ಉತ್ತರದಲ್ಲಿ ವೈಚಾರಿಕತೆಯ ಅಂಶ ಅಡಗಿದೆ. ``ಅಮ್ಮ ಜಾತಕ ಗೀತಕ ಏನು ಬೇಡ ಜಾತಕ ನೋಡಿ ಈಗ ಸರಿಯಾಗಿಲ್ಲ ಎಂದರೆ ನನ್ನ ಮನಸ್ಸು ಬದಲಾಯಿಸಲು ಸಾಧ್ಯವಿಲ್ಲ`` ಎಂಬುದು.

ಮದುವೆಗೆ ಬಂದ ತನ್ನ ಬಳಗದವರನೆಲ್ಲಾ ವಾಪಾಸು ಕರೆದುಕೊಂಡು ಹೋಗಲು ಸಿದ್ಧರಾದ ಸಾಹುಕಾರರು ತನ್ನ ಮಾವನವರಾದ ಭೀಮರಾಯರಿಗೆ ಶ್ರೀನಾಥ ಹೇಳಿರುವ ಮಾತಿನಲ್ಲಿ ಸಾಮಾಜಿಕ ಕಳಕಳಿ ಕಂಡುಬರುತ್ತದೆ. ಮಾವಾ ಯಾರು ಬೇಕಾದರೂ ಹೋಗಲಿ ನಾನು ಮಾತ್ರ ಹೋಗಲ್ಲ. ಆಗೋ ಕಾರ್ಯ ಆಗಿ ಹೋಗಲಿ ನಿವೇನು ಚಿಂತಿಸಿಬೇಡಿ ಎಂದು ಹೇಳುತ್ತಾನೆ. ತನ್ನ ತಂದೆಗೆ ಬೆಳಗಾದರೆ ನನ್ನ ಮದುವೆ ನೆಂಟರೆಲ್ಲಾ ಬಂದಿದ್ದಾರೆ. ನಾವು ಹೊರಟು ಹೋದರೆ ಏನು ಗತಿ ? ಶ್ರೀನಾಥನ ತಾಳ್ಮೆಯ ಹಾಗೂ ಪ್ರಭಟನೆಯ ಮಾತುಗಳು ಕಾದಂಬರಿಕಾರ್ತಿ ಬಹು ಎಚ್ಚರಿಕೆಯಿಂದ ಈ ಮಾತುಗಳು ಬಳಸಿರುವುದು ಕಂಡುಬರುತ್ತದೆ.

ಇಂಜಿನಿಯರಿಂಗ ವಿದ್ಯಾರ್ಥಿಯಾದ ಶ್ರೀನಾಥ ಹಾಗೂ ರವಿ ಆತ್ಮೀಯ ಗೆಳೆಯರಾಗಿದ್ದು ಒಂದೇ ತರಗತಿಯವರು ಊರಿಗೆ ಹೊರಡುವಾಗ ರವಿಯ ಒತ್ತಾಯಕ್ಕೆ ಮಣಿದು ಶ್ರೀನಾಥ ಭದ್ರಾವತಿಗೆ ರವಿಯ ಮನೆಗೆ ಬಂದಾಗ ಮಂಗಳೆಯ ಕಂಡು ಅವಳ ಸೌಂದರ್ಯಕ್ಕೆ ಮಾರು ಹೋಗುತ್ತಾನೆ. ನಂತರ ಮತ್ತೆ ಮತ್ತೆ ರವಿಯ ಮನೆಗೆ ಬಂದು ಮಂಗಳೆಯ ಕಣ್ಣಿನಲ್ಲಿ ಕಣ್ಣಿಟ್ಟು ನೋಡುತ್ತಾನೆ. ರವಿ ಹಾಗೂ ಅವನ ತಂದೆ ತಾಯಿ ಕೂಡಾ ಶ್ರೀನಾಥ ಮಂಗಳೆಗೆ ಮೋಹಿಸಲಿ ಎಂಬ ಭಾವನೆಯನ್ನೇ ಹೊಂದಿರುತ್ತಾರೆ. `ರೋಗಿ ಬಯಸಿದ್ದು ಹಾಲು; ವೈದ್ಯರು ಹೇಳಿದ್ದು ಹಾಲು` ಎನ್ನುವಂತೆ ಅನುರಾಗಕ್ಕೆ ಪಕ್ಕಾದ ಎರಡು ಜೀವಿಗಳು ಪರಸ್ಪರ ಒಮ್ಮನಸಿನಿಂದ ಪ್ರೀತಿಯಲ್ಲಿ ದುಮಕಿದರು. ತನ್ನ ತಂದೆ ತಾಯಿಯೊಂದಿಗೆ ಶ್ರೀನಾಥ ಇಂಜಿನಿಯರಿಂಗ ಮುಗಿದ ನಂತರ ಮಂಗಳೆಯೊಂದಿಗೆ ಮದುವೆಯಾಗುವ ಪ್ರಸ್ತಾಪ ಮುಂದಿಟ್ಟಿದ್ದಾನೆ. ತಂದೆ ತಾಯಿಯರ ವಿರೋಧದ ನಡುವೆ ಶ್ರೀನಾಥ ಪ್ರತಿರೋಧ ತೋರಿಸಿ ಮದುವೆಯಾದ ವಿಷಯ ವೈಚಾರಿಕತೆಯಿಂದ ಕೂಡಿದೆ.

ಭೀಮರಾಯರ ಮನೆಯ ಉಸಿರಾಗಿರುವ ಮಂಗಳಾ ಮದುವೆಯಾಗಿ ಹದಿನೈದು ದಿವಸ ಕಾಶ್ಮೀರಕ್ಕೆ ಹನಿಮೂನಗೆ ಹೋದ ವಿಷಯ ಸಂಕ್ಷಿಪ್ತಗೊಳಿಸಲಾಗಿದ್ದು ಪ್ರವಾಸ ಮುಗಿಸಿಕೊಂಡು ಬಂದ ನಂತರ ಇಡೀ ಮನೆ ಸಂತೋಷದಿಂದ ಕೂಡಿದ್ದಾಗ ಹದಿನೈದು ದಿನ ಬಿಕೋ ಎನ್ನುತ್ತಿದ್ದ ಮನೆಗೆ ಕಳೆ ಬಂದಿದೆ ಎಂಬುವ ಮಾತಿನಲ್ಲಿ ಮಂಗಳೆಯ ಸ್ವಭಾವದ ಪ್ರಸ್ತಾಪ ಪರೋಕ್ಷವಾಗಿ ಬಂದಿದೆ.

ಶ್ರೀನಾಥನ ಬದುಕಿನಲ್ಲಿ ಮಂಗಳೆಯ ಪ್ರವೇಶ ಸಂತೋಷವನ್ನುಂಟು ಮಾಡಿದೆ. ಮದುವೆಯಾದ ಕೆಲವೆ ದಿನಗಳಲ್ಲಿ ಜೋಗಫಾಲ್ಸನಲ್ಲಿ ಅಸಿಸ್ಟೆಂಟ್ ಇಂಜಿನಿಯರಾಗಿ

ಆಯ್ಕೆಯಾಗಿದ್ದು ನಂತರ ಮಂಗಳಾ ಗರ್ಭವತಿಯಾಗಿರವುದು ಈ ಎರಡು ಘಟನೆಗಳು ಶ್ರೀನಾಥನ ಅಂತ್ಯವು ಕೂಡಾ ಹಾಡಿವೆ. ಸಿಬ್ಬಂದಿಯೊಬ್ಬರ ಮದುವೆಗೆಂದು ಹೊರಟ ಶ್ರೀನಾಥ ಹಾಗೂ ಮಾಧವರಾವ ಬೈಕ ಮೇಲೆ ಹೋಗುವಾಗ ಲಗ್ನದ ಮೂಹರ್ತದ ಸಮಯವಾಗುತ್ತಿದೆ ಎಂದು ಬೈಕ ನಿಲಿಸಿ ಶ್ರೀನಾಥ ಮೊದಲು ಹಿಂದೆ ಕುಳಿತವನು ಮುಂದು ಕುಳಿತು ಬೈಕ ಓಡಿಸುವಾಗ ಅಪಘಾತದಲ್ಲಿ ಶ್ರೀನಾಥ ಮರಣ ಹೊಂದುತ್ತಾನೆ. ಲೇಖಕಿ ದಾರಿ ಮಧ್ಯೆಯದಲ್ಲಿ ಶ್ರೀನಾಥ ಬೈಕ ನಡೆಸುವಂತೆ ಮಾಡುವಲ್ಲಿ ಪೂರ್ವ ಯೋಜನೆಯಂತೆ ಮುಂದೆ ಕುಳಿತಿರುವ ಶ್ರೀನಾಥನ ಮರಣಕ್ಕೆ ತುತ್ತಾಗಿರುವುದು ಮಾಧವರಾವ ಗಾಯಗೊಂಡು ಸ್ವಸ್ಥನಾಗುವಂತೆ ಮಾಡುವಲ್ಲಿ ಬಹು ಎಚ್ಚರಿಕೆ ವಹಿಸಿದ್ದಾರೆ.

ಕಾದಂಬರಿಯಲ್ಲಿ ಅತ್ಯಂತ ದುಃಖದ ಘಟನೆ ಬರುವುದು ಇಲ್ಲಿಯೆ! ಒಂದು ಕಡೆ ಶ್ರೀನಾಥನ ದೇಹ ಪೋಸ್ಟಮಾರ್ಟಂ ಮಾಡುತ್ತಿದ್ದಾರೆ. ಇನ್ನೊಂದೆಡೆಗೆ ಮಂಗಳೆಗೆ ಸೀಜರಿಯನ್ ಆಪರೇಷನ್ ನಡೆಯುತ್ತೀರುವುದು. ಇಲ್ಲಿ ಉಳಿದವರಲ್ಲಿ ಯಾರಿಗೂ ಸಂತೋಷ ಇಲ್ಲ. ಗಂಡು ಮಗು ಎಂಬ ಆಶಾಕಿರಣ ಅಷ್ಟಾಗಿ ಸಮಾಧಾನ ತರಲಿಲ್ಲ. ಒಂದೆಡೆ ಸಂತೋಷದ ಸುದ್ಧಿ ಇನ್ನೊಂದೆಡೆಗೆ ಕರಳು ಕಿತ್ತು ಬರುವ ದುಃಖ. ಅಮರ ಒಂದು ವರ್ಷದವನಾದಾಗ ಮಗನ ಹುಟ್ಟು ಹಬ್ಬ ಆಚರಿಸಬೇಕೋ ಅಥವಾ ಗಂಡನ ವೈಕುಂಠಾರಾಧನೆ ತಿಥಿ ಮಾಡಬೇಕೋ ಎಂಬುದು ದುಃಖ ತರುವ ವಿಷಯವಾಗಿದೆ.

ಗಂಡನನ್ನು ಕಳೆದುಕೊಂಡ ಮಂಗಳಾಗೆ ಅತ್ತೆ ಮಾವ ಮನೆಗೆ ಕರೆದೊಯ್ದು ತಲೆ ಬೋಳಿಸಿ ಹನ್ನೆರಡು ದಿವಸಗಳ ಕಾಲ ಕತ್ತಲೆ ಕೋಣೆಯಲ್ಲಿಟ್ಟಿದ್ದು, ಅಕ್ಕಪಕ್ಕದವರು ಮಾತನಾಡಿಕೊಳ್ಳುವುದು ನುಂಗಲಾರದ ತುತ್ತಾಗಿತ್ತು. `ಮದುಮಗಳಾಗಿ ಅತ್ತೆಯ ಮನೆಯ ಹೊಸಲು ತುಳಿಯಬೇಕಾದ ಮಂಗಳಾ ಈಗ ಅಮಂಗಳೆಯಾಗಿ ಮಗುವಿನೊಂದಿಗೆ ಬೋಳಾದಳು`. `ಎರಡು ವರ್ಷ ಮೆರೆದ್ಲು ಈಗ ಮುಂಡ ಮೋಚಕೊಂಡು ಮೂಲೆಯಲ್ಲಿ ಕೂತಕೊಂಡ್ಲು`, `ಮಾಡಬಾರದ ಫ್ಯಾಷನ್ ಎಲ್ಲಾ ಮಾಡ್ತಿದ್ಲೂ. ಈಗ ಬೋಳಾಗಿ ಕೂರಬೇಕಾಯ್ತಲ್ಲ !` ಎಂಬ ಚೂರಿಯಿಂದ ಇರಿಯುವ ಒಂದೊಂದು ಮಾತುಗಳು ಗಾಯದ ಮೇಲೆ ಬರೆ ಬಡಿದಂತ್ತಿದ್ದವು.

ಮಂಗಳೆಗೆ ಶಿಕಾರಿಪುರದ ಪ್ರೈಮರಿ ಶಾಲೆಗೆ ಶಿಕ್ಷಕಿಯಾಗಿ ನೇಮಕವಾದುದು ಮಂಗಳಾ ಬದುಕಿನಲ್ಲಿ ಬದಲಾವಣೆಗೆ ನಾಂದಿಯಾಗಿದೆ. ತನ್ನ ಜೀವನವೇ ಕತ್ತಲಾಯ್ತು. ಎಲ್ಲವು ಮುಗಿಯಿತು ಎನ್ನವುಲ್ಲಿ ಅಲ್ಲಿಂದಲೆ ಮತ್ತೇ ಬದುಕು ಶೂರುವಾಯಿತು. [1]ಬದುಕು ನಶ್ವರವೆಂದು ನಂಬಿದವರುಂಟು, ಶಾಶ್ವತವೆಂದು ನಂಬಿದವರುಂಟು. ಈ ಎರಡು ವರ್ಗದ ಜನರು ಒಂದಲ್ಲ ಒಂದು

---

1. ಚಿಂತನ ಲೇಖನಗಳು -ಪ್ರೊ. ಸೂಗಯ್ಯಾ ಹಿರೇಮಠ ಪು.ಸಂ. 127

ತೆರನಾಗಿ ಹೋರಾಟ ಮಾಡುತ್ತಾ ಬಂದಿದ್ದಾರೆ. ಮಂಗಳಾ ಕೂಡಾ ಹೋರಾಟದ ಬದುಕು ನಡೆಸುತ್ತಾ ಮುನ್ನಡೆದಿರುವುದು ಕಾದಂಬರಿಯುದ್ದಕ್ಕು ಕಂಡು ಬಂದಿದೆ.

ಪ್ರಾಥಮಿಕ ಶಾಲಾ ಶಿಕ್ಷಕಿಯಾಗಿ ಶಿಕಾರಿಪುರಕ್ಕೆ ಹೋಗಲು ಹೊರಟಾಗ ನೀನಿನ್ನು ಚಿಕ್ಕವನು ಆದರೆ ಎಲ್ಲಾ ಕಷ್ಟ ಅನುಭವಿಸಿದೆ. ಈಗ ಎಲ್ಲ ಮರೆತು ಹೊಸ ಮೇಡಂ ಆಗಿ ಜಗತ್ತನ್ನು ಎದುರಿಸುವ ಧೈರ್ಯ ಪಡೆಯಬೇಕು. ಜೊತೆಯವರು ಏನಾದರು ಅನ್ನಬಹುದು ಚುಚ್ಚು ಮಾತುಗಳನ್ನು ಆಡಬಹುದು. ಮನೆಯಲ್ಲಿ ಮಾತಿಗೊಮ್ಮೆ ಅಳುತ್ತಾ ಕೂರುವ ಹಾಗೆ ಕೂರಬಾರದು ಬಂದುದನ್ನು ಧೈರ್ಯವಾಗಿ ಎದುರಿಸೆಂದು ರವಿಯ ಮಾತು ಮಂಗಳಾಗೆ ಬದಲಾಗಲು ಸೂಚನೆ ನೀಡುತ್ತಿದ್ದವು.

ಮದುವೆಗೆ ಮೊದಲು ತಂದೆ ತಾಯಿಯರನ್ನು ಬಿಟ್ಟಿರದ ಮಂಗಳಾ ಮದುವೆಯಾಗಿ ಶ್ರೀನಾಥನೊಂದಿಗೆ ಕಾಲ ಕಳೆಯುತ್ತಿದ್ದಳು. ತನ್ನ ಗಂಡನ ನಂತರ ಮಗ ಅಮರನನ್ನು ಬಿಟ್ಟಿರುತ್ತಿರಲಿಲ್ಲ. ಈಗ ಮತ್ತೊಂದು ಅಗ್ನಿ ಪರೀಕ್ಷೆ ಕಾದಿದ್ದು ಶಿಕಾರಿಪುರಕ್ಕೆ ಬಂದಾಗ ಇಲ್ಲಿ ತಾನೊಬ್ಬಳೆ ಇರಬೇಕಾದ ಪ್ರಸಂಗ ಬಂದೊದಗಿದೆ. ಒಂದು ಕಾಲದಲ್ಲಿ ಶಾಲೆ ಕಲಿಯಲು ಹೊರ ಹೋಗಲು ಸ್ವಾತಂತ್ರ್ಯವಿರದೆ ತೋಳಲಾಡುತ್ತಿದ್ದ ಮಹಿಳೆ ಇಂದು ತನ್ನೂರು ಮತ್ತು ತನ್ನವರನ್ನು ಬಿಟ್ಟು ಒಬ್ಬಂಟಿಯಾಗಿ ಇರಬೇಕಾಗಿ ಬಂದಿರುವುದು ಅದನ್ನು ಧೈರ್ಯವಾಗಿ ಎದುರಿಸಬೇಕೆಂಬುದು ಮಹಿಳೆಯರಲ್ಲಿ ಆಗುತ್ತಿರುವ ಬದಲಾವಣೆಯನ್ನು ಸೂಚಿಸುತ್ತದೆ.

ಕುಂತಲ್ಲಿ ನಿಂತಲ್ಲಿ ಸಮಸ್ಯೆಗಳದ್ದೆ ಕಾರೋಬಾರು ಆಗಿರುವ ಭೀಮರಾಯರ ಮನೆಯು ವಯಸಾದ ಅಂಬುಜಮ್ಮ ಒಬ್ಬಂಟಿ ಮಂಗಳೆಯೊಂದಿಗೆ ಕಳುಹಿಸಿದರೆ ಉಳಿದವರಿಗೆ ಊಟದ ಗತಿ ಹೇಗೆ ? ಭೀಮರಾಯರು ಶಿಕ್ಷಕರು ಬಿಡುವಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಮಗ ರವಿ ಶ್ರೀಮಂತರ ಮಗಳಾದ ರಾಧೆಯೊಂದಿಗೆ ಅದ್ದೂರಿಯಾಗಿ ಮದುವೆಯಾಗುತ್ತಾನೆ. ಈ ಮನೆ, ಊರು ಹಿಡಿಸದ ರಾಧೆ ಊರಲ್ಲಿರಲು ಇಷ್ಟವಿಲ್ಲವೆಂದು ನಿಷ್ಠುರವಾಗಿ ಹೇಳಿದಾಗ ರಾಧ ಹಾಗೂ ರವಿ ಬೇಗ ಬರುತ್ತೇನೆಂದು ಬೆಂಗಳೂರಿಗೆ ಹೊರಟು ಹೋಗಾದ ``ಬಡವರ ಮನೆ ಹೆಣ್ಣು ತರಬೇಕು ಶ್ರೀಮಂತರ ಮನೆಗೆ ಹೆಣ್ಣು ಕೊಡಬೇಕು``ಎಂಬ ಭೀಮರಾಯರ ಮಾತು ಸಂಧರ್ಬೋಚಿತವಾಗಿ ಬಳಸಲಾಗಿದೆ.

ಶಿಕಾರಿಪುರ ದಿಂದ ವರ್ಗಾವಣೆ ಮಾಡಿಕೊಂಡು ಮಂಗಳಾ ತನ್ನೂರಿಗೆ ಬರಬೇಕಾದ ಕಾಲ ಕೂಡಿಬಂತು. ಶಾಲೆಯ ಮುಖ್ಯ ಶಿಕ್ಷಕರಾದ ಶೇಖರ ಒಲ್ಲದ ಮನಸ್ಸಿನಿಂದ ಮಂಗಳೆಗೆ ವರ್ಗಾವಣೆ ಪತ್ರ ಕೊಡಲು ಮುಂದಾದರು. ಜೊತೆಗೆ ಮಂಗಳೆಯ ಸೇವೆಗಾಗಿ ಬಿಳ್ಕೋಡಿಗೆ ಸಮಾರಂಭ ಏರ್ಪಡಿಸಿ ಹಾಡಿ ಹೋಗಳಿ ಕಳುಹಿಸಿದರು. ಮಂಗಳೆಯ ವ್ಯಕ್ತಿತ್ವ ಮೆಚ್ಚಿಕೊಂಡ ಶೇಖರ ಮಂಗಳೆಗೆ ಪತ್ರ ಬರೆದು ಬೋಳಾದ ನಿಮ್ಮ ಹಣೆಗೆ ಕುಂಕುಮ ಇಡಲು ಅವಕಾಶ ಕೊಡಬೇಕೆಂದು

ಮನಸಾರೆ ಪ್ರೀತಿಸುವ, ಮದುವೆಯಾಗುವ ಮನಸ್ಥಾನ ವ್ಯಕ್ತಪಡಿಸಿದನು. ಮಂಗಳೆಗೆ ಪತ್ರ ಓದಿ ಕಣ್ಣಿನಿಂದ ನೀರು ಬರುತ್ತಿದ್ದವು. ತನ್ನ ಪತಿಯನ್ನು ನೆನೆಸುವ ಘಳಿಗೆ ಬಂತು. `ಶ್ರೀನಾಥ ನೀವು ಎಂತಹ ಸ್ಥಿತಿಯಲ್ಲಿಟ್ಟು ಹೋದಿರಿ ನೀವಿದ್ದಿದ್ದರೆ ನನಗೆ ಈ ಪರಿಸ್ಥಿತಿ ಬರುತ್ತಿರಲಿಲ್ಲ` ಎಂಬುವ ಮಂಗಳೆಯ ಅಂತರಾಳ ದುಃಖದಿಂದ ಜಲಾವೃತ್ತವಾಗಿರುವುದು ಗೋಚರಿಸುತ್ತದೆ. ಹಾಗೆಯೇ ಶೇಖರನ ಬಗ್ಗೆ ಗೌರವವು ಉಕ್ಕಿ ಬರುತ್ತದೆ. ಒಬ್ಬ ಮಡಿ ಏರಿದ ಹೂವು ಈಗ ಇನ್ನೊಬ್ಬರ ಮಡಿ ಏರಲು ಆಹ್ವಾನಿಸುತ್ತಿರುವುದು ದುಃಖ ಉಂಟುಮಾಡಿದೆ. ಕೊನೆಗೆ ನನ್ನ ಗಂಡನಿಗೆ ಅರ್ಪಿಸಿದ ಈ ದೇಹ ಇನ್ಯಾರಿಗೂ ಅರ್ಪಿಸಲು ನನಗಿಷ್ಟವಿಲ್ಲವೆಂದು ಜಾಣ್ಮೆಯಿಂದ ಜಾರಿಕೊಳ್ಳುತ್ತಾಳೆ.

ಶೇಖರನ ಪತ್ರಕ್ಕೆ ಮರು ಮದುವೆ ಸಾಧ್ಯವಿಲ್ಲವೆಂದು ಖಡಾಖಂಡಿತವಾಗಿ ತಿಳಿಸಿದರು ಸಹ ಮಂಗಳೆ ಮನದೊಳಗೆ ಆದರ್ಶವಾದಿಯಾದ ಶೇಖರನ ಈ ಆಹ್ವಾನ ತಿರಸ್ಕರಿಸಲು ಒಂದೆಡೆ ಮನಸ್ಸು ಇರಲಿಲ್ಲ. ವಿಶಾಲ ಹೃದಯಯಾಗಿದ್ದ ಶೇಖರ ಹೊತ್ತುಕೊಂಡ ಆಶೆ ನೆರವೇರಲಿಲ್ಲ. ಆಕಾಂಕ್ಷೆಗಳು ತಲೆ ಕೆಳಗಾದವು. ಆದರೆ ಶೇಖರ ಮಂಗಳೆಯ ಮನಸ್ಸಿನಿಂದ ದೂರವಾಗಲಿಲ್ಲ. ಮನಸ್ಸು ಸ್ವಭಾವಿಕವಾಗಿ ಅವನನ್ನು ಬಯಸಲಾರಂಭಿಸಿತ್ತು. ಇನೊಂದೆಡೆಗೆ ಸಮಾಜವನ್ನು ಎದುರಿಸುವ ಧೈರ್ಯವಿಲ್ಲ. ಹೃದಯಲ್ಲಿ ನನ್ನ ಪತಿಯನ್ನು ಮರೆಯಲು ಸಾಧ್ಯವಿಲ್ಲ. ಮಗನನ್ನು ಹೊಂದಿರುವ ನಾನು ನಿಮ್ಮಂತಹ ತರುಣನನ್ನು ಮದುವೆಯಾಗುವುದು ಘೋರ ಅಪರಾಧವೆಂದು ಪ್ರತಿಯಾಗಿ ಪತ್ರ ಬರೆದು ತಿಳಿಸಿವುದರಲ್ಲಿ ಪತಿಯ ಪ್ರೀತಿ ಮರೆಯುವುದು ಹೇಗೆ ಎಂಬುದು ಒಂದೆಡೆ ಪ್ರಶ್ನೆಯಾದರೆ ಸಮಾಜವನ್ನು ಎದುರಿಸುವುದು ಅವಳ ಯಕ್ಷ ಪ್ರಶ್ನೆಯಾಗಿತ್ತು.

ಐದು ವರ್ಷ ತುಂಬಿದ ಅಮರ ಮನೆಯ ಪರಿಸರದಿಂದ ಈಗ ಶಾಲೆಯ ಪರಿಸರದಲ್ಲಿದ್ದಾನೆ. ಶಾಲೆಯ ಎಲ್ಲಾ ಶಿಕ್ಷಕರ ಮೆಚ್ಚುಗೆಗೆ ಪಾತ್ರನಾಗಿದ್ದಾನೆ. ತಂದೆ ಇಲ್ಲದ ತಬ್ಬಲಿಯಾದ ಅಮರನಿಗೆ ದಿನೆ ದಿನೆ ಹೊಸ ಹೊಸ ತಿಳುವಳಿಕೆ ಬರುತ್ತಿದೆ. ತನಗೆ ಅಪ್ಪಾ ಎಂದು ಕರೆಯಬೇಕೆಂಬ ಆಶೆಯಾಗಿದೆ. ತಂದೆಯ ಮುಖವನ್ನೇ ನೋಡದ ಅಮರ ಗೆಳೆಯನ ತಂದೆಯನ್ನು ಅಪ್ಪಾ ಎಂದು ಕರೆಯುತ್ತಿರುವುದರಲ್ಲಿ ತಂದೆಗಾಗಿ ಅವನ ತೋಳಲಾಟ ಎದ್ದುಕಾಣುತ್ತಿದೆ. ತಾಯಿ ತನ್ನ ಮಗನ ಮೇಲೆ ಒಲ್ಲದ ಮನಸ್ಸಿನಿಂದ ಕೋಪವ್ಯಕ್ತಪಡಿಸಿ ನಿಮ್ಮ ತಂದೆ ದೇವರ ಬಳಿ ಹೋಗಿದ್ದಾರೆಂದು ಶ್ರೀನಾಥನ ಭಾವಚಿತ್ರದ ಮುಂದೆ ಕರೆತಂದು ಹೇಳುವಾಗ ಕಲ್ಲು ಹೃದಯವು ಕರಗುವಂತಹದಾಗಿದೆ. ಲೇಖಕರ ಜಾಣತನ ಇಲ್ಲಿ ಎದ್ದು ಕಾಣುತ್ತದೆ. ಮಗನಿಗೆ ಕೊಟ್ಟ ಉತ್ತರ ಕೈ ನೆಲಕ್ಕೆ ಗಟ್ಟಿಯಾಗಿ ಹೊಡೆದು ನೋವು ಅನುಭವಿಸಿದಂತಾಗುತ್ತದೆ.

ವಿಧವೆಗೆ ಸಮಾಜ ನಡೆಸಿಕೊಳ್ಳುವ ರೀತಿ ಮಂಗಳಾಗೆ ತುಂಬಾ ನೋವು ತಂದಿತ್ತು. ಗಂಡಿಗಾಗಿ ಹೆಣ್ಣನ್ನು ಹೆಣ್ಣಿಗಾಗಿ ಗಂಡನ್ನು ದೇವರು ಸೃಷ್ಟಿ ಮಾಡಿರುವಾಗ ಸಂತೋಷದಿರದಿರಲು ಸಮಾಜ ಬಿಡುವುದಿಲ್ಲವೆಂದು ನೋವಿನಿಂದ ಹೇಳಿಕೊಳ್ಳುತ್ತಾಳೆ. ಸ್ತ್ರೀಗೆ ಗೃಹದೇವತೆ ಎಂದು

ಗೌರವಿಸುತ್ತಿದ್ದ ಸಮಾಜ, ಗಂಡ ಸತ್ತಾಗ ವಿಧವೆ, ಅಮಂಗಳೆ ಎಂದು ಮಾತಿಗೆ ತಳ್ಳುವುದು ನೆನೆದು ಸಿಡಿದೇಳುತ್ತಾಳೆ. `ಆದರೆ ಬಡವನ ಸಿಟ್ಟು ದವಡೆಗೆ ಕೇಡು ಎಂದು ಸುಮ್ಮನಾಗುತ್ತಾಳೆ`. ಇಲ್ಲಿ ಲೇಖಕಿ ಬಳಸಿರುವ ಗಾದೆ ಸಂದರ್ಭೋಚಿತವಾಗಿದೆ. ವಿಧವನೆಯನ್ನು ಕದ್ದು ಭೋಗಿಸಲು ಇಛಿಸುವ ಗಂಡಸರು ಮದುವೆಯಾಗಲು ಹಿಂಜರಿಯುತ್ತಾರೆ. ಮರು ಮದುವೆಯಾಗುವುದಾದರೆ ಎರಡನೇ ಗಂಡನನ್ನು ಮಾಡಿಕೊಂಡಳೆಂದು ಚುಚ್ಚುಮಾತನಾಡುವ ಪದ್ಧತಿ ಈ ದೇಶದಲ್ಲಿದೆ. ಈ ದೇಶದಲ್ಲಿ ಸ್ತ್ರೀಯರ ಶೋಷಣೆಯು ದಿನೆ ದಿನೆ ಹೆಚ್ಚಾಗುತ್ತಿದೆ.

[1]ಪುರುಷ ಸಮಾಜ ಭಾರತೀಯ ಮಹಿಳೆಯನ್ನು ಅತ್ಯಂತ ಹೀನಾಯವಾಗಿ ನಡೆಸಿಕೊಂಡಿದೆ. ಇದಕ್ಕೆ ಕಾರಣ ಅಂದಿನ ಮುಂದುವರಿದ ಸಾಮಾಜಿಕ ವ್ಯವಸ್ಥೆ ಒಂದಿಲ್ಲ ಒಂದು ಕಾರಣದಿಂದ ಭಾರತದ ನಾರಿಗೆ ಕಿರುಕುಳ ಕೊಡುತ್ತಾ, ಶೋಷಿಸುತ್ತಾ ಅಂದಿನಿಂದ ಇಂದಿನವರೆಗೂ ಪುರುಷ ಅವಳನ್ನು ತನ್ನ ಹಿಡಿತದಲ್ಲಿ ಇಟ್ಟಿಕೊಂಡೆ ಬಂದಿದ್ದಾನೆ. ಮನುಸ್ಮೃತಿಕಾರ ಸ್ತ್ರೀಯ ಸ್ವಾತಂತ್ರ್ಯ ಕಸಿದುಕೊಂಡು ಮನುಸ್ಮೃತಿ ರಚಿಸಿದ್ದಾನೆ. ಗಂಡಸಿನ ಬೇಡಿಕೆಗಳಿಗೆ ಆಶೆ ಆಕಾಂಕ್ಷೆಗಳಿಗೆ ಇಲ್ಲಿ ಅರ್ಥವಿದೆ ಹಾಗೂ ಅವಕಾಶವಿದೆ. ಆದರೆ ಹೆಣ್ಣಿನ ಬೇಡಿಕೆಗಳಿಗೆ, ಆಶೆ, ಆಕಾಂಕ್ಷೆಗಳಿಗೆ ಅರ್ಥವು ಇಲ್ಲ. ಮತ್ತು ಅವಕಾಶವು ಇಲ್ಲ. ಧರ್ಮದ ನೆಪದಲ್ಲಿ ಅವಳಿಗೆ ಶೋಷಣೆ ಮಾಡಲಾಗಿದೆ. ಅವೈಜ್ಞಾನಿಕತೆಯಿಂದ ಕೂಡಿರುವ ಮೂಢ ನಂಬಿಕೆ, ಅಂಧಶ್ರದ್ಧೆ, ಕೆಟ್ಟ ಸಂಪ್ರದಾಯಗಳು ಮಹಿಳೆಯನ್ನು ಭೋಗದ ವಸ್ತುವಾಗಿಸಿದೆ ವಿನಹ ತನ್ನಂತೆ ಮನಷ್ಯಳು ಎಂಬುದಾಗಿ ನಡೆಸಿಕೊಳ್ಳಲೇ ಇಲ್ಲ.

ಬಿ.ಎ. ನಲ್ಲಿ ಉತ್ತೀರ್ಣಳಾದ ಮಂಗಳಾ ಮೈಸೂರಿನಲ್ಲಿ ಇಂಗ್ಲೀಷ ವಿಷಯದಲ್ಲಿ ಎಂ.ಎ. ಓದಲು ಹೋದಾಗ ಅಮರನನ್ನು ತನ್ನ ಬಳಿಯೆ ಇಟ್ಟಿಕೊಂಡು ಓದಿಸುವುದಾಗಿ ತಿಳಿಸಿದ ರವಿಯ ಮಾತು ಮಂಗಳಾಗೆ ಬಲು ಸಂತೋಷ ತಂದಿತ್ತು. ಹಾಗೆಯೇ ರಾಧಾ ಕೂಡ ಈಗ ಬದಲಾಗಿದ್ದು. ಮಕ್ಕಳಿಲ್ಲದ ಕಾರಣ ಅಮರನನ್ನು ಹೆಚ್ಚಾಗಿ ಹಚ್ಚಿಕೊಂಡಿದ್ದಾಳೆ. ಅಮರ ಕೂಡಾ ಅತ್ತೆಯ ಮನಸ್ಸನ್ನು ಗೆದ್ದುಬಿಟ್ಟಿದ್ದಾನೆ. ಅವಳ ಅಲಂಕಾರ, ಉಡುಗೆ ತೊಡುಗೆ ಅವಳ ಲವಲವಕೆಯ ಓಡಾಟ ಅಮರಗೆ ಬಹಳಷ್ಟು ಹಿಡಿಸಿದೆ ಕಾರಣ ನಿರಾಭರಣ ಸುಂದರಿಯಾದ ತಾಯಿ ಸೊಪ್ಪೆ ಮೋರೆ ಹಾಕಿಕೊಂಡು ತಿರುಗುತ್ತಾಳೆಂಬುದು ಅವನ ಮನದ ಮಾತು. ಲೇಖಕಿ ಈ ಅಭಿಪ್ರಾಯ ಆನಂದನ ಮೂಲಕ ಹೊರಹಾಕಿದಾರೆ.

ಮಾನಸ ಗಂಗೋತ್ರಿಯ ವಾತಾವರಣಕ್ಕೆ ಹೊಂದಿಕೊಂಡ ಮಂಗಳೆ ನಿಷ್ಠೆಯಿಂದ ಪಾಠ ಕೇಳುತ್ತಿದ್ದಳು ಉಳಿದ ಗೆಳತಿಯರಂತೆ ಸೀನಿಮಾ, ಮಾರ್ಕೇಟ, ಹೋಟೆಲ್, ಸುತ್ತಾಡುವವಳಲ್ಲ.

---

1. ವೈಚಾರಿಕ ಲೇಖನಗಳು -ಡಾ. ಶಾಂತಿನಾಥ ದಿಬ್ಬದ (ಸಂ.) ಪುಸಂ. 27

ಗೆಳತಿಯರು ಪ್ರಶ್ನೆ ಮಾಡಿಯೇ ಬಿಟ್ಟರು. ಏನು ಮಂಗಳಾ ಸೀನಿಮಾ ನೋಡಲು ಸಹ ನಿಮಗೆ ಆಸೆ ಆಗಲ್ವೆ ?  ಎಂದಾಗ ನನಗೆ ಯಾವುದು ಬೇಕೆನಿಸುವುದಿಲ್ಲವೆಂದಾಗ ಇವಳೊಂದು ವಿಚಿತ್ರ ಪ್ರಾಣಿ ಎಂದೆನ್ನುಕೊಳ್ಳುತ್ತಾರೆ. ಗೆಳತಿ ಜಾನಕಿಯ ಅಣ್ಣನಿಗೂ ಕೂಡಾ ಹೃದಯವೇ ಇಲ್ಲದ ಪ್ರಾಣಿ ಎಂದು ಆಕ್ಷೇಪಿಸುತ್ತಾಳೆ. ಇವಳಿಗೆ ರಸಿಕತೆ ಎಂಬ ಶಬ್ದವೇ ಗೊತ್ತಿಲ್ಲ ಮೊದಲಾದ ಮಾತುಗಳು ಮಂಗಳಾಗೆ ಹೊಸದಾಗಿ ಕಂಡುಬರಲಿಲ್ಲ.

ಎಲ್ಲಾ ಕಡೆಯಲ್ಲಿ ನಡೆಯುತ್ತಿರುವ ಮಹಿಳೆಯರ ಮೇಲಿನ ಅತ್ಯಾಚಾರದ ವಿಷಯ ವರ್ತಮಾನ ಪತ್ರಿಕೆಗಳಲ್ಲಿ ಓದಿ ಮಂಗಳಾ ಬಹಳ ನೊಂದುಕೊಳ್ಳುತ್ತಿದ್ದಳು. ಅಸಹಾಯಕಳಾದ ಮಹಿಳೆಯರನ್ನು ಪುರುಷ ವರ್ಗ ನಡೆಸಿಕೊಳ್ಳುವ ರೀತಿ ನೋಡಿ ದುಃಖತಪ್ತಳಾಗುತ್ತಿದ್ದಳು. ತನ್ನ ಎಂ.ಎ. ಅಧ್ಯಯನ ಮುಗಿದ ನಂತರ ಮಹಿಳಾ ಜಾಗೃತಿ ಮಾಡಬೇಕೆಂದು ಮನದಲ್ಲಿಯೇ ತೀರ್ಮಾನಿಸಿಕೊಂಡಳು. `ಹೆಂಡತಿ ಬೇಗ ಸತ್ತರೆ ಮರು ಮದುವೆಗೆ ಪ್ರೋತ್ಸಾಹಿಸುವ ಸಮಾಜ ಗಂಡ ಸತ್ತಾಗ ಹೆಣ್ಣಿಗೆ ಮೂಲೆ ಗುಂಪಾಗಿ ಕೂಡಿಸುತ್ತದೆ`. ಹೆಂಗಸರು ಸುಮ್ಮನೆ ಪ್ರತಿಭಟಿಸದೆ ಕುಳಿತರೆ ಹೀಗೆ ಶೋಷಿತರಾಗುತ್ತಾರೆ. ಯಾವ ಕೆಟ್ಟ ಸಂಪ್ರದಾಯವನ್ನು ಪುರುಷನು ಮಾಡಲಿಲ್ಲ. ಸ್ತ್ರೀಯರೆ ಮಾಡಿದ್ದಾರೆ ಎಂಬುದು ಮಂಗಳೆಯ ಮನದ ಮಾತಾಗಿದೆ. ಇಲ್ಲಿ ಬಂಡಾಯದ ಧೋರಣೆಗಳು ಕಂಡುಬರುತ್ತಿವೆ.

ಎಂ.ಎ. ಓದುವಾಗ ತನ್ನ ಗೆಳತಿಯರನ್ನು ತಾನು ಅವಿವಾಹಿತೆ ಎಂದು ಹೇಳಿಕೊಂಡಿದ ಮಂಗಳಾ  ತಾನು ವಿಧವೆ ಎಂಬುದು ಹೇಳುವ ಸಮಯ ಬಂದೇ ಬಿಟ್ಟಿತ್ತು. ಅಮರನಿಗೆ ಆಕ್ಸಿಡೆಂಟ ಆದಾಗ ತರಗತಿಗೆ ಗೈರು ಹಾಜರಾಗಿದಕ್ಕಾಗಿ ಪ್ರಾಧ್ಯಾಪಕಿ ಲೀಲಾವತಿಗೆ ಕಾರ್ಯಾಲಯಕ್ಕೆ ಕರೆದು ಕೇಳಿದಾಗ ಸತ್ಯಾಂಶ ಹೊರಬರುತ್ತದೆ. ಗೆಳತಿಯರಿಗೆ ಸಲೀಸಾಗಿ ಸುಳ್ಳು ಹೇಳಿದ್ದು ಮೇಡಂ ಎದುರು ಸುಳ್ಳು ಹೇಳಲಾಗದೆ ಆಕ್ಸಿಡೆಂಟ ಆಗಿರುವುದು ನನ್ನ ಅಣ್ಣನಿಗಲ್ಲ ನನ್ನ ಮಗನಿಗೆ ಎಂದು ಬಾಯಿ ಬಿಡುತ್ತಾಳೆ. ತನ್ನ ಬಾಳಿನ ಗೋಳಿನ ಕಥೆ ಹೇಳಿಕೊಂಡಾಗ  ಲೀಲಾವತಿ ತನ್ನ ಮನೆಗೆ ಕರೆದೊಯ್ದು ಸಮಾಧಾನ ಹೇಳುತ್ತಾರೆ. ನೀನು ನಿನ್ನನ್ನು ಬಹಳ ದುಃಖಿ ಎಂದು ತಿಳಿದಿರುವೆ ಆದರೆ ಪ್ರಪಂಚದಲ್ಲಿ ನಿನಗಿಂತ ಅನೇಕ ದುಃಖಿಗಳು ಇದ್ದಾರೆ. ಇದರಲ್ಲಿ ನಾನು ಒಬ್ಬಳೆಂದು ಹೇಳುತ್ತಾರೆ ಲೀಲಾವತಿ ತನ್ನ ಜೀವನದಲ್ಲಿ ನಡೆದ ಘಟನೆ ವಿವರಿಸುತ್ತಾಳೆ. [1]ಸುಖ ದುಃಖ ಒಂದು ನಾಣ್ಯದ ಎರಡು ಮುಖಗಳಂತೆ ದುಃಖ ಆವರಿಸಿದಾಗಲೇ ಸುಖದ ಮಹತ್ವವೆನೆಂಬುದು ಅರಿವಾಗುತ್ತದೆ. ಸತ್ಯದ ಫಲ ತಡವಾಗಿಯಾದರು ರುಚಿಯಿಂದ ಕೂಡಿರುತ್ತದೆ ಎಂಬುದು ಲೇಖಕಿಯ ಮನದೊಳದ ಮಾತಾಗಿದೆ.

ಲೀಲಾವತಿಯ ಗೋಳಿನ ಕಥೆಯ ಮುಂದೆ ತನ್ನದೇನು ಅಲ್ಲ ಎಂಬ ತೀರ್ಮಾನಕ್ಕೆ ಬಂದಳು ಮಂಗಳಾ ತನಗಿಂತ ಪ್ರಪಂಚದಲ್ಲಿ ಬಹಳ ದುಃಖಿಗಳಿದ್ದಾರೆ ಎಂಬುದಲ್ಲಿ ವೈಚಾರಿಕತೆಯ

1. ಚಿಂತನ ಲೇಖನಗಳು  -ಪ್ರೊ. ಸೂಗಯ್ಯಾ ಹಿರೇಮಠ   ಪುಸಂ. 151

ದೃಷ್ಟಿಕೋನ ಎದ್ದು ಕಾಣುತ್ತದೆ. ತನ್ನ ನೋವಿನ ಕಥೆಯನ್ನು ಹೇಳಿದ ನಂತರ ಲೀಲಾವತಿ ತನ್ನ ಬಾಳಿನ ಭಾಗ್ಯವೆಂದು ನಂಬಿದ ಪತಿ ಶೇಖರನನ್ನು ಮಂಗಳಾಗೆ ಪರಿಚಯಿಸುತ್ತಾಳೆ. ಇಲ್ಲಿ ಶೇಖರನಿಗೆ ಒಳ್ಳೆಯ ಹೆಂಡತಿ ಸಿಕ್ಕಿರುವ ವಿಷಯ ಮಂಗಳಾಗೆ ಮನದಲ್ಲಿ ಸಂತೋಷ ನೀಡಿದೆ.

ಎಂ.ಎ. ಇಂಗ್ಲೀಷನಲ್ಲಿ ರ್‍ಯಾಂಕನಲ್ಲಿ ಪಾಸಾದ ಮಂಗಳಾಗೆ ಚಿಕ್ಕಮಗಳೂರಿನ ಪದವಿಪೂರ್ವ ಕಾಲೇಜಿಗೆ ಪ್ರಾಧ್ಯಾಪಕಳಾಗಿ ಸೇರಿಕೊಳ್ಳುತ್ತಾಳೆ. ಬೆಳೆದು ದೊಡ್ಡವನಾದ ಮಗ ಅಮರ ತನ್ನ ತಾಯಿ ಪ್ರಾಧ್ಯಪಕಿಯಾಗಿ ಹೋಗುತ್ತಿರುವದು ಸಂತಸ ನೀಡಿತ್ತು. ಆದರೆ ನಿರಾಭರ ಸುಂದರಿಯಾಗಿರುವುದು ಅವನಿಗೆ ನೆಮ್ಮದಿ ಇರಲಿಲ್ಲ. ಮೊದಲೆಲ್ಲ ನೀನು ಅತ್ತೆಯಂತೆ ಅಲಂಕಾರ ಮಾಡಿಕೊಳ್ಳಬೇಕೆಂದು ಪದೆ ಪದೆ ಹೇಳುತ್ತಿದ್ದ ಅಮರ ಈಗ ತಾಯಿಗೆ ಬಣ್ಣ ಬಣ್ಣದ ಸೀರೆ ಅದಕೊಪ್ಪು ಬ್ಲೌಜಪಿಸ್ ಅಲಂಕಾರ ವಸ್ತು ತಂದುಕೊಡುತ್ತಾನೆ. ಮಂಗಳಾ ತನ್ನ ತಂದೆ ಭೀಮರಾಯ ಮಾತುಗಳು ಕೇಳಿ ಚಕಿತಳಾಗುತ್ತಾಳೆ. ಅವನ ತಾಯಿ ಹೇಗಿರಬೇಕು ಅನುವುದು ಅವನಿಗೆ ಗೊತ್ತಿದೆ ಎಂಬುದಲ್ಲಿ ನಿವೃತ್ತ ಶಿಕ್ಷಕರಾದ ಭೀಮರಾಯರಲ್ಲಿಯು ಬದಲಾವಣೆಯ ಅಲೆಗಳು ಕಾಣುತ್ತಿವೆ. ಯಾರಾದರೂ ಏನಾದರೂ ಅಂದ್ರೆ ಎನ್ನುವುದಕ್ಕೆ ಭೀಮರಾಯರು ಯಾರು ಏನು ಹೇಳ್ತಾರಮ್ಮ ? ಹದಿನಾರು ವರ್ಷ ಬೋಳಾಗಿದಕ್ಕೆ ಯಾರಾದ್ರು ಏನಾದ್ರು ಬಹುಮಾನ ಕೊಟ್ರಾ ? ಎನ್ನುವಲಿ ಪ್ರತಿಭನೆಯ ಮನೋಧೋರಣೆ ಎದ್ದು ಕಾಣುತ್ತದೆ. `ನಾಳೆ ಅಂದರೆ ಮನೆ ಹಾಳು` ಎಂದು ಅಮ್ಮ ನೀನು ಹೀಗಿರಬೇಕು ಎಂಬುವಲ್ಲಿ ಅಮರನ ವೈಚಾರಿಕತೆ ಎದ್ದು ಕಾಣುತ್ತಿದೆ.

ಮಂಗಳೆಯ ತಾಯಿ ಅಂಬುಜಮ್ಮಳ ಮರಣ ಬರಸಿಡಿಲು ಬಡಿದಂತಾಗಿ. ರಾಯರು ಕುಸಿದುಬಿದ್ದಿರುವುದು ಮನೆಯವರೆಲ್ಲ ಸೇರಿ ದುಃಖಿಸುವದು ನಂತರ ಭೀಮರಾಯರು ಶವ ಸಂಸ್ಕಾರದ ನಂತರ ಮಗನೊಂದಿಗೆ ಬೆಂಗಳೂರಿಗೆ ಹೋಗಲು ಇಷ್ಟವಿಲ್ಲದ ರಾಯರು ಮಗಳೊಂದಿಗೆ ಇರುವ ಇಂಗಿತ ವ್ಯಕ್ತಿಪಡಿಸಿರುವದು. ಆದರೆ ಮಗಳ ಹತ್ತಿರ ಇರಲು ಇಷ್ಟವಿಲ್ಲದೇ ಇರಲಿಲ್ಲ. ರಾಯರ ಒಬ್ಬಂಟಿಯಾಗಿ ಅಲ್ಲಿಯೇ ಉಳಿದು ಕೊನೆಯುಸಿರೆಳೆದರು. ಇವು ದುಃಖ ತರುವ ಸಂದರ್ಭಗಳಾಗಿ ಬಂದಿವೆ. ಮಂಗಳಾ ತಡೆಯಲಾಗದಷ್ಟು ದುಃಖದಿಂದ ಅಳತೊಡಗಿದಳು. ಅಮರ ಕೂಡಾ ಅಳಲು ಪ್ರಾರಂಭಿಸಿದ ಅಜ್ಜ ಸತ್ತದುದಕ್ಕಿಂತ ಹೆಚ್ಚಾಗಿ ಅವನಿಗೆ ತನ್ನ ತಾಯಿಗೆ ಪದೇ ಪದೇ ದುಃಖವಾಗುವಂತಹ ಘಟನೆಗಳೇ ಜರುಗುವುದೂ ಎಂಬ ಚಿಂತೆ ಕಾಡಿತ್ತು.

ತನ್ನ ತಂದೆಯ ಸಾವಿನಿಂದ ನೊಂದ ರವಿ ಎಲ್ಲಾ ಸಾವುಗಳು ನಮ್ಮ ಮನೆಗೆ ಬಂದಿದೆಯೋ ಏನೋ ? ಎಂಬುವಲ್ಲಿ ದುಃಖದ ಜೊತೆಗೆ ಪ್ರತಿರೋಧದ ಧ್ವನಿಯಾಗಿ ಕಂಡುಬರುತ್ತಿದೆ. ಇನ್ನೊಂದೆಡೆಗೆ ಮಂಗಳೆ ಸಾವು ತನ್ನವರನೆಲ್ಲ ಕಬಳಿಸುತ್ತಿರುವುದು ನೋಡಿ ಬೆದರಿಕೆಯಾಗುತ್ತದೆ.

ಮಂಗಳಾ ಈಗ ಪ್ರಾಧ್ಯಾಪಕಿಯ ಕಾರ್ಯದೊಡನೆ ಮಹಿಳಾ ಸಂಘಟನೆ ಮಾಡಿದ್ದಾಳೆ. ಅಲ್ಲಲ್ಲಿ ಕಾರ್ಯಕ್ರಮಗಳು ಏರ್ಪಡಿಸಿ ಅತಿಥಿಗಳನ್ನು ಕರೆಯಿಸಿ ಭಾಷಣ ಮಾಡಿಸುತ್ತಿದ್ದಾಳೆ.

ಸ್ತ್ರೀಯರು ಮೊದಲು ತಮ್ಮನ್ನು ತಾವು ಉದ್ಧರಿಸಿಕೊಂಡು ತಮ್ಮ ನೆರೆಹೊರೆಯವರನ್ನು ಹಾಗೂ ಸಮಾಜ ಉದ್ದಿರಿಸಲು ಸಾಧ್ಯ ಒಬ್ಬ ಸ್ತ್ರೀ ಇನ್ನೊಬ್ಬ ಸ್ತ್ರೀಯನ್ನು ತನ್ನಂತೆ ಎಂದು ತಿಳಿದು ನೋವು ನಲಿವು ಎರಡರಲ್ಲಿ ಸಮಭಾಗಿಯಾಗಿ ಇನ್ನೊಬ್ಬ ಸ್ತ್ರೀಯನ್ನು ಕುಟುಕದೆ ತಿರಸ್ಕರಿಸದೆ ವಿಶ್ವಾಸದಿಂದ ಕಾಣಬೇಕು ಹೀಗೆ ಮಹಿಳಾ ಸಂಘಟನೆ ಕಾರ್ಯ ನಡೆದಿದೆ.

ಅಮರ ತನ್ನ ಪ್ರಾಧ್ಯಾಪಕರಾದ ಶ್ರೀನಿವಾಸರ ಪತ್ನಿ ತಿರಿಕೊಂಡಾಗ ದುಃಖತಪ್ತರಾದ ಅವರನ್ನು ಕಂಡು ಗಂಡ ಸತ್ತಾಗ ಹೆಂಡತಿಯಾದವಳು ಎಷ್ಟು ದುಃಖಿಸುತ್ತಾಳೆ ಎಂಬುದು ಮಾತ್ರ ಕಂಡಿದ್ದೆ ಆದರೆ ಹೆಂಡತಿ ಸತ್ತಾಂಗ ಗಂಡ ದುಃಖಿಸುತ್ತಾನೆಂಬುದು ಈಗ ತಿಳಿದಿದೆನೆಂದು ಹೇಳುತ್ತಾನೆ. ಒಂದು ವಸ್ತು ಇರುವಾಗ ಅದರ ಬೆಲೆ ತಿಳಿಯುವುದಿಲ್ಲ ಅದು ದೂರವಾದಾಗ ಅದರ ಅಭಾವದಿಂದ ಅದರ ಬೆಲೆ ಏನೆಂಬುದು ಅರ್ಥವಾಗುತ್ತದೆ. ಶ್ರೀನಿವಾಸರ ಉತ್ತರ ಸಮಂಜಸತೆಯಿಂದ ಕೂಡಿದೆ. ಗಂಡ ಸತ್ತರೆ ಹೆಂಡತಿಗೆ ಯಾರು ದಿಕ್ಕಿಲದಂತಾಗುತ್ತದೆ. ಪ್ರಪಂಚವನ್ನು ಎದುರಿಸುವುದು ಒಂದು ಸಮಸ್ಯೆ ಆಗುತ್ತದೆ ಆದರೆ ದುಃಖ ಮಾತ್ರ ಇಬ್ಬರಿಗೂ ಒಂದೆ ಎಂಬುವಲ್ಲಿ ಆಧ್ಯಾತ್ಮಿಕ ನೆಲಯು ಕಂಡುಬರುತ್ತದೆ.

ಈ ಮಧ್ಯೆ ಕಾದಂಬರಿಯಲ್ಲಿ ಶಿವಮೊಗ್ಗದ ಜಿಲ್ಲಾಧಿಕಾರಿ ಡಿ.ಬಿ. ಸೆಕ್ಸೇನಾರ ಪ್ರವೇಶ ಇದು ಮಂಗಳೆಯ ಬದುಕಿನ ಬಿಂಬವನ್ನು ಬದಲಿಸಿರುವುದು ಕಂಡು ಬಂದಿದೆ. ಹೆಂಡತಿಯನ್ನು ಕಳೆದುಕೊಂಡು ಜೀವನದಲ್ಲಿ ಜಿಗುಪ್ಸೆಗೊಂಡು ಮಡದಿ ನೀಡಿದ ಪ್ರೀತಿಯ ಕಾಣಿಕೆಯಾದ ಹೆಣ್ಣು ಮಗುವಿನ ಹೊಣೆಗಾರಿಕೆ ನಿರ್ವಹಿಸುತ್ತಾ ಕಾಲ ಕಳೆಯುತ್ತಿದ್ದರು. ಇಲ್ಲಿ ಜಿಲ್ಲಾಧಿಕಾರಿ ಹಾಗೂ ಮಂಗಳೆಯ ನಡುವೆ ಪರಿಚಯ ಮತ್ತು ಆಹ್ವಾನಗಳು ಕಾದಂಬರಿಯ ದಿಕ್ಕನ್ನೇ ಬದಲಿಸಿದೆ. ನೊಂದ ಜೀವಕ್ಕೆ `ನೊಂದ ಜೀವವೇ ಸುಖ ನೀಡಬಲ್ಲದು` ಎಂಬುವ ಮಾತು ಅರ್ಥಬದ್ಧವಾಗಿ ಬಳಸಲಾಗಿದೆ. ನಾವೇನು ಪಾಪದ ಕೆಲಸ ಮಾಡುತ್ತಿಲ್ಲ. ಒಡೆದಿರುವ ನಾವೆಯನ್ನು ಜೋಡಿಸಲು ಹೊರಟಿದ್ದೇವೆ ಬದುಕಿನಲ್ಲಿ ಉಳಿದಿರುವ ಸ್ವಲ್ಪ ಕಾಲವನ್ನಾದರೂ ನೆಮ್ಮದಿಯಿಂದ ಕಳೆಯೋಣವೆಂದು ಆಶಿಸುತ್ತಿದ್ದೇನೆ. ಅದು ಸಹ ಪರಸ್ಪರ ಪೂರ್ಣ ಒಪ್ಪಿಗೆಯಿಂದ ಮಾತ್ರ ಎಂಬುದು ನೊಂದ ಜೀವಕ್ಕೆ ಸಾಂತ್ವನ ಹೇಳಿದ ರೀತಿಯಲ್ಲಿ ಈ ಮಾತು ಬಳಸಲಾಗಿದೆ.

ಒಂದೆಡೆಗೆ ಜಿಲ್ಲಾಧಿಕಾರಿ ಹಾಗು ಮಂಗಳಾ ತಾವು ಮದುವೆಯಾಗುವ ದಿನಾಂಕ ನಿಗದಿಪಡಿಸಿದ್ದರೆ ಇನ್ನೊಂದೆಡೆಗೆ ಅಮರ ಶ್ರೀನಿವಾಸರಾಯರನ್ನು ತನ್ನ ತಾಯಿಯೊಂದಿಗೆ ಮದುವೆಯಾಗಲು ಆಹ್ವಾನಿಸಿದ್ದಾನೆ. ಇಲ್ಲಿ ಮಂಗಳಾ ಜಿಲ್ಲಾಧಿಕಾರಿಯೊಂದಿಗೆ ಮದುವೆಯಾಗುವಳೋ ಅಥವಾ ತನ್ನ ಮಗನ ಮನಸ್ಥಾಪ ಅರಿತು ಶ್ರೀನಿವಾಸನೊಂದಿಗೆ ಮದುವೆಯಾಗುವಳೋ ಎಂಬ ಕುತುಹಲ ಕಾದಂಬರಿಯಲ್ಲಿ ಕಾಯ್ದಿರಿಸಲಾಗಿದೆ.

ಸಮಾಜವನ್ನು ಎದುರಿಸಿ ಬದುಕುವ ಧೈರ್ಯ ಬೇಕು. ಆ ತಾಕತ್ತು ಭಾರತೀಯ ನಾರಿಗೆ ಬಂದಾಗ ಮಾತ್ರ ಮರು ಮದುವೆ ಇಲ್ಲದಿದ್ದರೆ ಎಷ್ಟು ಚಿಕ್ಕ ಪ್ರಾಯದ ಹೆಣ್ಣಾದರೂ ಚಿಂತೆ, ದುಃಖದಲ್ಲಿ ಕಾಲ ನೂಕಿ ತನ್ನ ಜೀವನಮಾನ ಕಳೆಯುವಳೇ ವಿನಃ ಮರು ಮದುವೆಯಾಗಲಾರಳು ಎಂಬ ಕಟು ಸತ್ಯವಾದ ಮಾತು ಹೊರ ಹೊಮ್ಮಿದೆ. ಹುಟ್ಟು ಸಾವು ನಮ್ಮ ಕೈಯಲಿಲ್ಲ. ನಮ್ಮ ಪಾಲಿಗೆ ಬಂದುದನ್ನು ನಾವು ಸ್ವೀಕರಿಸಬೇಕು. ಮುಂದಿನ ಕಷ್ಟವನ್ನು ಕಲ್ಪಿಸಿಕೊಂಡು ಇಂದಿನ ಸುಖವನ್ನು ಹಾಳು ಮಾಡಿಕೊಳ್ಳುವದು ದಡ್ಡತನದ ನೀರ್ಧಾರ ಎಂಬುವಲ್ಲಿನ ಮಾತುಗಳು ವೈಚಾರಿಕತೆಯಿಂದ ಕೂಡಿವೆ.

ಜನರಿಗೆ ತಾನು ಅಳುತ್ತಾ ಕುಳಿತರೆ ಸಂತೋಷ ! ಆಗ ಸಮಾಧಾನ ಮಾಡಲು ಜನ ಮುಂದಾಗಿ ಬರುತ್ತಾರೆ. ತಾನು ಸಂತೋಷದಲ್ಲಿ ಇರ್ತೀನಿ ಎಂದರೆ ಮೂತಿ ತಿರುವುತ್ತಾನೆ `ವಿದುರನಿಗೆ ಸದ್ದು ಗದ್ದಲವಿಲ್ಲದೆ ಮರು ಮದುವೆ ಆಗುತ್ತದೆ` ಯಾರಿಗೂ ಆಶ್ಚರ್ಯವೆನಿಸುವುದಿಲ್ಲ. ಆದರೆ ಒಬ್ಬ ವಿಧವೆ ಮರು ಮದುವೆ ಆಗುತ್ತಾಳೆಂದರೆ ಎಲ್ಲರಿಗೂ ಚಳಿ ಜ್ವರ ಪುರುಷನಂತೆ ಸ್ತ್ರೀಗೂ ಆಸೆ ಆಕಾಂಕ್ಷೆಗಳಿವೆ ಎಂಬುದು ಯಾರು ಅರ್ಥಮಾಡಿಕೊಳ್ಳಲಾರರು ಎಂಬವ ಬಂಡಾಯದ ಧ್ವನಿ ಎದ್ದು ಕಾಣುತ್ತಿದೆ.

ಕಾದಂಬರಿಯ ಅಲ್ಲಲ್ಲಿ ಲೇಖಕಿ ಒಂದೇ ಸ್ವಭಾವದ ಅನೇಕರನ್ನು ಪರಿಚಯಿಸಿರುವದು ಯಕ್ಷ ಪ್ರಶ್ನೆಯಾಗಿದೆ. ಓದುಗರ ಮನಗೆಲ್ಲುವ ಪಾತ್ರಗಳಾದ ಶ್ರೀನಾಥ, ಶೇಖರ, ಶ್ರೀನಿವಾಸ, ಡಿ.ಬಿ. ಸಕ್ಸೆನಾ ಅವರ ಆದರ್ಶ ಗುಣಗಳನ್ನು ಹೊಂದಿದವರೆ ಆಗಿದ್ದಾರೆ. ಜೊತೆಗೆ ಮಂಗಳಾ, ಲೀಲಾವತಿ, ಅಹಲ್ಯೆಯ ತಾಯಿ, ಈ ಮೊದಲಾದವರ ಕಥೆಯು ಒಂದೇ ರೀತಿಯಾಗಿರುವುದರಿಂದ ಇಲ್ಲಿ ಕಥಾ ನಾಯಕಿಯ ಪಾತ್ರ ಕೊನೆಯಲ್ಲಿ ಎದ್ದು ಬರುವಂತೆ ಕಾಣುತ್ತಿಲ್ಲ ಗೌಣವಾಗಿ ಕಂಡುಬರುತ್ತಿದೆ. ಹೋಲಿಕೆಯಲ್ಲಿ ಭಿನ್ನತೆ ಕಾಯ್ದುಕೊಳ್ಳಬೇಕಾಗಿತು.

ಈ ಕಾದಂಬರಿ ಸಾಮಾಜಿಕ ಕಾದಂಬರಿಯಾಗಿದ್ದು ಸಮಾಜದ ಮೌಢ್ಯವನ್ನು ಹೊರಗೆಳೆವ ಸಾಹಸ ಮಾಡುತ್ತದೆ. ಗೊಡ್ಡ ಸಂಪ್ರದಾಯಗಳಿಗೆ ಸದ್ದು ಹೊಡೆದು ನಿಲ್ಲುತ್ತದೆ. ಬಾಲ್ಯ ವಿವಾಹ, ವಿರೋಧಿಸುವ ಅಥವಾ ಪುನರ ವಿವಾಹವನ್ನು ಪ್ರೋತ್ಸಾಹಿಸುವ ಕಾರ್ಯ ಕಾದಂಬರಿ ಮಾಡುತ್ತದೆ. ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವ ಬಂಡೇಳುವ ಪ್ರಗತಿಪರ ಚಿಂತನ ಮನೋಭವ ಬೆಳೆಸುವ ಕಾದಂಬರಿ ಇದಾಗಿದೆ. [1]ಜಿಲ್ಲೆಯ ಮೊದಲ ಕಾದಂಬರಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಈ ಕಾದಂಬರಿಯ ನಾಯಕಿ ಮಂಗಳಾ ಚಿರವಾಗಿ ಉಳಿದಿದ್ದಾಳೆ. ಬೆಗಳೂರಿನಿಂದ ಪ್ರಕಟವಾಗುತ್ತಿರುವ ಸ್ತ್ರೀ ಜಾಗೃತಿ ಮಾಸ ಪತ್ರಿಕೆಯಲ್ಲಿ ಧಾರವಾಹಿಯಾಗಿ ಪತ್ರಿಕೆಯ ಸಂಪಾದಕಿ ಜಿ.ಎಚ್. ಶೋಭಾ ಪ್ರಕಟಿಸುತ್ತಿದ್ದಾರೆ. ಇದರಿಂದ ಈ ಕಾದಂಬರಿಯ ಸೊಬಗು ಇನ್ನಷ್ಟು ಹೆಚ್ಚಿದ್ದು ವಿಶೇಷವಾಗಿ ಮಹಿಳೆಯರಲ್ಲಿ ಜಾಗೃತಿ ಮೂಡಿಸುವಲ್ಲಿ ಉಪಯೋಗಕಾರಿಯಾಗಲಿದೆ.

---

1. ಬೀದರ ಜಿಲ್ಲಾ ಮಹಿಳಾ ಸಾಹಿತಿಗಳು -ಯಶೋದಮ್ಮ ಸಿದ್‌ಬಟ್ಟೆ ಪುಸಂ. 17

**ವಿಶ್ವಮೇಘ :**

ವಿಶ್ವಮೇಘ ಇದು ಯಶೋದಮ್ಮ ಸಿದ್‌ಬಟ್ಟೆಯವರ ಎರಡನೇ ಕಾದಂಬರಿಯಾಗಿದ್ದು, ಇದೊಂದು ಸಾಮಾಜಿಕ ಕಾದಂಬರಿಯಾಗಿದೆ. ಕರ್ನಾಟಕ ಲೇಖಕಿಯರ ಸಂಘ (ರಿ), ಬೀದರ ನಿಂದ ಪ್ರಕಟಗೊಂಡ ಈ ಕಾದಂಬರಿ. ಒಬ್ಬ ಸೃಜನಶೀಲ ಲೇಖಕಿಯ ಸೃಜನಾತ್ಮಕ ಕಾದಂಬರಿ ಇದಾಗಿದೆ. ಓದುಗರನ್ನು ಸೆರೆ ಹಿಡಿಯುವ ಕಲಾತ್ಮಕತೆ ಕಾದಂಬರಿಯುದ್ದಕ್ಕೂ ಕಂಡುಬಂದಿದೆ. ಭಿನ್ನ ರೀತಿಯಿಂದ ಕೂಡಿರುವ ವಸ್ತು ಒಳಗೊಂಡಿರುವ ಕಾದಂಬರಿಯಲ್ಲಿ ವಿಷಯ ಹಾಗೂ ಪಾತ್ರಗಳ ನಿರೂಪಣೆ ಅಚ್ಚುಕಟ್ಟುತನದಿಂದ ಕೂಡಿದೆ. ಕಣ್ಣಿಗೆ ಕಟ್ಟುವಂತಹ ವರ್ಣನೆಯಿಂದ ಕೂಡಿದ ವಿಶ್ವ ಮೇಘ ಕಾದಂಬರಿ ಮತ್ತೇ ಮತ್ತೇ ಓದಬೇಕೆಂಬ ಹಂಬಲ ಹುಟ್ಟಿಸುವ ಕೃತಿಯಾಗಿದೆ.

ಕೌಟುಂಬಿಕ ಪ್ರಧಾನ ವಸ್ತುಗಳನ್ನು ಆಯ್ಕೆ ಮಾಡಿಕೊಂಡು ಶೈಲಿ ಹಾಗೂ ನಿರೂಪಣೆಯಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಕಾಯ್ದುಕೊಂಡಿದ್ದಾರೆ. ತಮ್ಮ ಕಾದಂಬರಿಯಲ್ಲಿ ವೈವಿಧ್ಯಮಯ ಪಾತ್ರ ಚಿತ್ರಗಳನ್ನು ಸೃಷ್ಠಿಸಿದ್ದಾರೆ. ಯಾರಿಗೂ ಏನು ಅನ್ಯಾಯ ಮಾಡದ, ನೋವುಂಟು ಮಾಡದ ಜಗನ್ನಾಥರಾಯರು, ಕಾಮಾಕ್ಷಿ, ಮಲ್ಲಪ್ಪ, ಉಷಾ, ನಂಜುಂಡಪ್ಪ, ಪಾರ್ವತಿಯಂತಹ ಪಾತ್ರಗಳು ಆದರ್ಶಮಯವಾಗಿವೆ. ಇದೇ ತಲೆಮಾರಿನ ಶಂಕರಪ್ಪ ಹಾಗೂ ಇವರ ಹೆಂಡತಿಯ ಪಾತ್ರಗಳು ವ್ಯತಿರಿಕ್ತವಾಗಿ ಮೆರೆಯುತ್ತವೆ. ಜೊತೆಗೆ ವಿಶ್ವ, ಮೇಘ, ಮಾಲ್ತೇಶ, ಗಗನ, ರವಿ, ಶೀಲ, ಶೃತಿ ಮುಂತಾದವು ಕೂಡಾ ಆದರ್ಶದ ಸಾಲಿನಲ್ಲಿ ನಿಲ್ಲುವಂತಹ ಪತ್ರಗಳನು ಲೇಖಕಿ ತನ್ನಿಷ್ಟದಂತೆ ಸೃಜನಾತ್ಮಕವಾಗಿ ನಿರೂಪಿಸಿದ್ದಾರೆ.

ಕಾದಂಬರಿಯ ಕೇಂದ್ರ ಬಿಂದುವಾಗಿರುವ ಡಾ. ಮೇಘಾಳ ಪಾತ್ರ ಎಚ್ಚರಿಕೆಯಿಂದ ಸೃಷ್ಟಿಸಿದರಲ್ಲಿ ಲೇಖಕಿಯ ಕಲಾತ್ಮಕತೆ ಎದ್ದು ಕಾಣುತ್ತಾನೆ. ವಸ್ತು ನಿರೂಪಣೆ, ವ್ಯಕ್ತಿ ವಿಶಿಷ್ಟತೆಯ ಸುತ್ತಲು ಘಟನೆಯನ್ನು ಹಣೆದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ವೈವಿಧ್ಯಮಯ ಪಾತ್ರಗಳಿಂದ ಹೆಣೆದಿರುವ ಕಾದಂಬರಿಯು ನಾಯಕಿ ಡಾ. ಮೇಘಾಳ ದುರಂತ ಬದುಕಿನ ಮೇಲೆ ಬೆಳಕು ಚಲ್ಲುತ್ತಾರೆ. ಶ್ರೀಮಂತ ವಕೀಲ ಹಾಗೂ ಪ್ರಾಧ್ಯಾಕಿಯ ಮಗಳಾಗಿ ಗರ್ವ, ಅಹಂಕಾರದಿಂದ ದೂರವಿರುವ ಇವಳು ಬಾಳಿದುದ್ದಕ್ಕೂ ಅನುಭವಿಸಿದ ಯಾತನೆ, ನೋವು, ನೆಲುವು, ಸುಖದುಃಖಗಳನ್ನು ಕಣ್ಣಿನ ಮುಂದೆ ಬಂದಂತೆ ಚಿತ್ರಿಸಿದ್ದಾರೆ. ನಾಯಕಿಯ ಬದುಕಿನ ಘಗನೆಗಳನ್‌ನು ಅರ್ಥಪೂರ್ಣವಾಗಿ ನಿರೂಪಿಸಲಾಗಿದೆ. ಒಂದು ಸಂಕೀರ್ಣ ಪಾತ್ರವನ್ನು ಚಿತ್ರಿಸುವುದು ಸುಲಭವಾದ ಮಾತಲ್ಲ. ಇಂತಹ ವಸ್ತುವನ್ನು ಪಳಗಿದ ಕಾದಂಬರಿಕಾರನೇ ನಿರ್ವಹಿಸಬಲ್ಲ ಎಂಬ ವಾದವನ್ನು ಹಿಂದೆ ಹಾಕಿದ್ದಾರೆ. ಯಶೋದಮ್ಮ ಸಿದ್‌ಬಟ್ಟೆಯವರು. ಮೇಘ ತನ್ನ ಹೆತ್ತವರನ್ನು , ವಿಶ್ವನ ಹೆತ್ತವರನ್ನು, ಗಂಡ ಮಾಲತೇಶನ ಹೆತ್ತವರನ್ನು, ಹಾಗೆಯೇ ಗಂಡ

ಮಕ್ಕಳೆಲ್ಲರ ಮನಸನ್ನು ಗೆಲ್ಲುವ ಅದ್ಭುತ ಹೆಣ್ಣಾಗಿ, ಶಕ್ತಿಯಾಗಿ ಚಿತ್ರಿತವಾಗಿರುವದು ವಿಶೇಷ ವೆನಿಸಿದ್ದು ರೋಚಕವಾಗಿ ಮೂಡಿಬಂದಿದೆ.

ಕಾದಬಂರಿಯ ನಿರೂಪಣೆಯ ಶೈಲಿ ಸಾಮಾನ್ಯ ಓದುಗರನ್ನು ಸ್ವಭಾವಿಕವಾಗಿ, ಆಪ್ತವಾಗಿ ಸೆಳೆಯುತ್ತದೆ. ಮಹಿಳಾ ಲೇಖಕಿಯರ ಕಾದಂಬರಿಯಾಗಿದ್ದರೂ, ಪಾತ್ರ ರಚನೆ ಸನ್ನಿವೇಶಗಳ ನಿರೂಪಣೆ ಸರಳವೆನಿಸುವ ವಿಧಾನ ಹಾಗೂ ಶೈಲಿಯನ್ನು ಅಳವಡಿಸಿಕೊಂಡಿದೆ, ಕಾದಂಬರಿಯ ಯಾವ ಭಾಗದಲ್ಲಿಯು ಭಾವಾವೇಶತೆ, ಕಂಡು ಬರುವುದಿಲ್ಲ. [1]ಸಾಹಿತ್ಯ ನಿರ್ಮಾಣ ಸುಲಭ ಕಾರ್ಯವಲ್ಲ ಸೃಜನಶೀಲತೆಯ ಮೂಲ ದ್ರವ್ಯವಿಲ್ಲದೆ ಸಾಹಿತಿಯಾಗೊದು ಸಾಧ್ಯವಿಲ್ಲ. ಯಾವುದೇ ಸಾಹಿತ್ಯ ರಚನೆಗೆ ಮುನ್ನ ಅಪಾರ ಸಾಹಿತ್ಯ ಅಧ್ಯಯನದ ಕೃಷಿ ಕೈದಿದರೆ ಮಾತ್ರ ಸೃಜನಶೀಲತೆಯ ಬೀಜ ಮೊಳೇರು ಗಿಡವಾಗಿ ಮರವಾಗಲು ಸಾಧ್ಯ.

ಕಾದಂಬರಿ ಬೀದರನ ಸುಪ್ರಸಿದ್ಧ ವೈದ್ಯರಾದ ಡಾ. ಜಗನ್ನಾಥ ರಾಯರ ಮಗನಾದ ವಿಶ್ವನಾಥ ತಾನು ಎಂ.ಬಿ.ಬಿ.ಎಸ್. ನಲ್ಲಿ ತೇರ್ಗಡೆಯಾಗಿರುವ ವಿಷಯ ಓದಲು ಬರೆಯಲು ಬಾರದ ತನ್ನ ತಾಯಿ ಕಾಮಾಕ್ಷಿಗೆ ಹೇಳಿ ಆಗತಾನೆ ಮನೆಗೆ ಬಂದ ತಂದಯೊಂದಿಗೆ ಸಂತೋಷ ಹಂಚಿಕೊಳ್ಳುವ ಘಟನೆಯಿಂದ ಪ್ರಾರಂಭವಾಗಿದೆ. ಇಂದಿಗೆ ನನ್ನ ಪಾಲಿನ ಕೆಲಸ ಮುಗಿಯಿತು. ಮಗ ಇನ್ನೂ ಮುಂದೆ ನೀನೆ ಎಲ್ಲಾ ನೋಡಿಕೊಳ್ಳಬೇಕೆಂಬ ಡಾ. ಜಗನ್ನಾಥರಾಯರ ಮಾತಿನಲ್ಲಿ ತನ್ನ ಬಳಲಿಕೆಯನ್ನು, ಜವಾಬ್ದಾರಿಯನ್ನು ಹಗೂರ ಮಾಡಲಿರುವ ಮಗನಾದ ಕುರಿತು ಸಂತೋಷದಲ್ಲಿ ವ್ಯಕ್ತಪಡಿಸುವುದು ಇಲ್ಲಿ ಕಂಡುಬರುತ್ತದೆ. ಇದೇ ಘಳಿಗೆಯಲ್ಲಿ ಪತ್ನಿ ಕಾಮಾಕ್ಷಿ ಮಗನ ಓದು ಮುಗಿಯಿತು. ಈ ವರ್ಷ ಅವನ ಮದುವೆ ಮಾಡಬೇಕು ಎಂಬ ಇಂಗಿತ ವ್ಯಕ್ತಪಡಿಸಿರುತ್ತಾಳೆ. ಗಂಡನ ಪ್ರತ್ಯುತ್ತರದಿಂದ ಸಂತುಷ್ಠವಾಗುವಲ್ಲಿ ಒಬ್ಬ ತಾಯಿ ತನ್ನ ಮಗನ ಭವಿಷ್ಯ ಕುರಿತು ಚಿಂತಿಸುವ ಭಾವನೆ ವ್ಯಕ್ತವಾಗಿದೆ. ಬಂಗಾರದಂತಹ ಕಾಮಾಕ್ಷಿ ಮನೆಗೆ ಬಂದ ಅತಿಥಿಗಳಿಗೆ ಅತಿಥಿ ಸತ್ಕಾರ ಮಾಡುವುದರಲ್ಲಿ, ಉಪಹಾರ ಕೊಟ್ಟು, ಒಳ್ಳೆಯ ಮಾತನಾಡಿಸುವವಳು ಜನರಿಂದ ಅನ್ನಪೂರ್ಣೇಶ್ವರಿ ಎಂದು ಕರೆಯಿಸಿಕೊಂಡವಳು ಪತಿಗೆ ಅನುರೂಪವಾದ ಸತಿಯಾಗಿ ಕಾಮಾಕ್ಷಿಯ ಪಾತ್ರ ನಿರೂಪಿಸಲಾಗಿದೆ.

ಡಾ. ಜಗನ್ನಾಥರಾಯರು ಬಡವಬಲ್ಲಿದರ ಬಂಧುಗಳಾಗಿದ್ದರು. ಮೈಸೂರಿನ ಮೆಡಿಕಲ್ ಕಾಲೇಜಿನಲ್ಲಿ ಎಂ.ಬಿ.ಬಿ.ಎಸ್. ಮುಗಿಸಿಕೊಂಡು ಬೀದರನಲ್ಲಿ ಆಸ್ಪತ್ರೆ ಆರಂಭಿಸಿದರು. ಚಿಕಿತ್ಸೆ ಪಡೆದವರು ಬೇಗ ಗುಣಮುಕ್ತರಾಗುತ್ತಿದ್ದರು. ಜನ ಇವರ ಕೈಗುಣ ತುಂಬಾ ಒಳ್ಳೆಯದು ಎಂದು ಹೊಗಳುತ್ತಿದ್ದರು. ಯಾರ ಹತ್ತಿರವು ಹಣ ಕೇಳದ ರಾಯರು ಅವರಾಗಿಯೇ ಕೊಟ್ಟಿದನ್ನು

---

1. ಗೋಕಾಕರ ಗದ್ಯ ಸಾಹಿತ್ಯ -ಡಾ. ಕೆ.ಎಸ್. ರತ್ನಮ್ಮಾ ಪು.ಸಂ. 1

ತೆಗೆದುಕೊಳ್ಳುತ್ತಿದ್ದರು.  ಬಡವರ್ಯಾರಾದರು ಬಂದರೆ ಅವರಿಗೆ ರಾಯರು ಸ್ವತಃ ಬಸ್ಸಿನ ಖರ್ಚು ಕೊಡುತ್ತಿದ್ದರು. ಇಂತಹ ಉದಾರ ಗುಣ ಹೊಂದಿದ ರಾಯರಿಂದ ಚಿಕಿತ್ಸೆ ಪಡೆದು ರೋಗಿಗಳು ವಾಸಮಾಡಿಕೊಂಡವರು  ಡಾಕ್ಟರ ಸಾಹೇಬರು ತಮ್ಮ ಕೈಯಿಂದ ಮುಟ್ಟಿದರೆ ಸಾಕು ನಮ್ಮ ಕಾಯಿಲೆ ದೂರ ಓಡಿ ಹೋಗುತ್ತದೆ ಎಂದು ಹೋಗಳುತ್ತಿದ್ದರು. ಹೊಗಳಿದರು ಉಬ್ಬದ ರಾಯರು ಯಾರ ಮನಸ್ಸಿಗೂ ನೋವಾಗದಂತೆ ಎಲ್ಲರನ್ನು ಪರೀಕ್ಷಿಸಿ, ಮಾತನಾಡಿಸಿ, ಚಿಕಿತ್ಸೆ ನೀಡುವ ದೊಡ್ಡಗುಣದ ಉದಾರಿಯಾಗಿ ಚಿತ್ರಿಸಲಾಗಿದೆ. ರೋಗಿಗಳ ದೃಷ್ಠಿಯಲ್ಲಿ ದೇವರಾಗಿದ್ದ ರಾಯರು, ಬಡವರ ಬಾಬಾ ಎಂದು ಸಂಬೋಧಿಸುತ್ತಿದ್ದರು ಪತಿಗೆ ಅನುರೂಪ, ಸತಿ, ಸತಿಗೆ ಅನುರೂಪ ಪತಿ ಅವರ ಮನೆ ದಾಸೋಹಕ್ಕೆ ಹೆಸರಾಯಿತು ಎನ್ನುವಲ್ಲಿ ರಾಯ ಹಾಗೂ ಕಾಮಾಕ್ಷಿ ಇಬ್ಬರಲ್ಲಿನ ಉದಾರ ಗುಣ, ಬಡವರ ಹಾಗೂ ರೋಗಿಗಳ ಮೇಲಿನ ಪ್ರೀತಿ ವಿಶ್ವಾಸ, ದೈನ್ಯತೆಯನ್ನು ಕಾರಣವಾಗಿ ಮಾಡಲಾಗಿದೆ.

ರಾಯರ ಏಕೈಕ ಪುತ್ರಿ ಶೀಲಳನ್ನು ಗುಲಬರ್ಗಾದ ಶೆಂಕರೆಪ್ಪಾ ನವರ ಮಗ ಗಗನನೊಂದಿಗಿನ ಮದುವೆ ವಿಭಕ್ತ ಕುಟುಂಬದ ವರ್ಣನೆ ಮೂಡಿಬಂದಿದೆ ಚಿಕ್ಕ ಮನೆಯಲ್ಲಿ ದಂಪತಿಗಳಿಗೆ ಪ್ರತ್ಯೇಕ ಕೋಠಡಿ ಇಲ್ಲ  ತಂದೆ-ತಾಯಿ, ಗಗನ, ಅಕ್ಕ ಹೇಮಾ, ಅವಳ ಮಕ್ಕಳು, ಶೈಲಾ, ಮೈತ್ರಾ, ಮೀನಾ ಹೀಗಿರುವ ಈ ಕುಟುಂಬದಲ್ಲಿ ಶೀಲಳಿಗೆ ಒಂದು ನಿಮಿಷ ವಿಶ್ರಾಂತಿಗೆ ಅವಕಾಶವಿಲ್ಲದೆ ತೊಳಲಾಡುವುದು. ಗಂಡನಿಗೆ ಏನಾದರೂ ಹೇಳಬೇಕಿದ್ದರು ರಾತ್ರಿ ಮಲಗುವಾಗಲೇ ಹೇಳಬೇಕು. ಸೋತು ಬಂದ ಗಗನ ನನ್ನ ಕೆಲಸವೇ ನನ್ನ ತಲೆ ತಿನ್ನುತಿದೆ. ಇನ್ನು ನೀನು ಏನು ಹೇಳಬೇಡ ಎನ್ನುವುದು. ಈ ನೋವು ಸಂಕಟ ಮನದೊಳಗೆ ಉಂಡು ಮೌನಳಾದ ಶೀಲಾ ಗಂಡನಿಗೆ ಏನು ಹೇಳಲಾರದೆ ಅತ್ತೆ ಮಾವನೆದುರು ಪ್ರತಿಭಟಿಸಲಾಗದೆ ಅದೇ ಊರಿನಲಲಿರುವ ತನ್ನ ಅಣ್ಣನಿಗೂ ಏನು ತಿಳಿಸದೆ, ತಂದೆ ತಾಯಿಗೆ ಇಂತಹ ವಿಷಯ ಹೇಳಿ ನೋವು ಕೊಡಬಾರದೆಂದು ಸಹನೆಯಿಂದ ಗಂಡನೊಡನೆ ಹಾಗೂ ಅತ್ತೆ ಮಾವರೊಂದಿಗೆ ದುಃಖದ, ನೋವಿನ ಜೀವನ ನಡೆಸುವ ಸಂಕಟದ ಸಂದರ್ಭ ಲೇಖಕಿ ಚಿತ್ರಿಸಿದ್ದಾರೆ.

ಶೀಲಾಳ ಮಾವ ಶಂಕರಪ್ಪನ ವ್ಯಕ್ತಿತ್ವವನ್ನು ಲೇಖಕಿ ತುಂಬಾ ಜಾಗರುಕತೆಯಿಂದ ಚಿತ್ರಿಸಿದ್ದಾರೆ.  ಬರುಶಟಗನ ಭಕ್ತಿ ದಿಟವೆ0ದು ನಂಬಲು ಬೇಡ ಮಠದೊಳಗಿನ ಬೆಕ್ಕು ಇಲಿಯ ಕಂಡಡೆ ಪುಟನೆಗೆದಂತಾಯಿತು. ರಾಮನಾಥ ಎನ್ನುವ ವಚನದಂತೆ ಶೀಲಾಳ ಬಗ್ಗೆ ಮಗನ ಮುಂದೆ ವರದಕ್ಷಿಣೆ ತರಲು ಹೇಳುವುದು. ತಂಗಿಗೆ ಕರೆಯಲು ಬಂದ ವಿಶ್ವನಾಥನಿಗೆ ಇಪ್ಪತ್ತೆರಡು ವರ್ಷ ಮಗಳು ಮನೆಯಲ್ಲಿ ಉಳಿದದು ಸಾಕಾಗಲಿಲ್ಲವೆ ? ಎಂದು ಪ್ರಶ್ನಿಸುವುದು ರಾಯರು ಹಾಗೂ ಕಾಮಾಕ್ಷಿಯರ ಸಮಕ್ಷಮದಲ್ಲಿ ಅಳುತ್ತಿರುವ ಶೀಲಾಳ ಕುರಿತು ಅಪರೂಪವಾಗಿ ನಿನ್ನ ತಂದೆ ತಾಯಿ ಮನೆಗೆ ಬಂದರೆ ನೀನು ಈ ರೀತಿ ಅಳುತ್ತಾ ಸ್ವಾಗತ ಮಾಡುವದೆ ?  ನಮ್ಮ ಒಬ್ಬಳೇ ಸೊಸೆ

ಅಳುವುದನ್ನು ನೋಡಿದರ ನಮ್ಮ ಮನಸ್ಸು ಹೇಗಾಗಬೇಕು ಎನ್ನುವುದು. ವಿಶ್ವನಾಥನ ಮರಣದ ನಂತರ ಆಸ್ತಿಯಲ್ಲಿ ಪಾಲು ಕೇಳು ಎಂದು ಹೇಳುವುದು. ವೈಭವನಿಗೆ ಮನೆಯಲ್ಲಿ ಪಾಲನೆ ಮಾಡುವಾಗ ವಿರೋಧಿಸುವುದು ಚಿತ್ರಿಸಲಾಗಿದೆ.

ಕಾದಂಬರಿಯ ದುರಂತ ನಾಯಕ ವಿಶ್ವನಾಥ ಡಾ. ಜಗನ್ನಾಥ ರಾಯರ ಹಾಗೂ ಕಾಮಾಕ್ಷಿಯ ಏಕೈಕ ಮಗ ವೈದ್ಯನಾಗಿ ಬಂದಿದ್ದಾನೆ. ಬೆಳೆದ ಮಗನ ಮದುವೆ ಡಾ. ಮೇಘಳೊಂದಿಗೆ ನಿಶ್ಚಯಿಸಲಾಗಿದೆ. ಡಾ. ವಿಶ್ವನಾಥ ಹೃದಯ ಘಾತಕ್ಕೆ ಒಳಗಾಗಿದ್ದಾನೆ. ಹೈದ್ರಾಬಾದಿಗೆ ಆಂಬುಲೆನ್ಸನಲ್ಲಿ ಕರೆದೊಯ್ಯುವದು. ಏನಾಗಿದೆ ನನ್ನ ಮಗನಿಗೆ  ಎಂದು ತಾಯಿ ಅಳಲು ಪ್ರಾರಂಭಿಸಿದಳು. ನೋವು ಉಲ್ಬಣಗೊಂಡು ಕಡಿಮೆಯಾಗದಿದ್ದಾಗ ಮತ್ತೆ ವಿಶ್ವನನ್ನು ಬೀದರಗೆ ಕರೆ ತಂದಾಗ ಮೇಘಾಳ ತಂದೆ ವಕೀಲರ ಸಲಹೆಯ ಮೇರೆಗೆ ಬಾಂಬೆಗೆ ಕರೆದುಕೊಂಡು ಹೋಗುವಾಗ ಕಾಮಾಕ್ಷಿಯ ಮಾತೃವಾತ್ಸಲ್ಯ ಲೇಖಕಿ ಎತ್ತಿ ತೋರಿಸಿದ್ದಾರೆ. ಮಗನ ಸ್ಥಿತಿ ಅರಿತ ರಾಯರು ಮೌನವಾಗಿರುವದು.  ಆದರೆ ಕಾಮಾಕ್ಷಿ ಬಾಂಬೆಗೆ ಹೋಗಲು ಸಿದ್ಧಳಾಗಿದಳು. ವಿಶ್ವನಿಗೆ ವಿಶೇಷ ನಿಗಾ ಘಟಕದಲ್ಲಿಟಾಗ ತಾಯಿ ಮಗನೊಂದಿಗೆಯೆ ಇರುವಳು. ತಾನು ಬದುಕುವುದಿಲ್ಲವೆಂದು ತಿಳಿದಾಗ ವಿಶ್ವ ಮೇಘಾಳಿಗೆ ಇನ್ನೊಂದು ಮದುವೆ ಮಾಡಿಕೊಳ್ಳಲು ಹೇಳಿದಾಗ ನೀವಿಬ್ಬರು ಓಡಾಡುವುದನ್ನು ನಾವು ನೋಡಬೇಕು ನಿನಗೇನು ಆಗುವುದಿಲ್ಲವೆಂದು ಸಮಾಧಾನ ಹೇಳುತ್ತಾಳೆ.

ಭೂ ಲೋಕದ ಯಾತ್ರೆ ಮುಗಿಸಿಕೊಂಡು ಹೋದ ವಿಶ್ವನಾಥನ. ಈಗ ಡಾ. ಜಗನ್ನಾಥರಾಯರ ಮನೆಯಲ್ಲಿ ಸ್ಮಶಾನ ಮೌನ ಆವರಿಸಿದೆ. ಕಾಮಾಕ್ಷಿ ಮತ್ತು ಜಗನ್ನಾಥರಾಯರ ದುಃಖ ಮುಗಿಲು ಮುಟ್ಟಿದೆ. `ಮಗನ ಮದುವೆಗಾಗಿ ಅಲಂಕಾರಗೊಂಡ ಮನೆ ಕಳಾಹೀನವಾಗಿ ಕಾಣತೊಡಗಿದೆ`  `ಜನಸೇವೆಯೇ ಜನಾರ್ದನ ಸೇವೆ`  ಎಂದು ನಂಬಿದ ಜಗನ್ನಾಥರಾಯರು ಅಪ್ಪಾ ಶಿವಾ  ಬಸವತಂದೆ  ಏನಿದೆಲ್ಲ ನಿನ್ನ ಆಟ ?  ಯಾವ ಜನ್ಮದ ಪಾಪಕ್ಕೆ ನನಗೆ ಈ ಶಿಕ್ಷೆ ಎಂದು ಅಂಗೈಯಲ್ಲಿ ಲಿಂಗ ಹಿಡಿದು ಕಣ್ಣೀರು ಸುರಿಸುತ್ತಾ ಪೂಜೆ ಮಾಡುತ್ತಿದ್ದರೆ ಕಾಮಾಕ್ಷಿ ಊಟವಿಲ್ಲದೆ ಅಳುತ್ತಾ ಮಲಗುವಳು. “ಪುತ್ರ ಶೋಕಂ ಜೀವನ ಪರ್ಯಂತಂ”  ಎನ್ನುವಂತೆ ಆಗಿದೆ. ಈ ದಂಪತಿಗಳ ಸ್ಥಿತಿ ಒಬ್ಬರಿಗೆ ಕಷ್ಟವಾದರೆ ಇನ್ನೊಬ್ಬರಿಗೆ ಇಷ್ಟ ಎನ್ನುವಂತೆ ಶೀಲಾಳ ಮಾವನಿಗೆ ಒಳಗೊಳಗೆ ಸಂತೋಷ. ಇದ್ದ ಒಬ್ಬ ಮಗ ಮದುವೆ ಆಗದೆ ಸತ್ತ. ಬೀಗರು ಇನ್ನು ಪುತ್ರಶೋಕ ತಾಳಲಾರದೆ ಆದಷ್ಟು ಬೇಗ ಸಾವನ್ನಪ್ಪುತ್ತಾರೆ. ಆನಂತರ ಅವರ ಎಲ್ಲಾ ಆಸ್ತಿ ತಮ್ಮ ಸೊಸೆಯದಾಗುತ್ತದೆ. ದೇವರು ಕಣ್ಣು ಬಿಟ್ಟರೆ ಸಕಲ ಸಂಪತ್ತು ತಮ್ಮದಾಗುತದೆಂದು ಹಂಬಲ ಅವರದಾಗಿದೆ.

ಕಾಮಾಕ್ಷಿ ತನ್ನ ಮಗನನ್ನು ನೆನೆದು ಅಳುವದು ಮಗಳಾದ ಶೀಲಾ ತವರು ಮನೆಗೆ ಬಂದಾಗ ಸಂತೋಷ ವ್ಯಕ್ತಪಡಿಸುವುದು ತನ್ನ ಸಾಕು ಮಗನೆಂದೆ ಅರಿತ ವೈಭವ ವಿಶ್ವನಾಥನ ರೂಪ ಇವನ ಕಂಡುಕೊಳ್ಳುವುದು ಪತಿಯೆ ಪರಮೇಶ್ವರನೆಂದು ತಿಳಿದಿದ್ದ ಕಾಮಾಕ್ಷಿ ಗಂಡನ ಮಾತನ್ನು ವೇದವಾಕ್ಯವೆಂದು ತಿಳಿದಿದಳು. ವೈಭವವನ್ನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗಿಂತ ಹೆಚ್ಚಿನ ಪ್ರೀತಿಯಿಂದ ಮಗುವನ್ನು ಸಾಕುತಿರುವುದು. ಕಪಟವರಿಯದ ಕಾಮಾಕ್ಷಿ ಮಗುವನ್ನು ಎತ್ತಿಕೊಂಡು ಮುದ್ದಾಡಿ ಸಂತೋಷಿಸುತ್ತಿದ್ದಳು ಎಂಬ ಮಾತು ಕಾಮಾಕ್ಷಿಯ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿ ಕಂಡುಬಂದಿದೆ.

ಸೃಜನಶಿಲ ಲೇಖಕಿ ಕಾಮಾಕ್ಷಿಯ ಪಾತ್ರ ವಿಶಿಷ್ಟವಾಗಿ ಚಿತ್ರಿಸಲಾಗಿದೆ. ಸಾಕು ಮಗನಿಗೆ ಈ ವಯಸ್ಸಿನಲ್ಲಿ ಸಾಕುವ ಬಯಕೆ ನಿಮಗೇಕೆ ಎಂದಾಗ ತನ್ನ ಪತಿ ಹೇಳಿದನ್ನು ಮಾಡುವುದು ನನ್ನ ಧರ್ಮ. ಅವರು ನನ್ನ ಪಾಲಿನ ದೇವರು ನನಗೆ ಅವರೆಂದು ಕೇಡು ಬಗೆಯಲಾರರೆಂಬ ವಿಶ್ವಾಸ ಹೊಂದಿದ ಕಾಮಾಕ್ಷಿ ಕಪಟವರಿಯದ ಹೆಣ್ಣು. ವೈಭವ ಬರುವುದನ್ನೇ ದಾರಿ ನೋಡುತ್ತಾ ಕೂಡುವಳು. ನೆರೆಹೊರೆಯವರಿಗೆ ವಿಷಯ ತಿಳಿಸಿ ತಾನು ಸಂತೋಷ ಪಡುವ ವ್ಯಕ್ತಿತ್ವ ಕಾಮಾಕ್ಷಿಯದ್ದು. ಮಗನ ನೆನೆದು ಅಳುವಾಗ ಕಾರಣ ಕೇಳಿದ ವೈಭವನಿಗೆ ಕಣ್ಣಿಗೆ ಏನು ಬಿತ್ತು ಎಂದು ಹೇಳುವಳು. ತಾಯಿಗೆ ನೀನು ಅತ್ತರೆ ಮುಂಬೈಗೆ ಹೋಗುತ್ತೇನೆಂದಾಗ ನೀನು ಇನ್ನು ನನ್ನನ್ನು ಬಿಟ್ಟು ಎಲ್ಲೂ ಹೋಗಕೂಡದೆಂದು ಹೋಗುವ ಮಾತು ಆಡಬೇಡವೆಂದು ಖಡಾಖಂಡಿತವಾಗಿ, ಸಿಟ್ಟಿನಿಂದ, ವಾತ್ಸಲ್ಯಪೂರ್ಣ ದೃಷ್ಟಿ ಬೀರುವುದು. ಮಗನಾದ ಡಾ. ವೈಭವ, ಗಂಡನಾದ ಡಾ. ಜಗನ್ನಾಥರಿಗೆ ಮನೆಗೆ ಬಂದಾಗ ಬಿಸಿ ಬಿಸಿಯಾದ ತಿಂಡಿ, ಕಾಫಿ ಮಾಡಿಕೊಡುತ್ತಿದದ್ದು ವೈಭವನ ಹೆಂಡತಿ ವೈಶಾಲಿಯೊಂದಿಗೆ ಪ್ರೀತಿಯಿಂದ ನಡೆದುಕೊಳ್ಳುವುದು ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ.

ದುರಂತ ನಾಯಕಿ ಮೇಘಾ ಕಾದಂಬರಿಯ ಕೇಂದ್ರಬಿಂದುವಾಗಿದ್ದು, ವಿಶಿಷ್ಟ ವ್ಯಕ್ತಿತ್ವದ ಸುರಸುಂದರಿ. ಪಾಪ ಪ್ರಜ್ಞೆಯ ಸುಳಿವಿಲ್ಲದ ಮೇಘಾ ಮನೆಯಲ್ಲಿ ಯಾರು ಇಲ್ಲದೆ ಇರುವಾಗ ಡಾ. ವಿಶ್ವನಾಥನಿಗೆ ಮನೆಗೆ ಬರಲು ಹೇಳುತ್ತಾಳೆ. ಓಡೋಡಿ ಬಂದ ವಿಶ್ವನನ್ನು ಪ್ರೀತಿ, ಗೌರವಗಳಿಂದ ಆಹ್ವಾನಿಸುತ್ತಾಳೆ.

[1]`ಹಗಲುಗನಸು ಹರಿದಾಡುತಿತ್ತು ಹೂಬಿಸಿಲ ಶಯ್ಯೆಹಾಸಿ,

ಸ್ವಪ್ನಲೋಕ ತೆರೆದಿತ್ತು ಬೋಗ ಕರೆಯಿತು ಕೈ ಬೀಸಿ` ಎನ್ನುವಂತೆ ಮದುವೆಯಾಗಲಿರುವ ಆತೂರ ಕಾತೂರದ ನಡುವೆ ಡಾ. ವಿಶ್ವನಾಥನೊಂದಿಗೆ ಪ್ರೀತಿಯ ಅಮಲಿನಲ್ಲಿ ಮೈಮರೆತು ಯೌವನದ ಹೆಣ್ಣು ಗಂಡುಗಳು ಏಕಾಂತದಲ್ಲಿ ಒಂದು ಕಡೆ ಸೇರುವುದು ಕರ್ಪೂರಕ್ಕೆ ಬೆಂಕಿ

1. ಪರಂಪರೆಯ ಪ್ರತಿರೋಧ -ಸಿ.ಎನ್. ರಾಮಚಂದ್ರನ ಪು.ಸಂ. 63

ಹಚ್ಚಿದಂತೆ ಪ್ರಕೃತಿ ಸಹಜವಾದ ಬಯಕೆ ಸುಮ್ಮನಿರುವುದೇ ? ಮೈಮನದ ಆತುರ ಕಾತುರ ಹೆಚ್ಚುವುದಲ್ಲದೆ ಪ್ರೀತಿಯಿಂದ ಕೂಡಿದ ಎರಡು ಹೃದಯಗಳು ಮನ್ಮಥನ ಬಾಣಕ್ಕೆ ಗುರಿಯಾದವು ಮನ ಒಂದಾದಾಗ ದೇಹ ಬೆರೆಯುವುದು ಸಹಜ ಎನ್ನುವಂತೆ ಮದುವೆಗೆ ಮುನ್ನವೇ ಒಂದಾಗಿ ಬಿಡುವ ಪ್ರಸಂಗ ಇಂದಿನ ಯುವ ಜನಾಂಗದ ಮನಸ್ಸಿನ ಪ್ರತಿಕವಾಗಿ ಕಂಡುಬರುತ್ತದೆ. ಇದು ಸರಿಯೇ ಎನ್ನುವ ಪ್ರಜ್ಞೆಯು ಪ್ರಶ್ನಾತೀತವಾಗಿದೆ. [1]ಗಂಡು ಹೆಣ್ಣಿನ ಸಂಬಂಧ ದೈಹಿಕವೇ ದೈವಿಕವೇ ಎಂಬ ವಾದ ಸತತವಾಗಿ ನಡೆದಿದೆ. ಭಾರತೀಯ ದೈವಿಕವಾದ ಪ್ರವಾದಿಗಳೆಂಬ ಭಾವನೆಯು ಸಾರ್ವತ್ರಿಕವಾಗಿ ಹರಡಿದೆ. ಈ ಘಟನೆಯ ನಂತರ ಕೆಲವೇ ದಿನಗಳಲ್ಲಿ ಡಾ. ವಿಶ್ವನಾಥ ಆಕಸ್ಮಿಕವಾಗಿ ಹೃದಯಘಾತದಿಂದ ಮದುವೆಗೆ ಮುಂಚೆಯೇ ಸಾವನಪ್ಪುವುದು ಮೇಘಾಳಿಗೆ ಗಾಯದ ಮೇಲೆ ಬರೆಯೆಳೆದಂತಾಗುತ್ತದೆ.

ಡಾ. ವಿಶ್ವನಾಥನ ಸಾವಿನ ಸುದ್ದಿ ಗೆಳತಿಯ ಮನೆಗೆ ಹೋದಾಗ ಗೊತ್ತು ಮಾಡಿಕೊಂಡ ಮೇಘಾ ಮನೆಗೆ ಬಂದು ತನ್ನ ತಾಯಿಂದ ತಿಳಿದುಕೊಂಡಾಗ ಕಣ್ಣೀರ ಕಟ್ಟೆಯೊಡೆದು ಬಿಕ್ಕಿ ಬಿಕ್ಕಿ ಆ ದಿನದ ಘಟನೆ ನೆನಪಿಸಿಕೊಂಡು ಅಳುವಾಗ ಇಲ್ಲಿಯು ಮೌನ ಆವರಿಸಿದೆ. ವಿಶ್ವನ ನೆನಪು ತನ್ನ ಮಗಳಿಗೆ ಕಾಡಬಾರದೆಂಬ ಕಾರಣದಿಂದ ಅಳಿದುಳಿದ ವಸ್ತುಗಳಾದ ಭಾವಚಿತ್ರ, ಪ್ರೇಮ ಪತ್ರ, ಸುಟ್ಟು ಹಾಕಿರುವದು ಮೇಘಾಳಿಗೆ ಎಲ್ಲಿಲ್ಲದ ಸಿಟ್ಟು ತರಿಸಿದೆ. ನಿನ್ನ ದೃಷ್ಠಿಯಲ್ಲಿ ನಾವಿಬ್ಬರು ಅಪರಾಧಿಗಳಾಗಿದ್ದರೂ ನಿನ್ನ ಹೆತ್ತವರಾದ ನಾವು ನಮ್ಮಿಂದ ದುಃಖ ನೋಡಲಾಗದೆ ನಿರ್ಜೀವವಾದ ಆ ವಸ್ತುಗಳು ಸುಟ್ಟಿದೆವೆಂದಾಗ ಹೆಣ್ಣಾಗಿ ನೀವು ತೋರಿಸಿದ ವಿಶ್ವನನ್ನು ಪ್ರೀತಿಸಿದೆ ಆರಾಧಿಸಿದೆ. ವಿಧಿ ಅವನೊಡನೆ ಬಾಳುವೆ ಮಾಡಲು ಬಿಡಲಿಲ್ಲ. ನೀವು ಅವನ ನೆನಪು ಬರಬಾರದೆಂದು ಆ ವಸ್ತುಗಳನ್ನು ಸುಟ್ಟು ಹಾಕಿದ್ದಿರಿ. ಆದರೆ ಈ ಹೃದಯದಲ್ಲಿ, ಮನಸ್ಸಿನಲ್ಲಿ ನಿಂತಿರುವ ಅವನ ಪ್ರೇಮಕ್ಕೆ ಹೇಗೆ ಬೆಂಕಿ ಹಚ್ಚುವಿರಿ ಎಂಬ ಪ್ರಶ್ನೆಗೆ ಉತ್ತರವಿಲ್ಲದಂತಾಗುತ್ತದೆ.

ಚಾಣಕ್ಷಮತಿ, ಧೈರ್ಯಶಾಲಿಯಾಗಿರುವ ಮೇಘಾ ತನ್ನ ಹೊಟ್ಟೆಯಲ್ಲಿ ವಿಶ್ವನ ಪ್ರೀತಿಯ ಕುಡಿ ಬೆಳೆಯುತಿದೆ. ಇನ್ನೊಂದೆಡೆಗೆ ತಂದೆ ತಾಯಿಗಳ ಅಭಿಲಾಷೆಯಂತೆ ಸುರದ್ರೂಪಿ ಪ್ರೋಫೆಸರ್ ಮಾಲತೇಶರೊಂದಿಗೆ ಮದುವೆಯು ನಿಶ್ಚಯಿಸಲಾಗಿದೆ. ಒಂದು ಕಡೆಗೆ ತನ್ನ ಹಾಗೂ ವಿಶ್ವನ ಪ್ರೀತಿಯನ್ನು ಕಳೆದುಕೊಂಡು ಪರಿತಾಪ ಪಡುತ್ತಿರುವ ದಂಪತಿಗಳಿಗೆ ಈ ಹೊಟ್ಟೆಯಲ್ಲಿರುವ ಕುಡಿಯನ್ನು ಒಪ್ಪಿಸುವ ಹೊಣೆ ಇನ್ನೊಂದೆಡೆಗೆ ತನ್ನ ಭವಿಷ್ಯವನ್ನು ಬೇರೆ ಪತಿಯಿಂದ ರೂಪಿಸಿಕೊಳ್ಳುವುದು. ಈ ರಹಸ್ಯ ತನ್ನ ಹೊರತಾಗಿ ವಿಶ್ವನ ತಂದೆ ಡಾ. ಜಗನ್ನಾಥರಾಯರಿಗೆ ಮಾತ್ರ ತಿಳಿಸಿ ಅವರ ಬದುಕಿನಲ್ಲಿ ಆಶಾ ಭಾವನೆಯನ್ನು ಮೂಡಿಸುತ್ತಾಳೆ. ಲೇಖಕಿ ಯಶೋದಮ್ಮ ಸಿದ್‌ಬಟ್ಟೆ ಎಚ್ಚರಿಕೆಯಿಂದ ಇಲ್ಲಿನ ವಸ್ತು ಸ್ಥಿತಿ ನಿರೂಪಿಸಿದ್ದಾರೆ.

---

1. ಸಾಹಿತ್ಯ ಹಾಗೂ ಕಾಮ ಪ್ರಚೋದನೆ -ಅ.ನ. ಕೃಷ್ಣರಾವ ಪು.ಸಂ. 39

ಡಾ. ಮಾಲತೇಶನ ಪಾತ್ರ ಕೂಡಾ ಸೃಜನಾತ್ಮಕವಾಗಿ ಸೃಷ್ಟಿಸಲಾಗಿದೆ. ಸಾವಿರಾರು ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದ ಇವರು ವರದಕ್ಷಿಣೆಗಾಗಿ ತನ್ನನ್ನು ಮಾರಾಟ ಮಾಡಿಕೊಳ್ಳಲು ಬಯಸದವರು ಎಲ್ಲಾ ವಿದ್ಯಾರ್ಥಿಗಳ ಮನಸ್ಸನ್ನು ಗೆದ್ದವನು ಅವನ ಎತ್ತರವಾದ ನಿಲುವು ತನಗಿಂತ ಚೂರು ಜಾಸ್ತಿ ಬಿಳಿ ಬಣ್ಣ, ತುಂಬಿದ ಮುಖ, ದಟ್ಟವಾದ ಕರಿಯ ಮೀಸೆ, ಗುಂಗುರು ಗುಂಗುರಾದ ತಲೆ ಗೂದಲು, ಕಿಲಾಡಿ ಕಣ್ಣಿನ, ಸುಂದರ ಮಾಲತೇಶನ ನೋಡಿದರೆ ಗಂಡಸರೇ ಹುಚ್ಚಾಗುತ್ತಿದ್ದರೂ ಅಂಥದರಲ್ಲಿ ಹುಡುಗಿಯರ ಪಾಡು ಹೇಳುವಂತಿರಲಿಲ್ಲ. ಹುಡುಗರು ತನ್ನ ಅಕ್ಕಳಿಗೊ, ತಂಗಿಗೊ ಎಂದು ಲೆಕ್ಕಾಚಾರ ಹಾಕಿಕೊಳ್ಳುತ್ತಿದ್ದರು ಅನೇಕ ವಿದ್ಯಾರ್ಥಿನಿಯರು ತಾನು ಅವಳ ಹೆಂಡತಿಯಾಗಬೇಕೆಂದು ಇಷ್ಟಪಡುತ್ತಿದ್ದರು. ಇನ್ನು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ ಭೌತಶಾಸ್ತ್ರ ಬೋಧಿಸಲು ತರಗತಿಗೆ ಹೋಗುವ ಮೊದಲು ಪೂರ್ವಸಿದ್ಧತೆ ಮಾಡಿಕೊಂಡು ಬೋಧಿಸುವಾಗ ವಿದ್ಯಾರ್ಥಿಗಳಿಗೆ ಆಧಾರ ಗ್ರಂಥ ಪಟಪಟನೆ ಹೇಳುತ್ತಿದ್ದರು. ಹೀಗೆ ಎಲ್ಲರ ಪ್ರೀತಿಗೆ ಪಾತ್ರನಾಗಿದ್ದಾನೆ ಡಾ. ಮಾಲತೇಶ. ಸಾಮಾನ್ಯವಾಗಿ ಹೆಣ್ಣಿನ ಸೌಂದರ್ಯವನ್ನು ವರ್ಣಿಸುವ ಸಾಹಿತಿಗಳ ನಡುವೆ ಯಶೋದಮ್ಮ ಸಿದ್‌ಬಟ್ಟೆಯವರು ಇಲ್ಲಿ ಗಂಡಿನ ಸೌಂದರ್ಯವನ್ನು ವಿವರಿಸುವಲ್ಲಿ ಅವರಲ್ಲಿರುವ ಸೌಂದರ್ಯ ಪ್ರಜ್ಞೆ ಎದ್ದು ಕಾಣುತ್ತದೆ.

ಮದುವೆಯಾಗಿ ಗಂಡನ ಮನೆಗೆ ಹೊರಟ ಮಗಳಿಗೆ ನಿನ್ನ ಪತಿ ಮಾಲತೇಶನನ್ನು ಸಂತುಷ್ಟನನ್ನಾಗಿ ಮಾಡಬೇಕು `ಮುಂದಿನ ಜೀವನದ ಕುರಿತು ಚಿಂತಿಸಬೇಕು ಹೊರತು ಹಿಂದಿನದನ್ನು ನೆನಪಿಸಕೊಳ್ಳಬಾರದು ಎಂಬ ಸಮಾಧಾನದ ಮಾತುಗಳ ನಡುವೆ ಮೇಘ ಮತ್ತು ಮಾಲತೇಶ ಇಬ್ಬರು ಒಬ್ಬರಿಗೊಬ್ಬರು ಆಕರ್ಷಿತರಾಗಿ ಬಳಲಿದ ಜೋಡಿ ಹಕ್ಕಿಗಳು ಮೈಮರೆತು ಒಂದಾಗಿ ಮಲಗಿಬಿಟ್ಟವು. ದಂಪತಿಗಳು ದಾಂಪತ್ಯ ಜೀವನ ಕಳೆಯುತ್ತಿದ್ದಂತೆ ಅಮೇರಿಕಾದ ಸ್ಯಾನಫೋರ್ಡ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕನಾಗಿ ಆಹ್ವಾನಿಸಿದ ಪತ್ರ ನೋಡಿ ಖಿನ್ನನಾಗಿ ತನ್ನ ಹೆಂಡತಿಗೆ ಕೊಟ್ಟು ಭಕ್ತನಂತೆ ಅವಳ ಮುಖ ನೋಡುತ್ತಾ ಕುಳಿತದ್ದು. ಇಂಥ ಶುಭ ಸಮಾಚಾರವನ್ನು ಇಷ್ಟು ನಿರಾಶೆಯ ಧ್ವನಿಯಲ್ಲಿ ಹೇಳಿದರೆ ಹೇಗೆ ಎಂಬ ವ್ಯಂಗೋಕ್ತಮಾತು ಸಂದೋರ್ಭೋಚಿತವಾಗಿ ಹಾಗು ಹಿತಕರವಾಗಿ ಬಳಸಲಾಗಿದೆ.

ಅಮೇರಿಕಾದಲ್ಲಿ ಮಾಲತೇಶ ತನ್ನ ಹೆಂಡತಿ ಗರ್ಭಿಣಿಯಾದ ವಿಷಯ ತಿಳಿದು ಸಂತೋಷ ಉಕ್ಕಿ ಬರುತ್ತದೆ. ಸೀಮಂತ ಕಾರ್ಯದ ವೈಭವ ಕುರಿತು ಲೇಖಕಿ ಒಬ್ಬ ಹೆಣ್ಣಾಗಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅಲಂಕಾರ ಭರಿತವಾದ ಮೇಘ ಬಂಗಾರದ ಬಳೆ ತಲೆ ತುಂಬ ಮಲ್ಲಿಗೆ, ಕನಕಾಂಬರಿ ಹೂವಿನ ಅಲಂಕಾರ, ಕೊರಳು ತುಂಬಾ ಬಂಗಾರ ಸರಗಳ ಮೇಲೆ ಹೂವಿನ ಹಾರ ಧರಿಸಿ ಮೇಘ ವನ ದೇವತೆಯಂತೆ ಕಂಗೊಳಿಸುತ್ತಿದ್ದಾಳೆ ಎಲ್ಲರು ಅವಳ ಉಡಿ ತುಂಬಿ, ಹಾಡು ಹೇಳಿ ಆರತಿ

ಬೆಳಗಿದರು ಎಂದೆಲ್ಲಾ ಹೇಳುವಾಗ ಅಲ್ಲಿ ಮಾಲತೇಶನ ಕೊರತೆ ಕಂಡುಬಂದಿರುವುದು ಲೇಖಕಿ ಮರೆಯದೆ ಉಲ್ಲೇಖಿಸಿದ್ದಾರೆ.

ಮೇಘಾಳ ಹೆರಿಗೆಯ ದಿನ ಕೂಡಿ ಬಂದಿದೆ. ಜಗನ್ನಾಥರಾಯರಿಗೆ ಬೆಂಗಳೂರಿಗೆ ಬರ ಹೇಳಿದ್ದಾಳೆ. ಕಾಮಾಕ್ಷಿಗೆ ಸುಳ್ಳು ಹೇಳಿ ಮಗಳಾದ ಶೀಲಾಳೊಂದಿಗೆ ಬೆಂಗಳೂರಿಗೆ ಬಂದಿದ್ದಾರೆ. ನೋವು ಪ್ರಾರಂಭವಾಗಿ ಅಳುತ್ತಾ ಮೇಘಾ ನಾನೆಂತಹ ಪಾಪಿ, ಯಾರಿಗೂ ಹೇಳಲಾರೆ, ಈ ನೋವನ್ನು ತಾಳಲಾರೆ ಎಂದು ಅತ್ತಳು ರಾಯರು ಯಾವ ತೊಂದರೆಯೂ ಆಗದಂತೆ ನೋಡಿಕೋ ತಂದೆ ಎಂದು ಎದೆಯ ಮೇಲಿನ ಲಿಂಗವನ್ನು ಕಣ್ಣಿಗೊತ್ತುಕೊಂಡು ಮಂಚದ ಮೇಲೆ ಮಲಗಿದರು. ಮುಗ್ಧತೆಯಿಂದ ಮಾಡಿದ ತಪ್ಪನ್ನು ಸರಿಪಡಿಸಲು ವಿಶ್ವನ ಪ್ರೇಮದ ಕುಡಿಯನ್ನು ಕಾಪಾಡಲು ಒಂದು ಹೆಣ್ಣು ಸಾವು ಬದುಕಿನ ಹೋರಾಟದ ಗುಪ್ತ ನೋವುಗಳು ಅನುಭವಿಸುತ್ತಿದ್ದಾಳೆ. ಈ ವಿಚಾರ ಸ್ವಲ್ಪ ಹೊರಬಿದ್ದರೆ ತನ್ನ ಬಾಳ ನೌಕೆ ನುಚ್ಚುನೂರಾಗುತ್ತದೆ. ತನ್ನನ್ನು ಪ್ರಾಣವೆಂದು ಪ್ರೀತಿಸುವ ಪತಿ ತನ್ನನ್ನು ಕಣ್ಣೆತ್ತಿ ನೋಡಲಾರ ಅತ್ತೆ ಮಾವ ಒದ್ದು ಹೊರ ಹಾಕುತ್ತಾರೆ. ಈ ಮಧ್ಯೆ ರಾಯರು ತನ್ನ ವಂಶದ ಕುಡಿ ತಮ್ಮ ಕೈಗೆ ಸಿಕ್ಕರೆ ಸಾಕು ಬಂಗಾರದ ಹಾಗೆ ಜೋಪಾನವಾಗಿ ಸಾಕುತ್ತಾರೆ. ಈ ಎಲ್ಲದರ ಮಧ್ಯೆ ಸಿಕ್ಕಿ ಬಿದ್ದು ಮೇಘ ಒದ್ದಾಡುತ್ತಿದ್ದಾಳೆ. ಮಗು ಅತ್ತ ಧ್ವನಿ ಕೇಳಿಸುತ್ತದೆ ಗಂಡು ಮಗು ಎಂದು ಗೊತ್ತಾಗಿ ಸಂತೋಷ ಹುಮ್ಮಳಿಸುತ್ತದೆ.

ಮೇಘ ಮಗುವನ್ನು ಎತ್ತಿಕೊಂಡು ಎದೆಗಪ್ಪಿಕೊಂಡು ಆ ಮಗುವನ್ನೇ ದೃಷ್ಟಿಯಿಟ್ಟು ನೋಡಿ ಈ ಕಂದನಿಗೆ ದೀರ್ಘಾಯಸ್ಸನ್ನು ಕೊಡು ತಂದೆ ಎಂದು ಭಗವಂತನಲ್ಲಿ ಬೇಡಿಕೊಂಡು ಮಗುವಿಗೆ ಸುತ್ತಿದ ಬಟ್ಟೆ ಬಿಚ್ಚಿ ಹತ್ತಾರುಬಾರಿ ನೋಡಿ ನೋಡಿ ಸಂತೋಷ ಪಟ್ಟು, ತಾನು ತಂದಿಟ್ಟ ಹೊಸ ಬಟ್ಟೆ ಟೋಪಿ, ಕಾಲು ಚೀಲ ಎಲ್ಲಾ ಹಾಕಿ ದೊಡ್ಡ ಟವಲ ಮೇಲೆ ಮಲಗಿಸಿ ಅಯ್ಯೋ ಕಂದಾ ಇನ್ನು ಸ್ವಲ್ಪ ಹೊತ್ತಿನಲ್ಲಿ ನೀನು ನನ್ನಿಂದ ದೂರವಾಗಿ ಹೋಗುವೆಯಲ್ಲಾ ನಿನ್ನ ಪಾಪಿ ತಾಯಿಯನ್ನು ಕ್ಷಮಿಸು. ಹಾಲುಣಿಸಲಾರೆ, ಸಾಕಲಾರೆ ಸಲಹಲಾರೆ ಎತ್ತಿ ಆಡಿಸಲಾರೆ ನೋಡಿ ಸಂತೋಷ ಪಡಲಾರೆ ಎಂಥಾ ಸಂದಿಗ್ಧ ಸ್ಥಿತಿಯಲ್ಲಿ ಸಿಲುಕಿರುವರು. ಈ ನಿನ್ನ ತಾಯಿ ಅಜ್ಜಿ ಅಜ್ಜನೊಡನೆ ಚೆನ್ನಾಗಿ ಬಾಳು ಎನ್ನುವಲ್ಲಿ ಮಾತೃ ವಾತ್ಸಲ್ಯದ ಜೊತೆಗೆ ಕರಳು ಕಿತ್ತು ಬರುವ ಅನುಭವ ಓದುಗರಲ್ಲಿ ಆಗುವಂತೆ ಮಾಡಿದ್ದಾರೆ. ಮೇಘ ಹೇಳಿದಂತೆ ರಾಯರು ದೂರದಲ್ಲಿ ಕಾರು ತಂದು ನಿಲ್ಲಿಸಿ ಅಂದವಾಗಿ ಅಲಂಕಾರಗೊಂಡ ಮಗನನ್ನು ನೋಡಿ ಸಂತೋಷ ಪಟ್ಟು ನಿಮ್ಮ ಆಸ್ತಿಯನ್ನು ನಿಮಗೆ ಒಪ್ಪಿಸಿದ್ದೇನೆ ಎಂದೆಂದು ತನ್ನ ಕಡೆಗೆ ತಿರುಗಿ ನೋಡದಿರಿ. ಈ ಮಗುವನ್ನು ತಾಯಿಗಿಂತ ಹೆಚ್ಚಿನ ಪ್ರೀತಿಯಿಂದ ನೀವು ಸಾಕುತ್ತಿರೆಂಬ ವಿಶ್ವಾಸ ನನಗಿದೆ ಎಂದು ನಟರಾಜನ ಪದರದ ಸರ ಮಗುವಿಗೆ ಹಾಕುತ್ತಾಳೆ. ಕೊನೆಗೊಂದು ಮಗುವಿಗೆ ಮುದ್ದಿಟ್ಟು ರಾಯರ ಕೈಗೆ ಕೊಡುವಳು ರಾಯರು ಕಣ್ಣೀರು ಒರೆಸಿಕೊಳ್ಳುತ್ತಾ ಬರ್ತಿನಮ್ಮ ಜೋಪಾನ ತಾಯಿ ಎಂದು ಹೇಳಿ ಹೋಗುವರು.

[1]ಜಾಣ ಜಾರಿ ಬಿದ್ದಾಗ ಕಾಣದ್ದಾಂಗ ಏಳುವನು ಎನ್ನುವಂತೆ ಮೇಘಾ ಶ್ರೀಕಾಂತನಿಗೆ ಫೋನ ಮಾಡಿ ತನ್ನ ಒಡಲು ಬರಿದಾಯಿತು ಎಂದು ಬೆನ್ನು ನೋವು ಎಂದು ಗುಳಿಗೆ ತೆಗೆದುಕೊಂಡೆ ಮಧ್ಯ ರಾತ್ರಿ ಅಬಾರ್ಷನ್ ಆಯಿತು ಎಂದು ಹೇಳಿ ಜಾರಿಕೊಳ್ಳುತ್ತಾಳೆ. ಮೇಘಾ ತಾನು ಅಮೇರಿಕಾಗೆ ಹೋಗುವ ಇಂಗಿತ ವ್ಯಕ್ತಪಡಿಸಿದ್ದಾಗ ತಾನು ಎಲ್ಲಾ ಏರ್ಪಾಡು ಮಾಡುತ್ತೇನೆ ನೀವು ಮಲಗಿಕೊಳ್ಳಿ ವಿಶ್ರಾಂತಿ ಪಡೆಯಿರೆಂದು ಶ್ರೀಕಾಂತ ಸೀತಾ ಮಾತೆಗೆ ಲಕ್ಮಣ ಹೇಳಿದಂತೆ ವಿನಯದಿಂದ ಹೇಳಿದನು ಎನ್ನುವಲ್ಲಿ ಒಪ್ಪುವ ಉಪಮೆಯ ಲೇಖಕಿ ಕೊಟ್ಟಿದ್ದಾರೆ. ಇಲ್ಲಿ ಯಾವುದೇ ಧೈರ್ಯಸ್ಥ ಹೆಣ್ಣಿನ ತ್ಯಾಗಮಯಿ ಹೆಣ್ಣಿನ ಸ್ವಭಾವವಾಗಿರುತ್ತದೆಂಬುದನ್ನು ಅಷ್ಟೇ ಸಹಜವಾಗಿಯೇ ನಿರೂಪಿಸಿರುವ ಕಾದಂಬರಿಕಾರ್ತಿಯ ಕುಶಲಗಾರಿಗೆ ಮೆಚ್ಚುವಂತಹದಾಗಿದೆ.

ಡಾ. ಜಗನ್ನಾಥರಾಯರು ತಮ್ಮ ಮಗ ತೀರಿಕೊಂಡ ನಂತರ ಆಸ್ಪತ್ರೆ ಕಟ್ಟುತ್ತಿರುವುದು ಅನಾಥಾಶ್ರಮದಿಂದ ಮಗುವನ್ನು ತಂದಿರುವದು ಮಗಳಾದ ಶೀಲಾಳಿಗೂ ಸರಿ ಅನಿಸಲಿಲ್ಲ. ಬೀಗರಾದ ಶಂಕರೆಪ್ಪಾನವರಿಗೆ ಮೊದಲೆ ಹಿಡಿಸಲಿಲ್ಲ. ಇನ್ನೂ ಜನ ಕೂಡಾ ಏನೆಲ್ಲಾ ಅಂದರೆ ತಲೆ ಹಾಕಲಿಲ್ಲ. ರಾಯರು ಈ ವಯಸ್ಸಿನಲ್ಲಿ ಮೊಮ್ಮಕ್ಕಳನ್ನು ಆಡಿಸಬೇಕಾಗಿತ್ತು. ಅದು ಬಿಟ್ಟು ಈ ಮಗುವನ್ನು ಸಾಕುವಂತಾಯಿತು ಎನ್ನುತ್ತಾಳೆ ಕಾಮಾಕ್ಷಿ. ಸಾಯೋ ಮುದುಕನಿಗೆ ಆಸ್ಪತ್ರೆ ಬೇರೆ ಕೇಡು ಎನ್ನುವರು ಶಂಕರೆಪ್ಪಾ.

ಅಮೇರಿಕಾಕ್ಕೆ ತನ್ನ ಗಂಡನೊಂದಿಗಿರಲು ಬಂದಿರುವ ಮೇಘಾಳಿಗೆ ಬೇಡವೆಂದರು. ವಿಶ್ವನ ನೆನಪು ಬರುತ್ತಿದೆ. ತಾನು ಮಾಡಿದ ಕಾಯಕದ ಬಗ್ಗೆ ಹೆಮ್ಮೆ ಎನಿಸುತ್ತಿದೆ. ತಾನೊಬ್ಬ ವೈದ್ಯಳಾಗಿ, ಹೆಣ್ಣಾಗಿ, ತಾಯಿಯಾಗಿ ಭ್ರೂಣ ಹತ್ಯೆ ಮಾಡಬೇಕಾಗಿತ್ತೆ ? ತಾನು ತೆಗೆದುಕೊಂಡ ತೀರ್ಮಾನ ಅರ್ಥಪೂರ್ಣವಾದದ್ದು, ನಾನಿಟ್ಟ ಪ್ರತಿಯೊಂದು ಹೆಜ್ಜೆಯ ಅನುಕರಣೀಯ ವಾದುದು ಯಾರು ಏನೆ ಹೇಳಿದರೂ ಸರ್ವರಕಲ್ಯಾಣಕ್ಕಾಗಿ ಈ ಎಲ್ಲಾ ಕಾರ್ಯ ಮಾಡಿದ್ದೇನೆ. ಸ್ತ್ರೀ ಸಹಜವಾದ ಧರ್ಮವನ್ನು ಪರಿಪಾಲಿಸಿದ್ದೇನೆ. ಯಾರು ನನಗೆ ಹೆಸರಿಡಲಾರರು ಎಂದುಕೊಳ್ಳುತ್ತಿದ್ದಳು ಮೇಘ.

ಪರಿವರ್ತನೆಯನ್ನು ಯಾರು ಅಲ್ಲಗಳೆಯಲಾರರು. ನಮ್ಮ ಪ್ರೀತಿಯ ಮುಂದೆ ಮುಂದೆ ಸಾಗುತ್ತಿರುತ್ತದೆ ಹಿಂದಿನವರ ಮೇಲೆ ಕಡಿಮೆಯಾಗುತ್ತದೆ ಎಂಬುದು ಗಗನನ ಜೀವನದಲ್ಲಿನ ಬದಲಾವಣೆ ಈ ಅಂಶ ಪುಷ್ಠಿಕರಿಸುತ್ತದೆ. ತನ್ನ ಮಡದಿ ಶೀಲಾಳೊಂದಿಗೆ ಅಮಾನವಿಯವಾಗಿ ನಡೆದುಕೊಂಡಿರುವ ತಮ್ಮ ಕುಟುಂಬ ತೊರೆದು ಬೇರೆ ಮನೆ ಮಾಡಿದಾಗ ರಾಯರು ಮನೆಗೆ ಅವಶ್ಯವಾದ ವಸ್ತುಗಳು ಹೊಸ ಮನೆ ಖರಿದಿಗಾಗಿ ಹಣಕೊಟ್ಟಾಗ ಅವರಿಗಾದ ಸಂತೋಷಕ್ಕೆ ಲೇಖಕಿ ಕೊಟ್ಟಿರುವ ಉಲ್ಲೇಖ ಅರ್ಥಪೂರ್ಣವಾದುದು. ಹಣ ಎಂಥವರನ್ನಾದರೂ ಪರಿವರ್ತಿಸುತ್ತದೆ. ಪರಿಪಕ್ವತೆ ಬಂದರೆ ಎಲ್ಲಾ ಬದಲಾಗುತ್ತದೆ. ನೋಡುವ ದೃಷ್ಠಿಯು

1. ಧರಿನಾಡ ಜಾನಪದ ಗಾದೆಗಳು -ದೇಶಾಂಶ ಹುಡಗಿ ಪು.ಸಂ. 23

ಭಿನ್ನವಾಗುತ್ತದೆ. "ಸಿಟ್ಟಿನಿಂದ ಒದ್ದರೆ ಗಾದಿಯ ಮೇಲೆ ಬಿದ್ದ" ಎಂಬಂತೆ ಅಪ್ಪನ ಮನೆಯಿಂದ ಹೊರ ಬಂದುದಕ್ಕೆ ಗಗನನ ಅದೃಷ್ಟದ ಬಾಗಿಲು ತೆರೆದಿದೆ. ಗಾಣದೆತ್ತಿನಂತೆ ದುಡಿಯುತ್ತಿದ ಶೀಲ ಪಂಜರದಿಂದ ಬಿಡುಗಡೆಯಾದ ಪಕ್ಷಿಯಂತೆ ಉಸಿರಾಡಿದಳು ಎಂಬ ಅಲಂಕಾರಿಕ ಮಾತುಗಳು ಸಂಧರ್ಬೋಚಿತವಾಗಿ ಬಳಲಾಗಿದೆ.

ರಾಯರ ಕನಸ್ಸಿನ ಕೂಸಾದ ಆಸ್ಪತ್ರೆಯ ಕಾರ್ಯ ಭರದಿಂದ ಸಾಗಿದೆ. ರಾಯರಿಗೆ ವಯಸ್ಸಾಗುತ್ತಾ ಬಂದಿದ್ದು. ಕಟ್ಟಡದ ಕೆಲಸ ಮೂರು ಅಂತಸ್ತುಗಳವರೆಗೆ ಸಾಗಿದೆ. ಹಗಲು ರಾತ್ರಿ ಕೆಲಸ ನಡೆಯುತ್ತಿದ್ದು. ಅವರ `ದೇಹಕ್ಕೆ ಮುಪ್ಪು ಆವರಿಸಿದರೂ ಮನಸ್ಸು ಮಾತ್ರ ಮಗುವಿನಂತಿಹದು` ಕಟ್ಟಡದ ಮುಂಭಾಗದಲ್ಲಿ ಕೈತೋಟ, ಹಿಂಭಾಗದಲ್ಲಿ ಕಾರ ಪಾರ್ಕಿಂಗ್ ಸ್ಥಳಾವಕಾಶ, ಸುತ್ತಲು ಕಂಪೌಂಡ, ನೀರಿನ ಸೌಲಭ್ಯ, ವಿದ್ಯುತ್ ಸರಬರಾಜು ಮುಂತಾದ ಸೌಲಭ್ಯ ಜೊತೆಗೆ ಆಸ್ಪತ್ರೆಯ ಕಟ್ಟಡದಿಂದ ಸ್ವಲ್ಪ ದೂರದಲ್ಲಿ ಸಾಲಾಗಿ ಕಟ್ಟಿರುವ ಕಟ್ಟಡಗಳಲ್ಲಿ ಸುಮಾರು ಹದಿನೈದು ಕೋಣೆಗಳು ಸುಸಜ್ಜಿತ ಆಧುನಿಕ ಸೌಲಭ್ಯಗಳಿಂದ ಕೂಡಿದೆ. ಇದೆಲ್ಲ ನೋಡುತ್ತಿದ್ದಂತೆ ದೇವರಲ್ಲಿ ನ್ಯಾಯವಿದೆ. ಮಗನನ್ನು ಕಳೆದುಕೊಂಡಿದ್ದ ತಮಗೆ, ವೈಭವನ ಆಗಮನ ಯೌವನ ಮರಳಿ ಪಡೆದಂತಾಗಿ ಮನದಲ್ಲಿ ಮೇಘಾಳನ್ನು ಅನುಕಂಪದಿಂದ ನೆನೆಯುತ್ತಾರೆ.

ನೌಬಾದಿನ ಇಪ್ಪತ್ತೈದು ಎಕರೆ ಜಮೀನಿನಲ್ಲಿ ಎದ್ದು ನಿಂತಿರುವ ಭವ್ಯ ಕಟ್ಟಡ ಬಸ್ಸಿನಲ್ಲಿ ಕುಳಿತು ಹೋಗುವವರೆಲ್ಲರ ದೃಷ್ಟಿಯೂ ವಿಶ್ವ ವೈಭವದ ಕಡೆಗೆ ಬೀಳುತ್ತಿತ್ತು. ಉದ್ಘಾಟನೆಗಾಗಿ ಸಂಪೂರ್ಣ ಸಿದ್ದವಾಗಿ ನಿಂತಿರುವ ಕಟ್ಟಡ ಎಲ್ಲರನ್ನು ಬೆರಗುಗೊಳಿಸುತಿತ್ತು. ಪ್ರತಿಯೊಂದು ಕೆಲಸವು ಮಗನ ನಿರ್ದೇಶನದಲ್ಲಿ ಕೊನೆಗೊಂಡು ನಾಳೆಯ ಉದ್ಘಾಟನೆಗಾಗಿ ಕಾಯುತ್ತಿತ್ತು. ದೊಡ್ಡ ಶಾಮಿಯಾನ ಹಾಕಿ ವೇದಿಕೆ ಅಲಂಕರಿಸಲಾಗಿದೆ. ತಳಿರು ತೋರಣ ಹೂವಿನ ಹಾರ ಅನಾವರಣ ಮಾಡಲು ಅಮೃತ ಶಾಲೆಯಲ್ಲಿ ಕೆತ್ತಿದ ವಿಶ್ವವೈಭವ ಎಂಬ ಗೋಡೆ ಬರಹ ಅದಕ್ಕೆ ಪರದೆಯ ವ್ಯವಸ್ಥೆಯಿಂದ ಕೂಡಿತ್ತು ದೀಪಾಲಂಕಾರಗಳಿಂದ ಭವ್ಯ ಕಟ್ಟಡ ಕಂಗೊಳಿಸುತ್ತಿತ್ತು. ಇಲ್ಲಿ ಲೇಖಕಿಯ ಸೌಂದರ್ಯ ಪ್ರಜ್ಞೆ ಮೆಚ್ಚುವಂತಹದಾಗಿದೆ.

ಭಾಲ್ಕಿ ಶ್ರೀಗಳು ಆಸ್ಪತ್ರೆಯನ್ನು ಉದ್ಘಾಟಿಸಿ ಭಾಷಣ ಮಾಡುತ್ತಾ ರಾಯರ ಮಹಾನ ಕಾರ್ಯ ಕೊಂಡಾಡಿದರು. ಮುಖ್ಯಮಂತ್ರಿಗಳು ಭವ್ಯ ಆಸ್ಪತ್ರೆಯನ್ನು ನೋಡಿದರೆ ತಾನೊಮ್ಮೆ ಕಾಯಿಲೆ ಬಿದ್ದು ಇಲ್ಲಿಗೆ ಬಂದು ಸೇರಬೇಕೆನಿಸುತ್ತಿದೆ ಎಂದರೆ ಗೃಹ ಮಂತ್ರಿಗಳು ನಮ್ಮ ಜನ ಬಹಳ ಬಡವರಾಗಿದ್ದಾರೆ. ಅಂತಹವರಿಗೆ ಕಡಿಮೆ ಹಣದಲ್ಲಿ ಚಿಕಿತ್ಸೆ ಸಿಗುವಂತಾಗಬೇಕು. ಇಲ್ಲಿರುವ ಭಾರಿ ಯಂತ್ರೋಪಕರಣಗಳ ಬಳಕೆ ನಮ್ಮ ಬಡ ಜನತೆಗಾಗಲಿ ಎಂದರು. ಆರೋಗ್ಯ ಮಂತ್ರಿಗಳು ಉತ್ಸಾಹಿ ಡಾಕ್ಟರಗಳನ್ನು ನೋಡಿ ಸಂತೋಷವಾಗುತ್ತಿದೆ. ಜನರಿಗೆ ಹೈದ್ರಾಬಾದಿಗೆ ಹೋಗುವುದನ್ನು ತಪ್ಪಿಸಿದ್ದಾರೆಂದು

ಮಾತನಾಡಿದ್ದರು. [1]ಸಾಹಿತ್ಯ ನಿರ್ಮಾಣ ಸುಲಭ ಕಾರ್ಯವಲ್ಲ ಸೃಜನಶೀಲತೆಯ ಮೂಲ ದ್ರವ್ಯವಿಲ್ಲದೆ ಸಾಹಿತಿಯಾಗಲು ಸಾಧ್ಯವಿಲ್ಲ ಎಂಬಂತೆ ಯಶೋದಮ್ಮ ಸಿದ್‌ಬಟ್ಟೆರವರ ಸೃಜನಾತ್ಮಕತೆ ಇಲ್ಲಿ ಎದ್ದು ಕಾಣುತ್ತಿದೆ. ಕಾದಂಬರಿಯ ವಸ್ತು ಕೇಂದ್ರಿಯ ಅಂಶದತ್ತವಾಲುತ್ತಿದೆ. ಅಮೇರಿಕಾದಲ್ಲಿರುವ ಡಾ. ಮೇಘಾ ಆಗೊಮ್ಮೆ ಈಗೊಮ್ಮೆ ಎದೆನೋವು ಕಾಣಿಸಿಕೊತ್ತುತ್ತದೆ. ಒಮ್ಮೆ ಆಸ್ಪತ್ರೆಯಲ್ಲಿಯೇ ಕುಸಿದು ಬಿಳುತ್ತಾಳೆ. ಅಮೇರಿಕಾದಲ್ಲಿಯೇ ವೈದ್ಯರಿಗೆ ತೋರಿಸೋಣ ಎಂದರೆ ಬೇಡಾ ಇಂಡಿಯಾಕೆ ಹೋಗೋಣ ಎನ್ನುತ್ತಿದ್ದಾಳೆ ಡಾ. ಮೇಘ.

ಡಾ. ಮೇಘಾ ಹಿಂದೆ ಎಷ್ಟು ಶಕ್ತಿಶಾಲಿಯಾಗಿದ್ದಳೋ ಈಗ ಅಷ್ಟೇ ನಿಶ್ಯಕ್ತಳಾಗಿ ಬಿಟ್ಟಿದ್ದಾಳೆ. ತಾನಿನ್ನು ಬದುಕುವುದಿಲ್ಲವೆಂಬ ಭಯ, ಆವರಿಸಿಕೊಂಡಿದೆ. ಪತಿ ಎಷ್ಟೇ ಹೇಳಿದರು ಇಂಡಿಯಾದಲ್ಲಿಯೇ ತೋರಿಸೋಣ ಎಂದಾಗ ಬದುಕಿನ ಮಧ್ಯದಲ್ಲಿಯೇ ಪತಿ ಮತ್ತು ಮಕ್ಕಳನ್ನು ಅನಾಥಳನ್ನಾಗಿ ಮಾಡಿ ಹೋಗುತ್ತೇನೋ ಹೇಗೆ ಎಂದು ಚಿಂತಿಸುತ್ತಿದ್ದಾಳೆ. ಬೀದರನಲ್ಲಿನ ಆಸ್ಪತ್ರೆಯ ವಿಷಯ ಕೇಳಿ ಇಲ್ಲಿಗೆ ಬರುವಂತೆ ಮಾಡುವಲ್ಲಿ ಲೇಖಕಿಯ ಜಾಣ್ಮೆ ವ್ಯಕ್ತವಾಗುತ್ತದೆ. ಬದುಕುವ ಆಶೆಯನ್ನು ತೊರೆದಿರುವ ಮೇಘ ಕಡೆಯ ದಿನಗಳನ್ನು ಮಾತ್ರ ಲೆಕ್ಕ ಹಾಕುತ್ತಿರುವಾಗ ಡಾ. ವೈಭವನ ನೇತೃತ್ವದಲ್ಲಿ ಗುಣಮುಖಳಾಗುತ್ತಾಳೆ. ಮೇಘಾ ರೋಗಿಗೆ ಬಿಡುಗಡೆ ಮಾಡಬೇಕು ಆದರೆ ಏಕೋ ಅವನಿಗೆ ಮನಸ್ಸು ಬರುತ್ತಿರಲಿಲ್ಲ. ಅವಳ ಮೇಲೆ ಏನೋ ಅರಿಯದ ಮಮತೆ ಗೌರವ ಭಾವನೆ ಎರಡೆರಡು ಸಾರಿ ಹೋಗಿ ಮಾತನಾಡಿಸುವುದು ಹಾಗೆಯೇ ಮೇಘ ಅಣ್ಣನಿಗೆಂದು ತಂದ ಐದುನೂರು ಡಾಲರ ಬೆಲೆಯ ಗಡಿಯಾರ ಕಾಣಿಕೆ ನೀಡಿದಾಗ ಅವಳ ಕಾಲಿಗೆರಗಿದ ವೈಭವನ ವ್ಯಕ್ತಿತ್ವ ಮೆಚ್ಚುವಂತಹದ್ದು ಹೀಗೆಲ್ಲಾ ಮಾಡುತ್ತಿರುವುದೇಕೆ ಎಂಬುದು ಇಬ್ಬರು ಅರಿಯರು ``ಕಣ್ಣರಿಯದುದಂ ಕರುಳರಿವುದು`` ಎಂಬ ಮಾತು ವೇದೋಕ್ತವಾಗಿ ಬಂದಿದೆ.

ಉತ್ತರ ಭಾರತದ ಪ್ರವಾಸಕ್ಕೆ ಹೋಗಿ ಬಂದ ರಾಯರಿಗೆ ರೋಗಿ ಮೇಘಾಳನ್ನು ಬಿಡುಗಡೆ ಮಾಡಿ ಪರಿಚಯಿಸಲು ಡಾ. ವೈಭವ ಕರೆದುಕೊಂಡು ಬಂದಾಗ ನಡೆದುದ್ದು ದುರಂತದ ಘಟನೆ ರಾಯರನ್ನು ಕಂಡ ಮೇಘ ಮೂರ್ಛೆ ಹೋಗುತ್ತಾಳೆ. ರೋಗ ಉಲ್ಬಣ ಗೊಳ್ಳುತ್ತದೆ. ವೈಭವ ಪರೋಕ್ಷವಾಗಿ ನಿನ್ನ ಮಗನೆಂದು ಯಾರಿಗೂ ಗೊತ್ತಾದ ರೀತಿಯಲ್ಲಿ ಹೇಳಿದಾಗ ಅವನ ಕೈಗೆ ಮುತ್ತುಕೊಟ್ಟು ಮನದ ಸಂತೋಷ ತಾಳಲಾರದೆ ಶಿವನಪಾದ ಸೇರುತ್ತಾಳೆ.

ಮೇಘಾಳ ಮರಣಕ್ಕೆ ಕಾರಣ ಯಕ್ಷ ಪ್ರಶ್ನೆಯಾಗಿ ಡಾ. ವೈಭವನಿಗೆ ಕಾಡುತ್ತದೆ. ಸಾವಿನಲ್ಲೂ ಗೆಲುವನ್ನು ಸಾಧಿಸಿಬಿಟ್ಟಳು ಎಂಬುದು ಅರ್ಥಪೂರ್ಣವಾಗಿ ಬಳಸಲಾಗಿದೆ. ಯಾರು ಹುಟ್ಟಿದರೇನು ? ಸತ್ತರೇನು ಪ್ರಪಂಚ ಯಥಾಸ್ಥಿತಿಯಲ್ಲಿರುತ್ತದೆ. ಊಟ, ತಿಂಡಿ, ನಿದ್ದೆ ಯಾರು ಬಿಡುವುದಿಲ್ಲ.

1. ಗೋಕಾಕರ ಗದ್ಯ ಸಾಹಿತ್ಯ -ಡಾ. ಕೆ.ಎಸ್. ರತ್ನಮ್ಮ ಪು.ಸಂ. 1

ಅಳುವದು ಕೆಲವು ದಿನಗಳು ಮಾತ್ರ ಮರಣ ಮಾನವರಿಗೆ ದೇವರಿಟ್ಟ ಒಂದು ವರ, ಇದು ಪ್ರಪಂಚದ ನಿಯಮ ! ಇದು ಅತ್ಯದ್ಭುತ ಎಂಬುದು ಅರ್ಥ ಗರ್ಭಿತ ಮಾತಾಗಿದೆ. ಈ ಮಧ್ಯೆ ಡಾ. ವೈಭವನ ಮದುವೆ ವೈಶಾಲಿಯೊಂದಿಗೆ ನಡೆಯುವದು ವೈಶಾಲಿ ಗರ್ಭಧರಿಸುವುದು ಚಿತ್ರಿಸಿದ್ದಾರೆ.

ಲೇಖಕಿ ಕಾದಂಬರಿಯ ಮುಕ್ತಾಯದ ಅವಧಿಯಲ್ಲಿ ತುಂಬ ಕುತುಹಲ ಹುಟ್ಟಿಸಿದ್ದಾರೆ. ಡಾ. ಜಗನ್ನಾಥರಾಯರು ಮೇಘಾ ನಿನ್ನ ತಾಯಿ ಎಂಬ ವಿಷಯ ವೈಭವನಿಗೆ ಗರ ಬಡಿದಂತಾಗುತ್ತದೆ. ಹೆತ್ತ ತಾಯಿಯನ್ನು ಅಮ್ಮ ಎನ್ನಲಾರದ ಸ್ಥಿತಿಗಾಗಿ ದುಃಖಿಸುತ್ತಾನೆ. ತಾನು ಅನಾಥನಲ್ಲ ಮೇಘ ವಿಶ್ವನಾಥ ಪ್ರೀತಿಯ ಮಗನಾನು ಎಂಬ ಹೆಮ್ಮೆಯು ಮೂಡುತ್ತದೆ. ಸತ್ಯಾಂಶ ಹೇಳಿ ರಾಯರು ಕಣ್ಣು ಮುಚ್ಚುವದು ವಿಷಯ ತಿಳಿದು ಕಾಮಾಕ್ಷಿಯು ಶಿವನ ಪಾದ ಸೇರುವರು. ಮರೆ ಮಾಡಿದ ಸತ್ಯಾಂಶ ಡಾ. ಜಗನ್ನಾಥರಾಯರ ಮೂಲಕ ಸಂಧರ್ಬೋಚಿತವಾಗಿ ಹೊರ ಹಾಕುವಂತೆ ಪಾತ್ರ ಚಿತ್ರ ಮಾಡಿದ್ದಾರೆ ಯಶೋದಮ್ಮ ಸಿದ್‌ಬಟ್ಟೆ.

ಸಾಮಾಜಿಕ ಕಾದಂಬರಿಯಾದ ವಿಶ್ವಮೇಘ ದೇವರಲ್ಲಿ ನಂಬಿಕೆ ನಿರೀಕ್ಷೆಯನ್ನು ಹೊಂದಿರಬೇಕು. ಬದುಕು ಶಾಶ್ವತವಲ್ಲ ಎಂಬುದರ ಸಾರಂಶವನ್ನು ನೀಡುತ್ತದೆ. ಒಂದು ಹೆಣ್ಣಿನ ವ್ಯಥೆ ಅರಿಯುವ ಹೆಣ್ಣಿನ ಹೃದಯವನ್ನರಿಯುವ ಹೆಣ್ಣನ್ನು ಗೌರವಿಸುವ ಹಾಗೂ ವ್ಯಕ್ತಿಯಲ್ಲಿ ಭಯ ಭಕ್ತಿ ದಾನ ಧರ್ಮಗಳ ಮೌಲ್ಯಗಳನ್ನು ಇಲ್ಲಿ ಎತ್ತಿ ತೋರಿಸುವ ಕಾರ್ಯ ಸಾಧನೆಯಾಗಿದೆ. ಮೇಘಾಳ ವ್ಯಕ್ತಿತ್ವ ಧೈರ್ಯ ತ್ಯಾಗದ ಗುಣ ಲೇಖಕಿ ಕೊಂಡಾಡಿದ್ದಾರೆ.

**ಹೊಸ ಹೆಜ್ಜೆ :**

ಯಶೋದಮ್ಮ ಸಿದ್‌ಬಟ್ಟೆರವರ ಕೊನೆಯ ಕೃತಿ ಇದಾಗಿದೆ. ಇದು ಕೂಡ ಸಾಮಾಜಿಕ ಕಾದಂಬರಿಯಾಗಿದೆ. ಕರ್ನಾಟಕ ಲೇಖಕಿಯರ ಸಂಘದಿಂದ ಪ್ರಕಟಗೊಂಡಿರುವ ಈ ಕಾದಂಬರಿ ಡಾ. ಜಿ.ಬಿ. ವಿಸಾಜಿಯವರ ಮುನ್ನುಡಿ ಹಾಗೂ ಜಾಣಗೆರೆ ವೆಂಕಟರಾಮಯ್ಯರ ಬೆನ್ನುಡಿಯಿಂದ ಕೂಡಿದೆ.

ಈ ಕಾದಂಬರಿ ಕೌಟುಂಬಿಕ ಸರಸ ವಿರಸ ದಾಂಪತ್ಯಗಳ, ಮಾನವ ಮಾವನ ಸಂಬಂಧಗಳ ಚಿತ್ರವಿದೆ. ಆಸಕ್ತಿ ಮೂಢಿಸುವಂತಹ ಕಥೆಯನ್ನು ಒಳಗೊಂಡಿದೆ. ಸ್ತ್ರೀ ಕೇಂದ್ರಿತ ಅನುಭವಗಳನ್ನು ವಾಸ್ತಿವಿಕವಾಗಿ, ಪ್ರಮಾಣಿಕವಾಗಿ, ಮನಸ್ಸಿಗೆ ಮುಟ್ಟುವಂತೆ ಚಿತ್ರಿಸಲಾಗಿದೆ. ನಾಗಪ್ಪ- ರಮ್ಯಳ ವಿರಸ ದಾಂಪತ್ಯದಿಂದ ಕಾದಂಬರಿ ಪ್ರಾರಂಭವಾಗಿ ದಿನೇಶ - ದಿವ್ಯ, ಶ್ರೀಧರ - ಅಖಿಲ, ಕಾರ್ತಿಕ - ರಮ್ಯ, ಧನರಾಜ - ಶೈಲಾ ಮತ್ತು ಗೌತಮ - ಸೃಷ್ಠಿಯ ವೈವಿಧ್ಯಮಯ ಸರಸ ದಾಂಪತ್ಯ ಜೀವನಗಳ ಸರಮಾಲೆಯೇ ಕಾದಂಬರಿಯಾಗಿದೆ. ಕಥಾ ನಾಯಕಿ ರಮ್ಯಳ ನಿಲುವು ಆಧುನಿಕ ಮಹಿಳೆಯ ನಿಲುವಾಗಿದೆ. ಜೀವನ ಬದಲಾವಣೆಯನ್ನು ನೀರಿಕ್ಷಿಸುತಲೆ ಇರುತ್ತದೆ. ಸ್ತ್ರೀವಾದ ಸಂಸ್ಕೃತಿ ವಿಸ್ಮೃತಿ ಸಮಕಾಲಿನ ಸಮಸ್ಯೆಗಳು ಕಾದಂಬರಿಕಾರ್ತಿಗೆ ಕಾಡಿದೆ. ವಿವಾಹ ವಿಚ್ಛೇದನ, ಮರುವಿವಾಹ,

ಜೀವನ ಪಲ್ಲಟಗೊಳಿಸುವ ದಿಟ್ಟ ಧೈರ್ಯ, ರಮ್ಯಾಳ ಮಹತ್ವಾಕಾಂಕ್ಷೆಯಲ್ಲಿ ಬಂಡಾಯದ ಗುಣವು ಎದುರಾಗುತ್ತದೆ.

ಶತಮಾನಗಳಿಂದಲು ಅಸಹಾಯಕತೆಯ ದೆಸೆಯಿಂದ ಅಬಲೆ ಎಂಬ ಪಟ್ಟಕಟ್ಟಿಕೊಂಡು ಶೋಷಕ ಶಕ್ತಿಗಳ ಮುಂದೆ ಮುಗೆತ್ತಿನಂತೆ ಗೋಣು ಹಾಕುತ್ತಿದ್ದ ಕಾಲದಲು ವ್ಯವಸ್ಥೆಯನ್ನು ವಿರೋಧಿಸಿ, ಅವರಿಂದ ಹೊರಬಂದು ಸಮಾಜದ ವಿರುದ್ಧ ಸೆಡ್ಡು ಹೊಡೆದು ಸ್ವಾತಂತ್ರ್ಯ ಹಾಗೂ ಸಮಾನತೆಗಾಗಿ ತಹತಹಿಸುತ್ತದೆ. ದೌರ್ಜನ್ಯಮುಕ್ತ ಬದುಕನ್ನು ತನ್ನದಾಗಿಸಿಕೊಳ್ಳುವ ಹಣಾಹಣೆ ಕಾದಂಬರಿಯುದ್ದಕ್ಕೂ ಕಂಡುಬರುತ್ತಿದೆ. ದಿಟ್ಟ ಹೆಜ್ಜೆಯನ್ನಿಟ್ಟು ಕಾದಂಬರಿಗೆ ವಸ್ತುವನ್ನು ಭಿನ್ನವಾಗಿ ಆಯ್ಕೆ ಮಾಡಿಕೊಂಡು ಅದರಲ್ಲೊಂದು ವಿಶಿಷ್ಟ ಪಾತ್ರವನ್ನು ರೂಪಿಸಿ ಮಹಿಳಾ ಲೋಕದ ಮುನ್ನಡೆಗೆ ಹೊಸ ಮುನ್ನುಡಿ ಬರೆದಿದ್ದಾರೆ. ಯಶೋದಮ್ಮ ಸಿದ್‌ಬಟ್ಟೆ ಪುರುಷ ಕೇಂದ್ರಿತ ಕಟ್ಟುಪಾಡಿನ ಸಮಾಜದಲ್ಲಿ ಗಂಡನ ದಬ್ಬಾಳಿಕೆ ಮತ್ತು ಕಪ್ಪಿ ಮುಷ್ಠಿಯಿಂದ ಬಿಡುಗಡೆ ಹೊಂದಿರುವ ಹೆಣ್ಣು ಹೊಸದೊಂದು ಪ್ರೀತಿಯ ಅರಮನೆಯನ್ನು ಸೇರುವ ಪ್ರಯತ್ನದಲ್ಲಿ ಯಶಸ್ವಿ ಯಶಸ್ವಿಯಾಗುವ ಅದ್ಭುತ ಕಥಾನಕವೊಂದನ್ನು ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ.

ಕಾದಂಬರಿಕಾರ್ತಿ ಯಶೋದಮ್ಮ ಸಿದ್‌ಬಟ್ಟೆಯವರ ಯಶೋಗಾಥೆ ಮಹಿಳಾ ಲೋಕಕ್ಕೆ ಸ್ಫೂರ್ತಿ, ಚೈತನ್ಯ ನೀಡುತ್ತದೆ. ಒಂದೆಡೆ ಕ್ರಿಯಾತ್ಮಕತೆ ತುಂಬಿಕೊಂಡ ಬರವಣಿಗೆ ಇನ್ನೊಂದೆಡೆ ಮಹಿಳೆಯರ ಸಂಘಟನೆ ಮಾಡುತ್ತಾ ನಿರಂತರ ಚಲನಶೀಲತೆಯಲ್ಲಿರುವ ಪರಿ ಅಚ್ಚರಿ ತರಿಸುತ್ತದೆ. ಸಂಘಟಿತರಾಗುತ್ತಿರುವ ಮಹಿಳೆಯರಲ್ಲಿ ಸಾಹಿತ್ಯಾಭಿರುಚಿಯನ್ನು ತುಂಬುವ ಸಾಧನೆ ಮೆಚ್ಚುವಂತಹದಾಗಿದೆ. ಜೊತೆಗೆ ಮಹಿಳೆಯರನ್ನು ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಳ್ಳುವಂತೆ ಮಾಡುವ ಪ್ರೇರಣೆ ಅನುಕರಣೀಯ ಹಾಗೂ ಅನನ್ಯವಾಗಿದೆ.

ನಾಗಪ್ಪನ ಕೌಟುಂಬಿಕ ಹಿನ್ನಲೆಯಿಂದ ಪ್ರಾರಂಭಗೊಳ್ಳುವ ಕಾದಂಬರಿ ಬಡತನದ ಕುಟುಂಬದಿಂದ ಬಹಳ ಕಷ್ಟ ಪಟ್ಟು ಮೆಟ್ರಿಕ ಪಾಸಾದ ನಾಗಪ್ಪ ಗುಮಾಸ್ತ ಕೆಲಸ ಸೇರಿದ ನಂತರ ಕುಟುಂಬದಲ್ಲಿರುವ ತಾಯಿ, ಮೂರು ಜನ ತಮ್ಮಂದಿಯರ ಜೀವನ ಸುಗಮವಾಗಿ ಯಾವುದೇ ಕೊರತೆ ಇಲ್ಲದಂತೆ ನಡೆಯುತ್ತಿತ್ತು. ಕಾದಂಬರಿಯ ವಸ್ತು ನೇವಾಗಿ ಕೇಂದ್ರೀಯ ಅಂಶದತ್ತ ವಾಲುತ್ತಿದೆ. ಕೆಲಸಕ್ಕೆ ಸೇರಿ ಮೂರು ವರ್ಷವಾದ ನಂತರ ತಾಯಿ ಸರಸ್ವತಮ್ಮ ಗಂಡ ತೀರಿಕೊಂಡಿದರಿಂದ ಸಂಪೂರ್ಣ ಜವಾಬ್ದಾರಿ ಈಕೆಯದೆ ಆಗಿರುವುದರಿಂದ ಮಗನ ಮದುವೆ ಮಾಡುವ ಹಂಬಲ ವ್ಯಕ್ತಪಡಿಸುತ್ತಾಳೆ. ಎಂಥಹ ಹುಡಿಗಿಯಾದರೂ ತೋರಿಸಿದರು ತಿರಸ್ಕರಿಸುತ್ತಿದ್ದ ನಾಗಪ್ಪ ರಮ್ಯಳನ್ನು ನೋಡಿದ ಕೂಡಲೆ ಆಶ್ಚರ್ಯಚಕಿತನಾದನು.

ರಮ್ಯ ಸುಂದರವಾದ ಹುಡುಗಿ ತೆಳ್ಳಗೆ ಬೆಳ್ಳಗೆ ನಾಜುಕಾಗಿದ್ದಾಳೆ. ಗುಂಗುರು ಗುಂಗುರಾದ ತಲೆ ಕೂದಲು ನೋಡಿ ಬೆರಗಾಗಿದನು. ತಾಯಿಗೆ ಒಪ್ಪಿಗೆಯು ನೀಡಿದನು. ಸೀರೆ ಉಡಿಸಿ ಕುಂಕುಮ

ಹಚ್ಚುವ ಕಾರ್ಯಕ್ರಮವು ಮುಗಿದೊಯಿತು. ನಾಗಪ್ಪನ ತಾಯಿ ಸರಸ್ವತಮ್ಮಳಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಮದುವೆಯ ಸಿದ್ದತೆಗಳು ಭರದಿಂದ ಜರುಗಿದವು. ಮದುವೆಗೆ ಬಂದವರೆಲ್ಲ ಸಂತೋಷದಿಂದ ಶುಭ ಹಾರೈಸಿ ಹೋಗಿದ್ದಾರೆ. ವಧು ವರರಿಗೆ ಆರತಿ ಬೆಳಗಿ ದೃಷ್ಟಿ ನಿವಾಸಿಸಿ ಹೆಸರು ಹೇಳಲು ಹಚ್ಚಿ ಬಲಗಾಲು ಒಳಗಿಟ್ಟು ಮನೆಯಲ್ಲಿ ಬರಮಾಡಿಕೊಂಡರು. ನಿವಾಳಿ ಎಂಬುದು ಸ್ಥಳೀಯ ಬೀದರ, ಗುಲ್ಬರ್ಗಾದಲ್ಲಿ ಬಳಸುವ ಪದ ಕಾದಂಬರಿಕಾರ್ತಿ ಸ್ಥಳಿಯರಾಗಿರುವುದು ಇಲ್ಲಿ ಗೋಚರಿಸುತ್ತದೆ.

ಮದುವೆಯಾದ ಮರುದಿನ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿ ಬಾಸಿಂಗ ಬಿಟ್ಟು ಬಂದರು. ರಾತ್ರಿ ಹತ್ತು ಗಂಟೆಗೆ ಸೋಬಾನೆ ಕಾರ್ಯ ನಡೆಯಿತಿತ್ತು. ರಮ್ಯ ಸ್ನಾನ ಮಾಡಿ ಬಿಳಿ ಸೀರೆಯುಟ್ಟು ಅಲಂಕಾರಗೊಂಡಿರುವ ಮನೆಯಲ್ಲಿ ಸರ್ವಭೂಷಿತಳಾಗಿ ಅಲಂಕರಿಸಿಕೊಂಡು ಹೂವಿನ ಹಾಸಿಗೆಯ ಮೇಲೆ ಹೂವಿನಂತೆ ನಡೆದು ಬಂದಳು. ಪ್ರಥಮ ರಾತ್ರಿ ಸಂಪ್ರದಾಯದಂತೆ ಹಾಲು ಹಿಡಿದುಕೊಂಡು ಬಂದಳು. ನಾಗಪ್ಪನ ಕೆನ್ನೆ ಸವರಿದಳು ಕಣ್ಣು ಕೆಂಪಾಗಿಸಿಕೊಂಡನು. ಮೈ ಅದುಮಲು ಪ್ರಾರಂಭವಾಗಿ ತಾನೇನು ಮಾಡುತ್ತಿದ್ದೆನೆಂಬ ಕಲ್ಪನೆ ಇಲ್ಲದೆ ರಮ್ಯಳ ಬಳಿ ಬಂದು ಅವಳ ಕೆನ್ನೆಗೆ ರಪರಪ ಎಂದು ಬಾರಿಸಿದ, ಅವಳ ಮೈಯಲ್ಲಾ ಪರಚಿ ಕಚ್ಚಿ ಎದುಸಿರು ಬಿಡುತ್ತಾ ಮಂಚದ ಮೇಲೆ ಹೋಗಿ ಮಲಗಿದನು. ನೂರಾರು ಹೊಂಗನಸುಗಳನ್ನು ಕಲ್ಪಿಸಿಕೊಂಡು ದಾಂಪತ್ಯ ಹಾಲು ಜೇನಿನ ಹೊಳೆಯಾಗುವುದೆಂಬ ಕಲ್ಪನಾಲೋಕದಲ್ಲಿ ತೇಲಾಡಿದವಳು ಇಲ್ಲಿರುವ ನರಕಯಾತನೆ ಕಂಡು ಸೋತು ಸುಮ್ಮನಾದಳು. ಮರುದಿವಸವಾದರು ಏನಾದರು ಬದಲಾವಣೆಯಾಗುವುದೆಂದು ನಿರೀಕ್ಷಿಸಿದಳು. ರಮ್ಯ ನಾಗಪ್ಪನ ಕಾಲಿಗೆ ನಮಸ್ಕರಿಸಿದಳು. ಅವನ ಮೈಯಲ್ಲಿ ವಿದ್ಯುತ ಸಂಚಾರವಾಗಿ ಕೈ ಎತ್ತಿದನು. ಅಷ್ಟರಲ್ಲಿ ನಿನ್ನ ಹೆಂಡತಿಯನ್ನು ಪ್ರೀತಿಯಿಂದ ನೋಡಿಕೊ ಅವಳ ಬಗ್ಗೆ ಪ್ರೀತಿ, ಗೌರವ ಭಾವನೆ, ಮೂಡುವಂತೆ ಆತ್ಮೀಯವಾಗಿ ನೋಡಿಕೊ ಎಂದು ಹೇಳಿದ ಮಾತು ನೆನಪಾಗಿ ಮತ್ತೊಮ್ಮೆ ಹಿಂಸಿಸಿದನು. ತಾಯಿಗೆ ಏನಾದರು ಹೇಳಿದರೆ ಸಾಯಿಸಿಬಿಡ್ತಿನಿ ಎಂದು ಹುಲಿಯಂತೆ ಹುಂಕರಿಸಿ ಎಚ್ಚರಿಸಿದನು.

ರಮ್ಯಾಳಿಗೆ ಪತಿಯ ವರ್ತನೆ ವಿಚಿತ್ರವಾಗಿ ಕಂಡಿತ್ತು. ಬಾಯಿ ಬಿಡದೆ ಮೌನವಾಗಿ ಅನುಭವಿಸಿದಳು. ನೂರಾರು ಸುಂದರ ಕನಸಿನ ಗೋಪುರ ಕಟ್ಟಿದ ರಮ್ಯಳಿಗೆ ಪತಿಯ ವರ್ತನೆ ಕಂಡು ಆಶ್ಚರ್ಯವಾಯಿತು. ತನ್ನ ಮೇಲೆ ಇವರಿಗೆ ಪ್ರೀತಿ ಇಲ್ಲ, ಇಲ್ಲವೆ ಮದುವೆಯಾಗಲು ಇಷ್ಟ ಇರಲಿಲ್ಲ ಇಲ್ಲವೇ ಬೇರೆ ಯಾವ ಹೆಣ್ಣಿನೊಡನೆ ಸಂಬಂಧವಿರಬೇಕು. ಸಾಮಾನ್ಯವಾಗಿ ಬರುವ ಸಂಶಯ ರಮ್ಯಳಿಗೂ ಇಲ್ಲಿ ಕಾಡಿದೆ ಪತಿಯೇ ಪರದೈವವೆಂದು `ನಂಬಿದ ಹೆಣ್ಣಿಗೆ ಅವನೆ ದೆವ್ವವಾಗಿ ಕಾಡುತ್ತಿದ್ದಾಗ` ಅರ್ಥಪೂರ್ಣವಾಗಿ ಸಂದರ್ಭೋಚಿತವಾಗಿ ಈ ಮಾತನ್ನು ಬಳಸಿದ್ದಾಗೆ ದುಃಖಿ

ತಳಾದ ರಮ್ಯ ಗಂಡನ ವರ್ತನೆಯಿಂದ ಬೆಸತ್ತು `ತವರಿನ ಪ್ರೀತಿನೇ ಬೇರೆ, ಗಂಡನ ಮನೆಯೇ ಬೇರೆ` ಎಂದು ಲಕ್ಷ್ಮಣ ರೇಖೆ ಎಳೆದಿದಾಳೆ.

ಮಗಳ ಕಣ್ಣೀರು ತಾಯಿಗೆ ಪ್ರಶ್ನಾರ್ಥಕವಾಗಿದ್ದವು, ಅಣ್ಣನಾದ ಶ್ರೀಧರನಿಗೆ ತಂಗಿಗೆ ಏನೋ ಕೊರತೆ ಇದೆ ಎಂಬುದು ಅರಿವಿಗೆ ಬಂದಿದೆ. ಆದರೆ ನಿಜವಾದ ಕೊರತೆ ಇರುವುದು ನಾಗಪ್ಪನಲ್ಲಿ ಎಂಬ ನಿಲುವು ಯಾರೊಬ್ಬರಿಗೂ ಅನಿಸಲಿಲ್ಲ. ಪತಿಯು ಅವಳಿಗೆ ಸಮಸ್ಯೆಯಾಗಿ ಕಾಣುತ್ತಿದ್ದಾನೆ. ಅವನ ವರ್ತನೆ, ನಡೆ, ನುಡಿ, ಎಲ್ಲಾ ಪ್ರಶ್ನೆಯಾಗಿಯೇ ಕಾಡುತ್ತಿವೆ. ಪ್ರತಿಯೊಂದು ಹೆಣ್ಣಿನ ಜೀವನ ಪರಿವರ್ತನೆ ವಿವಾಹವಾದ ಬಳಿಕ ಆಗುವುದು. ಪತಿಯ ಸಾಮಿಪ್ಯ ಪ್ರಿಯವಾದರೆ ಅವಳು ಹೂವಿನಂತೆ ವಿಕಾಸವಾಗುವಳು. ಈ ಪುಣ್ಯ ರಮ್ಯಾಳ ಪಾಲಿಗೆ ಮರಿಚಿಕೆಯಾಗಿತ್ತು. ಇಲ್ಲಿ ಈ ಮಾತು ಲೇಖಕಿ ಅರ್ಥಪೂರ್ಣವಾಗಿ ಬಳಸಿದ್ದಾರೆ.

ಸಮಸ್ಯೆಗಳ ಆಗರವಾಗಿರುವ ನಾಗಪ್ಪ ತನ್ನ ತಪ್ಪನ್ನು ಮುಚ್ಚಿಕೊಳ್ಳಲು ಇನ್ನೊಂದು ತಪ್ಪು ಮಾಡುತ್ತಿರುವುದು ಗೋಚರಿಸುತ್ತದೆ. ಅವನೊಬ್ಬ ಮಾನಸಿಕ ಸ್ಥೈರ್ಯ ಕಳೆದುಕೊಂಡವನಾಗಿ ಕಂಡುಬರುತ್ತಾನೆ. ದಿನೆದಿನೆ ಅವನು ಸಿಟ್ಟಾಗುವ, ಬೈಯುವ, ಹೊಡೆದಾಡುವ ಕಾರ್ಯಕ್ಕೆ ಮುಂದಾಗುತ್ತಿದ್ದಾನೆ. ಚಿಕ್ಕ ಮಗು ಆನಂದ ಮದುವೆಯಾದ ದಿನ ಅತ್ತಿಗೆ ಹತ್ತಿರ ಮಲಗುತ್ತೇನೆಂದಾಗ ಹೊಡೆಯಲು ಹೋಗುವುದು, ರಮ್ಯಳ ತಂಗಿ ದಿವ್ಯಳ ಮದುವೆಗೆ ಮುಂಚೆ ಹೋಗು ಎಂದಾಗ ಅಮ್ಮ ನೀನು ಸೊಸೆಯ ಪರ ಮಾತನಾಡಬೇಡ ಎಂದು ಹೇಳುವದು. ರಮ್ಯಳನ್ನು ನಾಲ್ಕು ದಿವಸ ತವರು ಮನೆಯಲ್ಲಿ ಬಿಟ್ಟು ಬರಬೇಕಾಗಿತ್ತು ಎನ್ನುವುದಕ್ಕೆ ಹಾಗಿದ್ದರೆ ಹೆಣ್ಣು ಮಗಳಿಗೆ ಮದುವೆ ಏಕೆ ಮಾಡಬೇಕು ? ಎನ್ನುವುದು ಹೂಂಕಾರ, ಚಿತ್ರ ಹಿಂಸೆ, ಒದೆತ, ಹೊಡೆತ, ಪರಚುವುದು, ಕಚ್ಚುವುದು ಇವೆಲ್ಲವು ಅವನೊಬ್ಬ ಮಾನಸಿಕ ರೋಗಿ ಕೊರತೆಯುಳ್ಳವನೆಂದು ತಿಳಿದುಬರುತ್ತದೆ.

ಮನೆಗೆ ಸೊಸೆ ಬಂದಾಗ ಅತ್ತೆ ಸಾಮಾನ್ಯವಾಗಿ ಮೊಮ್ಮಕ್ಕಳನ್ನು ನೋಡಬೇಕು, ಆಡಿಸಬೇಕೆಂಬ ಹಂಬಲ ಎಲ್ಲರಲ್ಲಿಯೂ ಇರುತ್ತದೆ. ಇದೇ ಸಹಜತೆ ಸರಸ್ವತಮ್ಮ ನಿನ್ನ ತಂಗಿಗೆ ಗಂಡು ಮಗು ಆಗಿದೆಯಂದು ತಿಳಿದು, ತನ್ನ ಸೊಸೆಗೆ ಏಕೆ ಮಕ್ಕಳಾಗಲಿಲ್ಲ ಎಂಬ ಪ್ರಶ್ನೆ ಕಾಡುತಿದೆ ಎಂದಾಗ ರಮ್ಯ ಧೈರ್ಯವಾಗಿ ಪತಿ ಪತ್ನಿಗೆ ಯಾವ ಸಂಬಂಧವಿರಬೇಕೊ ಅದೇ ಇಲ್ಲವಾದ ಮೇಲೆ ಮಕ್ಕಳ ಆಶೆ ಏಕೆ ಮಾಡಲಿ ಎಂದು ಹೇಳಿ ರಮ್ಯ ಮನಸು ಹಗುವ ಮಾಡಿಕೊಂಡರೆ ಸರಸ್ವತಮ್ಮಗೆ ಆಕಾಶವೇ ಮೇಲೆ ಬಿದ್ದಂತಾಗಿ ಮಗನ ಕರೆದು ಹೀಗೇಕೆ ಮಾಡಿದೆ ? ನಿನ್ನ ತಪ್ಪು, ನಿನಗೆ ಗೊತ್ತಿದ್ದರೆ ನನಗೆ ಹೇಳಬೇಕಾಗಿತ್ತು. ಮದುವೆ ಯಾಕೆ ಆದೆಯೊ ? ಅವಳ ಜೀವ ತಿನ್ನಲಿಕ ? ಎಂದು ಹೇಳಿ ಪ್ರಾಣಬಿಟ್ಟಳು.

ಅತ್ತೆಯ ಸಾವು ಎಲ್ಲರಿಗೂ ಕಗ್ಗಂಟಾಯಿತು. ಇನ್ನು ರಮ್ಯಳ ಸ್ಥಿತಿ ಹೇಳಲಾರದಂತಾಗಿದೆ. ಕಾರಣ ನಾಗಪ್ಪ ಈಗ ಬಿಟ್ಟ ಕುದುರೆಯಂತಾಗುವನು. ತಾಯಿ ಇಲ್ಲದ ತಬ್ಬಲಿಗಳಾದ ಆನಂದ,

ಧನರಾಜನ  ಕೆಲಸ ಹೆಗಲಿಗೆ ಬಿದ್ದಿದೆ. ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೆ ಎಲ್ಲಾ ಕೆಲಸವನ್ನು ರಮ್ಯಳೆ ಮಾಡುವ ಸ್ಥಿತಿ. ಹೀಗಿರುವಾಗ ಸದಾ ಬುಸುಗುಡುತ್ತಿದ್ದ ಗಂಡನನ್ನು ಕಂಡರೆ ನಡುಗುತ್ತಿದ್ದಳು. ಅವನು ಹೇಳಿದಂತೆ ಕೇಳಿದರೆ ಹೊಡೆಯುವುದಿಲ್ಲ ಎಂಬುದು ಕಂಡುಕೊಂಡಳು, ರಾಕ್ಷಸನಂತಹ ಗಂಡ ಎದುರು ಮಾತಾಡಿದರೆ ಸಾಕು ಹೊಡೆಯುತ್ತಾನೆ ಪ್ರೀತಿ, ಪ್ರೇಮ ಶಬ್ದಗಳ ಪರಿಚಯವು ಇಲ್ಲದ ದೈಹಿಕವಾಗಿ ಮಾನಸಿಕವಾಗಿ ಹಿಂಸೆ ನೀಡುತ್ತಿದ್ದವನು ಆತನ ರಾಕ್ಷಸ ಕೃತ್ಯಕ್ಕೆ ಹೆದರಿ ರಮ್ಯ ಮೌನವಾದಳು.

ಮನೋರೋಗಿ ನಾಗಪ್ಪನಿಗೆ [1]ಓರ್ವ ವ್ಯಕ್ತಿಯ ಬಾಳನ್ನು ಬಾಳುವವರು ಬರಿ ಆ ವ್ಯಕ್ತಿ ಅಲ್ಲ ಆ ವ್ಯಕ್ತಿಯೊಡನೆ ಅವನ ದೈವವು ಬಾಳುತ್ತದೆ ಎಂಬ ಮಾತು ಗೊತ್ತೆ ಇಲ್ಲ. ಪ್ರೀತಿ ಪ್ರೇಮದ ಅರ್ಥವು ಗೊತ್ತಿರದ ಈ ವ್ಯಕ್ತಿ ತಮ್ಮಂದಿಯರೊಂದಿಗೂ ಕ್ರೂರವಾಗಿ ನಡೆದುಕೊಳ್ಳುತ್ತಿದ್ದ ಆನಂದನನ್ನು ಹೊಡೆಯುವುದು ಧನರಾಜ ಎಂ.ಎ. ಓದುತ್ತೇನೆಂದಾಗ `ಎಮ್ಮೆನಾದರೂ ಮಾಡು, ಕೋಣನಾದರೂ ಮಾಡು` ನನ್ನ ಹತ್ತಿರ ಹಣ ಮಾತ್ರ ಕೇಳಬೇಡ ಎಂದು ಒರಟಾಗಿ ಹೇಳಿ ಆ ಧನ್ಯನಿಗೆ ಬೇಗ ಎಲ್ಲಾದರೂ ಕೆಲಸಕ್ಕೆ ಸೇರಲು ಹೇಳು ನನ್ನ ಅನ್ನ ತಿಂದು, ನನಗೆ ಬುದ್ದಿ ಹೇಳಲಿಕೆ ಬರುತ್ತಾನೆ ತಿಂದುದು ಜಾಸ್ತಿಯಾಯಿತು ಎಂದು ಹೊಲಸಾಗಿ ಮಾತನಾಡುತ್ತಿದ್ದನ್ನು. ನಾಗಪ್ಪನು ವರ್ತನೆ ಮಾತನಾಡುವ ರೀತಿ ಲೇಖಕಿ ವಾಸ್ತವ ರೀತಿಯಲ್ಲಿ ಚಿತ್ರಿಸಿದ್ದಾರೆ.

ತನ್ನ ತಂಗಿ ದಿವ್ಯಳಿಗೆ ಗಂಡು ಮಗುವಾಗಿರುವುದು ರಮ್ಯಳಲ್ಲಿ ಸ್ತ್ರೀತನ ಜಾಗೃತಗೊಳ್ಳುತ್ತದೆ. ಆದರೆ ಅಸಹಾಯಕಳಾಗುತ್ತಾಳೆ. ಹೆಣ್ಣಿಗೆ ತಾಯ್ತನ ಎಂಬುದು ಗೌರವದ ಪ್ರತಿಷ್ಠೆ ಇದನ್ನು ಹೆಣ್ಣು ಸಂತೋಷದಿಂದ ಅನುಭವಿಸುತ್ತಾಳೆ. ವಿವಾಹಿತಳಾದ ಹೆಣ್ಣು ತಾಯಿ ಯಾಗಲು ಹಂಬಲಿಸುತ್ತಾಳೆ. ನಾನಾ ತರಹದ ಶಿಕ್ಷಣ ಪಡೆದ ಯುವತಿಯರು ಬೇರೆ ಬೇರೆ ಉದ್ಯೋಗದಲ್ಲಿ ತಮ್ಮನ್ನು ತೊಡಗಿಸಿಕೊಂಡು ಸ್ವತಂತ್ರವಾಗಿರುತ್ತಾರೆ. ಆದರೂ ಮಕ್ಕಳನ್ನು ಹೇರಲು ಇಷ್ಟಪಡುತ್ತಾರೆ. `ಬಂಜೆ` ಎಂಬ ಶಬ್ದ ಕೇಳಿಸಿಕೊಳ್ಳಲು ಸ್ತ್ರೀಯು ಇಷ್ಟಪಡುವುದಿಲ್ಲ. ಕೆಲವು ಅಪರೂಪದ ಮಹಿಳೆಯರು ತಮಗೆ ಮಕ್ಕಳಾಗದಿದ್ದರೆ, ತಮ್ಮ ಪತಿಗಾದರೂ ಆಗಲೆಂದು ಗಂಡನಿಗೆ ಇನ್ನೊಂದು ಮದುವೆ ಮಾಡುತ್ತಾರೆ. ಈಗ ಕಾಲ ಬದಲಾಗಿದ್ದು ಮಕ್ಕಳಾಗದಿದ್ದಾಗ ಅನಾಥಾಶ್ರಮದಿಂದ ಮಗುವನ್ನು ತಂದು ದತ್ತು ಪಡೆದು, ಅದನ್ನೆ ತಮ್ಮ ಮಗನೆಂದು ತಿಳಿದು ಚೆನ್ನಾಗಿ ಸಾಕಿ, ಓದಿಸಿ, ಮದುವೆ ಮಾಡಿ ಸಂತೋಷಪಡುತ್ತಾರೆ. ಕೆಲವರು ಟೆಸ್ಟ ಟ್ಯೂಬ ಬೇಬಿ  ಯನ್ನು ಇಷ್ಟಪಡುತ್ತಾರೆ. ಕಾಲ ಎಷ್ಟೇ ಪರಿವರ್ತನೆಯಾದರೂ ತಾಯ್ತನ ಎಂಬುದಕ್ಕೆ ಇರುವ ಸ್ಥಾನ ಹಿರಿದಾಗಿಯೆ ಇದೆ. ಈ ಭಾಗ್ಯ ರಮ್ಯಳ ಪಾಲಿಗೆ ಬರುಡಾಗಿದೆ. ಒಬ್ಬ ಹೆಣ್ಣಾಗಿ ಲೇಖಕಿ ಹೆಣ್ಣಿನ ಹಂಬಲವೇನು ? ತಾಯ್ತತನ ಮಹತ್ವ ಅವರ ಅನುಭವದಿಂದ ಬಂದುದಾಗಿದೆ.

1. ಗೋಕಾಕರ ಗದ್ಯ ಸಾಹಿತ್ಯ -ಡಾ. ಕೆ.ಎಸ್. ರತ್ನಮ್ಮ ಪು.ಸಂ. 14

ಕಾದಂಬರಿಯಲ್ಲಿ ಧನರಾಜನ ಪಾತ್ರ ಚಿತ್ರಣ ಸೃಜನಶೀಲತೆಗೆ ಹಿಡಿದ ಕನ್ನಡಿಯಾಗಿದೆ. ಕಾದಂಬರಿಕಾರ್ತಿ ಕನಸಿನ ಪಾತ್ರ ಇದಾಗಿದೆ. ಅತ್ತಿಗೆಯ ಸಹಾಯ ಹಾಗೂ ಬೆಂಬಲದಿಂದ ಎಂ.ಎ. ಪದವಿ ಪಡೆದುದ್ದು. ತನ್ನ ಅತ್ತಿಗೆ ಅಣ್ಣನ ದೌರ್ಜನ್ಯ ಹಿಂಸೆ, ಕಿರುಕುಳ ಯಾತನೆಗೆ ಒಳಗಾಗಿ ನೋವು ಅನುಭವಿಸಿದ ನೆನಪು ಹಾಗು ಅಣ್ಣ ತನನ್ನು ಆನಂದ ಶೇಖರನೊಂದಿಗೆ ನಡೆದುಕೊಂಡ ರೀತಿಗೂ ಬೆಸತ್ತಿದ್ದು ತನ್ನ ಅತ್ತಿಗೆ ಪತಿವರ್ತೆಯೆಂದು ಸಾರಿದುದಲ್ಲದೆ ಅತ್ತಿಗೆಗೆ ಸರಿಯಾದ ದಾರಿ ತೋರಿಸುವ ಅಂಬಲ ಹೊಂದಿದ್ದಾನೆ. ಧನರಾಜ ಕಾಲೇಜಿನಲ್ಲಿ ಸೇರಿಕೊಂಡು ಶಿಸ್ತಿನ ಸೀಪಾಯಿಯಾಗಿ ಅಚ್ಚುಕಟ್ಟುತನದಿಂದ ಕಾರ್ಯನಿರ್ವಹಿಸಿ ಪ್ರಾಂಶುಪಾಲರ, ಮಂತ್ರಿಗಳ ಹಾಗೂ ವಿದ್ಯಾರ್ಥಿಗಳ ಮೆಚ್ಚುಗೆಗೆ ಪಾತ್ರರಾಗಿದ್ದರು. ಮಂತ್ರೀಗಳ ಬೆಂಗಳೂರಿಗೆ ವರ್ಗಾವಣೆ ಮಾಡಿ ಪ್ರಾಂಶುಪಾಲರಾಗಿ ಆಯ್ಕೆ ಮಾಡಿದರು. ನಿನಗೆ ಸಂಪೂರ್ಣ ಸ್ವಾತಂತ್ರ್ಯವಿದೆ, ಹಣ ಬೇಕಾದರೆ ಕೊಡುತ್ತೇನೆ ಕಾಲೇಜಿನ ಹೆಸರು ಎಲ್ಲರ ಬಾಯಿಯಲ್ಲಿ ಬರಬೇಕು ಎಂಬ ಮಂತ್ರಿಗಳ ಅಪೇಕ್ಷೆಯಂತೆ ಹಗಲಿರುಳು ದುಡಿದು ಎಲ್ಲಾ ಉಪನ್ಯಾಸಕರೊಂದಿಗೆ ಬೆರೆತು ಸರಿಯಾದ ಸಂಬಳ ಸಿಗುವಂತೆ ಮಾಡಿ ಬೆಂಗಳೂರಿನಲ್ಲಿಯೇ ಮೊದಲ ಕಾಲೇಜಾಗಿ ಪರಿವರ್ತಿಸಿದನು. ಸಂಪೂರ್ಣ ಸಮಯ ಕಾಲೇಜಿನ ಅಭಿವೃದ್ಧಿಗಾಗಿ ಮೀಸಲಿಟ್ಟು ಪರೀಕ್ಷಾ ಫಲಿತಾಂಶ ನೂರಕ್ಕೆ ತೊಂಬತ್ತಾಗುವಂತೆ ಮಾಡಿದನು.

ರಾಕೇಶನ ಆಗಮನ ರಮ್ಯಾಳ ಬದುಕಿನಲ್ಲಿ ಬೆಳಕು ತಂದಿದೆ. ``ನಿಮ್ಮ ತಂಗಿಗೆ ಅವಳಿ ಮಕ್ಕಳು ಹುಟ್ಟಿದೆಯಲ್ಲಾ, ಅವರಲ್ಲಿ ಗಂಡು ಮಗುವನ್ನು ನಾವು ದತ್ತು ತೆಗೆದುಕೊಳ್ಳೋಣವೇ?`` ಎಂದು ನಾಗಪ್ಪ ಹೇಳಿದ್ದು ರಮ್ಯಾಳಿಗೆ ಹಿಡಿಸಲಾರದಷ್ಟು ಮೂಡಿಸುತ್ತದೆ. ತಂಗಿಗೆ ವಿಷಯ ತಿಳಿಸಿದಾಗ ದಿವ್ಯ ``ಒಂದು ಕಡೆ ಮಗನ ಮೇಲೆ ಆಶೆ ಇನ್ನೊಂದು ಕಡೆ ಅಕ್ಕನ ಮೇಲೆ ಕರುಣೆ`` ಕೊನೆಗೂ ದಿವ್ಯ ಒಪ್ಪಿಕೊಂಡ ನಂತರ ಸಂಭ್ರಮದಿಂದ ರಮ್ಯ ನಕ್ಕ ನಲಿದಾಡಿದಳು. ಅವಳಲ್ಲಿ ಸುಪ್ತವಾಗಿದ್ದ ತಾಯ್ತನ ಜಾಗೃತವಾಯಿತು. ಮಗುವನ್ನು ಬಹಳ ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದಳು. ಮಗುವಿನ ಸಂತೋಷದ ಜೊತೆಗೆ ಕೆಲಸ ಸಿಕ್ಕಿದ ಸಂತೋಷವು ಜೊತೆಯಾಗಿಯೆ ಬಂದವು. ಹೀಗಾಗಿ ರಮ್ಯ ನಾಲ್ಕು ಗೋಡೆಗಳ ಮಧ್ಯೆದಿಂದ ಹೊರಬರಲು ದಾರಿಯಾಯಿತು. ಲೇಖಕಿ ಒಬ್ಬ ಮಹಿಳೆಯಾಗಿರುವುದರಿಂದ ತಾಯ್ತನದ ಮಹತ್ವವೇನು ಎಂಬುದರ ಪ್ರಜ್ಞೆಯು ಅವರಲ್ಲಿರುವುದು ತಿಳಿದುಬರುತ್ತದೆ.

ದಿವ್ಯ ದಿನೇಶನ ದಾಂಪತ್ಯ ಜೀವನದ ಚಿತ್ರಣ ಉತ್ತಮವಾಗಿ ಮೂಡಿ ಬಂದಿದೆ. [1]ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಷ್ಟದು ಅವಂಗೆ ಎನ್ನುವಂತೆ ಒಬ್ಬರಿಗೊಬ್ಬ ಅರ್ಥ ಮಾಡಿಕೊಂಡು ಒಬ್ಬರಿಗಿಂತ ಒಬ್ಬರು ಹೆಚ್ಚಾಗಿ ಪ್ರೀತಿಸುವವರಾಗಿದ್ದರು. ನನ್ನ ತಂಗಿ ಪುಣ್ಯ ಮಾಡಿದ್ದಾಳೆ, ಅವಳ ``ಗಂಡ ಅವಳನ್ನು ಅಂಗೈಯಲ್ಲಿಟ್ಟುಕೊಂಡು ಕಾಪಾಡುತ್ತಾರಂತೆ`` ಎಂಬುವಲ್ಲಿ ದಿನೇಶನ ಸ್ವಭಾವ

---

1. ಹೊಸ ಹೆಜ್ಜೆ -ಯಶೋದಮ್ಮ ಸಿದ್‌ಬಟ್ಟೆ ಪು.ಸಂ. 25

ಪರಿಚಯವಾಗುತ್ತದೆ. ಕಾದಂಬರಿಯುದ್ದಕ್ಕೂ ಅವನ ಉತ್ತಮ ವ್ಯಕ್ತಿತ್ವದ ಚಿತ್ರಣ ಪ್ರತಿಬಿಂಬಿತವಾಗಿದೆ. ರಾಕೇಶನಿಗೆ ರಮ್ಯಳಿಗೆ ಕೊಡುವ ವಿಚಾರದಲ್ಲಿ ದಿವ್ಯಳ ಮನಸ್ಸು ಒಪ್ಪಿಸಿದನು. ಮಗನಾದ ಧೀರಜ ತೀರಿಕೊಂಡಾಗಲು ಸಮಾಧಾನ ಹೇಳುವನು `ಸತ್ತ ಕೂಸು ಹೊಟ್ಟೆಯಲ್ಲಿ` ಎಂಬಂತೆ ನಮಗೆ ಗಂಡು ಮಗು ಹುಟ್ಟಬಹುದೆಂದು ಹೇಳುವನು. ಭಾವನಾದ ಶ್ರೀಧರ ಮದುವೆಗಾಗಿ ಅಖಿಲಾಳ ತಂದೆ ಸಾಹುಕಾರರೊಂದಿಗೆ ಮಾತನಾಡಿ ಮುಂದೆ ನಿಂತು ಮದುವೆ ಮಾಡಿಸುವುದು ಮದುವೆಯ ದಿನ ರಮ್ಯ ರಾಕೇಶ ಇದ್ದಾಗ ಹೊರಡಲು ಸಿದ್ದಳಾದಾಗ ಸಮಾಧಾನ ಹೇಳುವುದು ಹೀಗೆ ದಿನೇಶ ಕಥೆಯಲ್ಲಿ ಉತ್ತಮ ಚಾರಿತ್ರ್ಯದ ವ್ಯಕ್ತಿಯಾಗಿ ಕಂಡು ಬಂದಿದ್ದಾನೆ.

ಅಖಿಲಾಳ ತಂದೆ ಸಾಹುಕಾರರು `ಉಗುರು ತೋರಿಸಿದರೆ ಹಸ್ತ ನುಂಗುವ` ಸ್ವಭಾವದವರು ಎಂಬುದು ಸುಳ್ಳಾಗಿಸಿ ಹೆತ್ತ ಮಗಳಿಗಾಗಿ ಎಂತಹ ತ್ಯಾಗಕ್ಕು ಸಿದ್ಧ ಎನ್ನುವುದು ಸಾಬಿತು ಮಾಡಿ ತೋರಿಸುವ ವ್ಯಕ್ತಿತ್ವ ರೂಪಿಸಿದ್ದಾರೆ. ಲೇಖಕಿ ತನ್ನ ಮಗಳಿಗೆ ದೊಡ್ಡದಾದ ಮನೆ ಕಟ್ಟಿಸಿ ಕೊಡುವುದು ವಿಜೃಂಭಣೆಯಿಂದ ಮದುವೆ ಮಾಡುವುದು ಅವಕಾಶ ಸಿಕ್ಕಾಗ ಅಖಿಲಾ ಹಾಗು ಗಗನಗೆ ಮಾತನಾಡಲು ಅವಕಾಶ ಮಾಡಿಕೊಡುವುದರ ಜೊತೆಗೆ ಅಖಿಲಾಳ ತಾಯಿ ಒಬ್ಬ ಹೆಣ್ಣಿನ ತಾಯಿಯ ಕರ್ತವ್ಯ ಸಮಧಾನದಿಂದ ನಿಭಾಯಿಸಿದ್ದಾರೆ. ಹೆಣ್ಣು ಕೇಳಲು ಮನೆಗೆ ಹೋದಾಗ ದಿನೇಶನಿಗೆ ಆಸ್ತಿ ಅಂತಸ್ತು ಎಂದು ಸಾಹುಕಾರರು ಗೊಣಗಿದಾಗ ``ಹೆಣ್ಣು ಕೇಳಲಿಕೆ ಯಾರಾದರೂ ಮನೆ ತನಕ ಬಂದರೆ, ಅವರಿಗೆ ಸೊಕ್ಕಿನಿಂದ ಉತ್ತರ ಕೊಡಬಾರದು ಎಂದು ಸಮಧಾನ ನೀಡುವುದು. ಮಗ ಅಳಿಯನಿಗಾಗಿ ಗಂಡನ ಮನಸ್ಸು ಒಲಿಸುವುದು ವಿದ್ಯಾವತಿಯ ಪಾತ್ರ ಚಿತ್ರಣ ಸಮಧಾನ ತರುವಂತಹವುಗಳಾವೆ.

ವೈವಿದ್ಯಮಯ ಪಾತ್ರಗಳ ಚಿತ್ರಿಸುವಲ್ಲಿ ಯಶೋದಮ್ಮ ಸಿದ್‌ಬಟ್ಟೆಯವರದ್ದು ಎತ್ತಿದ ಕೈ. ಹೀಗೂ ಸಾಧ್ಯತೆಗಳುಂಟು ಎಂಬುವಂತೆ ಹುಟ್ಟಿಸಿರುವ ಪಾತ್ರ ಚಿತ್ರಣ ಕಾದಂಬರಿಯಲ್ಲಿ ಕಂಡುಬಂದಿದೆ. ಧನರಾಜನ ಪಾತ್ರ ಚಿತ್ರಣ ಈ ಗುಂಪಿಗೆ ಸೇರಿದೆ. ತನ್ನ ಒಡ ಹುಟ್ಟಿದ ಅಣ್ಣ ನಾಗಪ್ಪನ ವಿರುದ್ಧ ಸಿಡಿದೆದ್ದ. ಈ ವಿದ್ಯಾವಂತ ಅತ್ತಿಗೆಯ ಬೆನ್ನಿಗೆ ಶ್ರೀರಕ್ಷೆಯಾಗಿ ನಿಂತದ್ದು, ವಿಶಿಷ್ಟ ಪಾತ್ರ ಚಿತ್ರಣದ ಪ್ರತಿಕವಾಗಿದೆ. ತನ್ನ ಅಣ್ಣ ಅತ್ತಿಗೆಯ ಬಾಳನ್ನು ಹಾಳು ಮಾಡಿದವನು ಹಿಂಸೆ, ಯಾತನೆ, ನೋವು ಅನುಭವಿಸಿದ ನೀವು ಮೌನ ವಹಿಸಿ ಯಮಯಾತನೆ ಅನುಭವಿಸಿದ್ದು ಸಾಕು, ಮದುವೆಯಾಗಿ ನೀವು ಯಾವ ಸುಖ ಕಂಡಿರಿ ? ಈ ವೈವಾಹಿಕ ಜೀವನ ನಿಮಗೆ ಸುಖ ನೀಡಿತೆ ? ನಿಮ್ಮ ನಿರ್ಧಾರದಿಂದ ನಿಮ್ಮ ಜೀವನ ಸಾರ್ಥಕವಾಗುತ್ತದೆಯೆ ? ತಬ್ಬಲಿಗಳಾದ ನಮ್ಮನ್ನೆಲ್ಲಾ `ತಾಯಿ ಪ್ರೀತಿ ನೀಡಿ` ಜೀವನ ರೂಪಿಸಿದ್ದಿರಿ. ಮಕ್ಕಳಾಗಿ ನಾವು ನಮ್ಮ ಪಾಲಿನ ಕರ್ತವ್ಯ ಮಾಡುವುದು ತಪ್ಪೆ ? ನೀವು ಮನಸ್ಸು ಮಾಡಬೇಕಷ್ಟೆ ! ಅಣ್ಣನಿಗೆ ಡೈವೋರ್ಸ್ ಕೊಟ್ಟು ಬಿಡಿ ನಮ್ಮ

ಕಾಲೇಜಿನಲ್ಲಿ ಬ್ರಹ್ಮಚಾರಿಗಳಾಗಿರುವ ಕಾರ್ತಿಕರೊಂದಿಗೆ ಮದುವೆಯಾಗಿ ಎಂಬ ಮಾತುಗಳು ಲೇಖಕಿ ಯಶೋದಮ್ಮ ಸಿದ್‌ಬಟ್ಟೆ ಧನರಾಜನ ಮೂಲಕ ಈ ಕ್ರಿಯೆ ಮಾಡಿಸುತ್ತಿದ್ದಾರೆ.

ಧನರಾಜ ಮಾತಿನಿಂದ ಪ್ರಭಾವಯುತಳಾದ ರಮ್ಯಾಳ ಅಂತರಂಗದಲ್ಲಿ ಒಂದು ಸಣ್ಣ ಆಶಾಕಿರಣ ಮೂಡಿಸಿದೆ. ಮದುವೆಗೆ ಮೊದಲು ಕಂಡ ನೂರಾರು ಕನಸುಗಳು ಈಗ ನಿಧಾನವಾಗಿ ಜಾಗೃತಗೊಳ್ಳುತ್ತಿವೆ. ತಾನು ಭಾರತೀಯ `ನಾರಿ ಮದುವೆ ಎನ್ನುವುದು ಸ್ವರ್ಗದಲ್ಲಿಯೇ` ಆಗುವುದು ನನ್ನ ಹಣೆಬರಹಕ್ಕೆ ಇಂತಹ ಗಂಡ ಸಿಕ್ಕಿದಾನೆ ಎಂದಾಗ ಈ ಗೊಡ್ಡು ಮಾತುಗಳನ್ನು ವೇದಿಕೆಯ ಮೇಲೆ ಹೇಳಲು ಚೆನ್ನಾಗಿರುತ್ತದೆ. ಇನ್ನೊಬ್ಬರಿಗೆ ಉಪದೇಶಿಸಲು ಚಂದ ಆದರೆ ವಾಸ್ತವವಾಗಿ ಆಲೋಚಿಸಲು ಹೇಳಿದಾಗ ಡೈವೋರ್ಸ್ ಅರ್ಜಿಗೆ ಸಹಿ ಹಾಕುತ್ತಾಳೆ. ಕಾರ್ತಿಕನೊಂದಿಗೆ ಪರಸ್ಪರ ಸಮಾಲೋಚಿಸಿ ನಿರ್ಧಾರಕ್ಕೆ ತರುವ ಪ್ರಯತ್ನವು ಮುಗಿದಿದೆ. ರಮ್ಯಳಿಗೆ ಒಂದು ದಡ ಸೇರಿಸಿ ತಾನು ಆನಂತರ ಮದುವೆಯಾಗುವ ನಿರ್ಧಾರ ತೆಗೆದುಕೊಂಡು ಬಿಟ್ಟಿದ್ದಾನೆ. ಈ ನರಕದಿಂದ ಅವಳನ್ನು ಬಿಡುಗಡೆ ಮಾಡಲೇಬೇಕೆಂದು ನಿರ್ಧರಿಸಿದನು. ಸಮಾಧಾನ ಮಾಡಿಕೊಳ್ಳಿ ಇನ್ನೊಂದು ಕಣ್ಣೀರು ಹಾಕಬೇಡಿ, ಸಂತೋಷದಿಂದಿರುವುದನ್ನು ಕಲಿತುಕೊಳ್ಳಿ ನಿಮ್ಮ ಜೀವನವನ್ನು ಏಕೆ ಹಾಳು ಮಾಡಿಕೊಳ್ಳುವಿರಾ ತಾಳ್ಮೆಗೆ ಚಿತ್ರಹಿಂಸೆ ಅನುಭವಿಸಿದ್ದು ಸಾಕು. ಈಗ ಕಾರ್ತಿಕನೊಂದಿಗೆ ಮದುವೆ ಮಾಡಿಕೊಳ್ಳಿ ಎಂದು ಹೇಳಿದಾಗ ಯಾವ ಜನ್ಮದ ತಂದೆಯೋ ನೀನು ! ಈ ಜನ್ಮದಲ್ಲಿ ದೇವರಂತಹ ಮೈದುನನಾಗಿ ಬಂದಿರುವ ನನಗೆ ಮದುವೆ ಮಾಡಲು ಹೊರಟಿರುವೆ ಎಂದು ಸಂತೋಷ ವ್ಯಕ್ತಪಡಿಸುತ್ತಾಳೆ. ಜಗತ್ತಿನಲ್ಲಿ ಅವಳಿಗಾದಂತಹ ಮೋಸ ಯಾವ ಹೆಣ್ಣಿಗೂ ಆಗಬಾರದೆಂಬುದು ಈ ಮೇಲಿನ ಅರ್ಥಪೂರ್ಣವಾದ ಮಾತುಗಳನ್ನು ಲೇಖಕಿ ವಿದ್ಯಾವಂತನಾದ ಧನರಾಜನ ಮೂಲಕ ವ್ಯಕ್ತಪಡಿಸಿದ್ದಾರೆ.

ಕಾದಂಬರಿ ರಮ್ಯಾಳ ಜೀವನದೊಂದಿಗೆ ಹೆಣೆದಿರುವ ಕಥೆಯು ಸುಮಾರು ಭಾಗ ಶ್ರೀಧರ ಅಖಿಲಾಳ ಮದುವೆಯ ವಿಷಯದೊಂದಿಗೆ ಜೊತೆಗೂಡಿ ಬಂದಿದೆ. ಹದಿನೈದು ದಿವಸ ಬೆಂಗಳೂರಿನಲ್ಲಿ ಕಳೆದು ಊರಿಗೆ ಬಂದ ರಮ್ಯಳಿಗೆ ನಾಗಪ್ಪನು ದುರಗುಟ್ಟಿಕೊಂಡು ನೋಡಿ ಏನೇನೋ ಭಾವಿಸಿಕೊಂಡು ಇಂದಿನಿಂದ ಕೆಲಸಕ್ಕೆ ಹೋಗಬೇಡ ಮನೆಯಲ್ಲಿ ಬಿದ್ದಿರು ಎಂದಾಗ ರಮ್ಯ ಪ್ರತಿರೋಧ ತೋರುವುದು ಚಿತ್ರಿಸಲಾಗಿದೆ. `ನಿಮ್ಮ ಇಷ್ಟ ಬಂದಾಗ ಕೆಲಸಕ್ಕೆ ಹೋಗುವುದು ಬೇಡವಾದಾಗ ಬಿಡುವುದಕ್ಕೆ ಇದು ಮನೆ ಕೆಲಸವಲ್ಲ` ಎಂದು ಪ್ರತಿಭಟಿಸಿ ಹೋಗುವುದು ಬದಲಾವಣೆ ಸೂಚಿಸುತ್ತದೆ.

ಕಾರ್ತಿಕನ ಪಾತ್ರ ಸುಂದರವಾಗಿ ನಿರೂಪಿಸಲಾಗಿದೆ. ತುಂಬಾ ಒಳ್ಳೆಯ ನವಯುವಕನಾದ ಕಾರ್ತಿಕ ಮೊದಲಿನಿಂದಲೂ ವಿಶಾಲ ಮನೋಭಾವ ಹೊಂದಿದವನು. ಸದಾ ಸರ್ವರಿಗೂ ಸುಖವನ್ನು ಬಯಸುವ ಮನಸ್ಸನು ಹೊಂದಿದನ್ನು ಪ್ರಾಮಾಣಿಕವಾಗಿ ಕೆಲಸ ಮಾಡುತ್ತಾ ಯಾರ

ತಂಟೆಗೂ ಹೋಗದೆ ತನ್ನದೇ ಆದ ಒಂದು ವಿಶೇಷ ವ್ಯಕ್ತಿತ್ವ ಬೆಳೆಸಿಕೊಂಡಿದ್ದನು. ಶಿಸ್ತುಬದ್ಧವಾದ ಜೀವನ ಶೈಲಿ ಕಾಲೇಜಿನ ಅಭಿವೃದ್ಧಿಯ ಬಗ್ಗೆ ಏನಾದರೂ ಕೇಳುವುದಿದ್ದರೆ ಪ್ರಮಾಣಿಕವಾದ ಸಲಹೆ ನೀಡಿ ಸುಮ್ಮನಾಗುತ್ತಿದ್ದರು. ನಾಗಪ್ಪ ಎಂಬ ರಾಕ್ಷಸನ ದುರ್ವ್ಯವಹಾರವೆಲ್ಲಿ ಆ ಸಾತ್ವಿಕ ಕಾರ್ತಿಕ ನಲ್ನುಡಿಗಳೆಲ್ಲಿ? ಎಂದು ವ್ಯತ್ಯಾಸ ಗುರುತಿಸುತ್ತಿದ್ದಾಳೆ ರಮ್ಯ. ಕಾರ್ತಿಕನೊಂದಿಗೆ ಧನರಾಜ ಹೇಳಿದಂತೆ ವಿಚ್ಛೇದನ ಪಡೆದ ನಂತರ ಮದುವೆಯಾಗಲು ಮನಸ್ಸು ಒಪ್ಪುತ್ತದೆ. ಆದರೆ ರಾಕೇಶನ ಚಿಂತೆಯು ಆಕೆಯ ಕಾಡುತ್ತದೆ. ತಂಗಿಯ ಮಗನಾದ ರಾಕೇಶನಿಗೆ ಪುನಃ ವಾಪಸು ಕೊಡಬೇಕು. ಅವಳ ಗಂಡು ಮಗ ತಿರಿಕೊಂಡಿದರಿಂದ ಯಾವ ಸಮಸ್ಯೆ ಬಾರದಂತೆ ನೋಡಿಕೊಂಡಿದ್ದರೆ ಲೇಖಕಿ.

ಒಂದು ಹೆಣ್ಣಿನ ಜೀವನದಲ್ಲಿ ಮದುವೆಯು ಮಹತ್ವದ ಸ್ಥಾನ ಪಡೆದುಕೊಳ್ಳುತ್ತದೆ. ಆಕೆಯು ಕನಸಿನ ಗೋಪುರವನ್ನು ಕಟ್ಟುತ್ತಾಳೆ. ನೂರಾರು ಆಶೆಗಳು, ಹತ್ತಾರು ನೀರೀಕ್ಷೆಗಳು ಸಂತೋಷದಲ್ಲಿ ತೇಲಾಡುತ್ತಾಳೆ. ಆದಷ್ಟು ಬೇಗ ಮದುವೆಯ ಕಾರ್ಯ ಮುಗಿದರೆ ಬೇಗನೆ ಗಂಡನೊಂದಿಗೆ ಪ್ರೀತಿಯಿಂದ ಇರಬಹುದೆಂದು ಅಪೇಕ್ಷಿಸಿದರು ಹೆಣ್ಣಿನ ಗುಣ ಆಕೆಯ ತಾಳ್ಮೆಯ ಗಂಡನ ಮನೆಗೆ ಹೋಗುವಾಗ ದುಃಖ ಸಹಜವಾಗಿಯೇ ಆವರಿಸುತ್ತದೆ. ಲೇಖಕಿ ಇಲ್ಲಿ ರಮ್ಯ, ದಿವ್ಯ, ಅಖಿಲಾ, ಶೈಲಾ ಮದುವೆಯಾಗಿ ಗಂಡನ ಮನೆಗೆ ಹೋಗುವಾಗ ಅಳುವ ಪ್ರಸಂಗ ಹೇಳಲು ಮರೆತಿಲ್ಲ ಎಂಬುದು ಇದಕ್ಕೆ ಸಾಕ್ಷಿ. ಲೇಖಕಿ ಒಬ್ಬ ಹೆಣ್ಣಾಗಿರುವುದರಿಂದ ಸಹಜವಾಗಿಯೇ ಹೆಣ್ಣಿನ ನೋವು ಏನು ಗಂಡನ ಮನೆಗೆ ಹೋಗುವಾಗ ಅವಳ ದುಃಖ ಇಮ್ಮಡಿಯಾಗುವುದು ಎಂಬುದನ್ನು ತಾವು ಮನಗಂಡಿದ್ದಾರೆಂಬುದು ಇಲ್ಲಿ ಹೇಳಬಹುದು. ಅಖಿಲಾ ಶ್ರೀನಾಥನನ್ನು ಬಹಳಷ್ಟು ಪ್ರೀತಿಸುತ್ತಿದ್ದಳು. ಮದುವೆ ಕಾರ್ಯ ಮುಗಿದಾಗ ಊಟಕ್ಕೆ ಕರೆದಾಗ ಶ್ರೀಧರ ಸಿಕ್ಕರೆ ಸಾಕು, ಊಟ ಬೇಡ ಏನು ಬೇಡ ಎಂದವಳು ಕೂಡಾ ಗಂಡನ ಮನೆಗೆ ಹೋಗುವಾಗ ಅಳುವುದು ಇಲ್ಲಿ ಉದಾಹರಿಸಬಹುದಾಗಿದೆ.

ರಮ್ಯಾಳನ್ನೇ ತನ್ನ ತಾಯಿ ಎಂದು ತಿಳಿದಿದ್ದ ರಾಕೇಶನಿಗೆ ಕಾರ್ತಿಕನೊಂದಿಗೆ ಮದುವೆಯಾದ ನಂತರ ಧನರಾಜ ಹಾಗೂ ಕಾರ್ತಿಕರ ಅಪೇಕ್ಷೆ ಮೇರೆಗೆ ತಂಗಿ ದಿವ್ಯಳಿಗೆ ಒಪ್ಪಿಸಿಕೊಟ್ಟಿರುವುದರಲ್ಲಿ ಲೇಖಕಿ ಸರಳ ಸೂತ್ರ ಅನುಸರಿಸಿದ್ದಾರೆ. ಒಲ್ಲದ ಮನಸ್ಸಿನಿಂದ ರಾಕೇಶನಿಂದ ದೂರವಾದ ರಮ್ಯಳಿಗೆ ಮದುವೆಯಾದ ನಂತರ ಗರ್ಭವತಿಯಾಗಿ ಮಕ್ಕಳನ್ನು ಪಡೆಯುವುದು ಇದಕ್ಕೆ ಕಾರಣವಾಗಿದ್ದರು ರಾಕೇಶನ ಮೇಲೆ ಮೊದಲಿದ್ದ ಪ್ರೀತಿ ಕಡಿಮೆಯಾಗಿದೆ. ಮೊದಲು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗಿಂತಲು ಹೆಚ್ಚಿನ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ಧೀರಜನ ಸಾವಿನಿಂದ ಕಂಗೆಟ್ಟಿದ ದಿವ್ಯ ರಾಕೇಶನಿಗಾಗಿ ಹಂಬಲಿಸುತ್ತಿರುವುದು. ಧೀರಜನ ಸಾವಿನ ಸುದ್ದಿ ತಿಳಿದಾಗಲು ಅಕ್ಕ ಭಾವ ಬರದೆ ಇದ್ದಾಗ `ಸುಖದ ಸಮಯದಲ್ಲಿ ಹೋಗದಿದ್ದರೂ ನಡೆಯುತ್ತದೆ. ಆದರೆ ದುಃಖದ ಸಮಯದಲ್ಲಿ ಪಾಲ್ಗೊಳ್ಳಬೇಕು` ಎಂಬ ನುಡಿಮುತ್ತು ಹಾಗು

ನಾಗಪ್ಪ ಶವ ಸಂಸ್ಕಾರಕ್ಕೆ ಹೋಗಲು ತಿಳಿಸಿದಾಗ `ಕಷ್ಟದ ಸಮಯದಲ್ಲಿ ಹೋಗಬೇಕಾದುದು ನಮ್ಮ ಧರ್ಮ` ಮೌಲ್ಯವನ್ನು ಸಾರುವ ಮಾತುಗಳಾಗಿ ಕಂಡುಬರುತ್ತದೆ.

ಮದುವೆಯಾದ ಹೆಣ್ಣಿನ ಜೀವನಕ್ಕೆ ಹೊಸ ಆಯಾಮ ದೊರೆಯುವುದು ತನ್ನವರೆನೆಲ್ಲಾ ಬಿಟ್ಟು ಕೈ ಹಿಡಿದ ಪತಿಯೇ ಸರ್ವಸ್ವ. ಅವರ ಬಳಗವನ್ನೇ ತನ್ನ ಬಳಗವೆಂದು ತಿಳಿಯುವುದು. ಪತಿಯ ಪ್ರೇಮ ಸಾಮ್ರಾಜ್ಯದಲ್ಲಿ ಬಂದ ಎಲ್ಲಾ ಕಷ್ಟಗಳನ್ನು ಎದುರಿಸುವುದು. ಹಾಗೆಯೆ ಪತಿಯು ಸಹ ಸತಿಯ ಪ್ರೇಮ ಸಾಮ್ರಾಜ್ಯದಲ್ಲಿ ತೇಲಾಡುವುದು ಅವಳಿಗಾಗಿ ಏನುಬೇಕಾದರೂ ಮಾಡಲು ಸಿದ್ಧನಿದ್ದಿರುವುದು ಮುಂದೆ ಮಕ್ಕಳು ಮರಿಗಳಾದಾಗ ರಾಜನಿಗೆ ರಾಜ್ಯ ವಿಸ್ತರಿಸಿದಾಗ ಆಗುವ ಸಂತೋಷ ಇವರಿಗಾಗುವುದು ಮುಂದೆ ಅವರ ವಿದ್ಯಾಭ್ಯಾಸ ಕೆಲಸ ಮದುವೆ ಮುಂತಾದವುಗಳನ್ನು ಮಾಡುತ್ತಾ ಜೀವನದ ಸುಖ ಅನುಭವಿಸುವುದು ಇದು ದಾಂಪತ್ಯ ಜೀವನ. ಆದರೆ ಕಾದಂಬರಿಯ ನಾಯಕಿ ರಮ್ಯ ಗಂಡ ನಾಗಪ್ಪ ಇದಕ್ಕೆ ತದ್ವಿರುದ್ಧನಾಗಿದ್ದಾನೆ. ಈ ಕಾರಣಕ್ಕಾಗಿಯೇ ನ್ಯಾಯಾಲಯದಿಂದ ರಮ್ಯಳಿಗೆ ವಿಚ್ಛೇಚನ ಸಿಗುತ್ತದೆ. ಮತ್ತು ಕಾರ್ತಿಕನೊಂದಿಗೆ ರಿಜಿಸ್ಟಾರ ಮದುವೆಯಾಗುತ್ತಾಳೆ. ರಮ್ಯಾಳ ಹಳೆಯ ಕಷ್ಟದ ದಿನಗಳು ದೂರವಾಗಿ ಕಾರ್ತಿಕನೊಂದಿಗೆ ಮದುವೆಯೆ ಇವಳ ಹೊಸ ಹೆಜ್ಜೆಯಾಗಿದೆ. ಕಾದಂಬರಿಯ ಶೀರ್ಷಿಕೆ ಅರ್ಥಪೂರ್ಣವಾಗಿದೆ.

ಬ್ರಹ್ಮಚಾರಿಯಾಗಿದ್ದವನನ್ನು ಸಂಸಾರಿಯಾಗಿ ಮಾಡಲು ಹೊರಟಿರುವ ಧನರಾಜನ ತ್ಯಾಗ ಅಂತಿಂಥಹದಲ್ಲ. ವಿಚ್ಛೇದನಕ್ಕೆ ಒಳಗಾಗಿರುವವನು ತನ್ನ ಅಣ್ಣ ಆದರೆ ಧನರಾಜ, ಆನಂದದಲ್ಲಿ ಎಲ್ಲಿಯೂ ಇದರ ಬಗ್ಗೆ ದುಃಖವಿಲ್ಲ. ಒಬ್ಬ ವಿದ್ಯಾವಂತನು ಹೀಗಿರಬೇಕು ಎಂಬುದು ಎತ್ತಿ ತೋರಿಸಲಾಗಿದೆ. ತನ್ನ ಅತ್ತಿಗೆ ತಾಯಿಯಂತೆ ನಮಗಾಗಿ ಮಾಡಿದ ತ್ಯಾಗ ತೋರಿಸಿದ ಪ್ರೀತಿ ತನಗಾಗಿ ಹಾಗೂ ನಮ್ಮೆಲ್ಲರಿಗಾಗಿ ಅತ್ತಿಗೆ ಹಿಂಸೆ, ಯಾತನೆ, ನೋವು, ದುಃಖ ಎಲ್ಲವು ಅನುಭವಿಸಿದನ್ನು ಧನರಾಜ ಮರೆತಿಲ್ಲ. ರಮ್ಯಳಿಗೆ ಹೊಸದಾರಿ ತೋರಿಸಿ ಹೊಸ ಹೆಜ್ಜೆಗಳನ್ನು ಇಡಲು ಕಾರಣಿಭೂತನಾಗಿದ್ದಾನೆ.

ಸೃಜನಶೀಲ ಲೇಖಕಿಯ ಕೈಯಲ್ಲಿ ಅರಳಿದ ಅನೇಕ ಪಾತ್ರಗಳು ಹೇಳಿ ಮಾಡಿಸಿದಂತಿವೆ. ಸಾಮಾಜಿಕ ಬದುಕಿನಲ್ಲಿ ಕಂಡುಬರದ ಸಹಜ ಪ್ರೀತಿ, ಅನುಕಂಪ, ದಯೆ, ಕರುಣೆ ಇಲ್ಲಿ ಎಂಥಹ ದೊಡ್ಡ ವ್ಯಕ್ತಿಯಾಗಿದ್ದರೂ ಅವುಗಳಿಂದ ದೂರ ಇರಲಾನು ಎಂಬುದು ತೋರಿಸಿಕೊಟ್ಟಿದ್ದಾರೆ. ಇದಕ್ಕೆ ಉದಾಹರಣೆ ಎನ್ನುವಂತೆ ಸಾಹುಕಾರರು ಹಾಗೂ ಮಂತ್ರಿಗಳನ್ನು ಚಿತ್ರಿಸಿದ್ದಾರೆ. ಸಾಹುಕಾರರು ಅಖಿಲಾ ಹಾಗೂ ಶ್ರೀಧರನ ಸಲುವಾಗಿ ಮಂತ್ರೀಗಳು ಧನರಾಜ ಹಾಗೂ ಶೈಲಾಳಿಗಾಗಿ ಮಾಡಿರುವ ತ್ಯಾಗ, ಅನುಕಂಪ ಮಗಳೆಂಬ ಮಮತೆ ಎಂತಹ ದೊಡ್ಡ ವ್ಯಕ್ತಿಯಾದರು ಇದಕ್ಕೆ ಹೊರತಾಗಿಲ್ಲ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಹೆಣ್ಣು ಮಕ್ಕಳ ಉಡುಗೆ ತೊಡುಗೆ, ಮದುವೆಯ ಸಿಂಗಾರ, ಸ್ನಾನ ಮಾಡಿಸುವ ವಿಧಾನ, ಮೊದಲ ರಾತ್ರಿಗಾಗಿ ಕೋಣೆಯ ಶೃಂಗಾರ, ಹಣ್ಣು, ಊಟ, ತಿಂಡಿಗಳ ವರ್ಣನೆ ಮದುಮಗಳು ವೇಶಭೂಷಣ ಗಂಡನೆದುರಿಗೆ ಬಂದಾಗ ನಾಚಿ ನೀರಾಗುವುದು ಗಂಡನ ತೋಳಲ್ಲಿ, ಬಿಸಿ ಅಪ್ಪುಗೆಯಲ್ಲಿ ಮೈಮರೆಯುವುದು, ತಾಯ್ತನದ ಸುಖಕ್ಕಾಗಿ ಹಂಬಲಿಸುವುದು, ಮಕ್ಕಳ ವಿದ್ಯಾಭ್ಯಾಸ ಮದುವೆ ಮೊಮ್ಮಕ್ಕಳು, ಇವುಗಳ ವರ್ಣನೆ ಸ್ವಾರಸ್ಯಕರವಾಗಿ ಮೂಡಿಸಿದ್ದಾರೆ. ಯಶೋದಮ್ಮ ಸಿದ್‌ಬಟ್ಟೆ ಅನುಭವಗಳು ಸೌಂದರ್ಯ ಪ್ರಜ್ಞೆ ಹುಟ್ಟು ಗುಣವಾಗಿ ಕಂಡುಬರುತ್ತದೆ.

ಕಾದಂಬರಿಯ ಅಲ್ಲಲ್ಲಿ ಬಂಡಾಯದ ನೆಲೆಗಳು ಕಂಡುಬರುತ್ತವೆ. ನಾಗಪ್ಪನ ಕಿರುಕುಳ ಹೆಚ್ಚಾದಾಗ ವಿರೋಧಿ ರಮ್ಯ ಅವನನ್ನು ದೊಬ್ಬುವುದು ಬೆಂಗಳೂರಿನಿಂದ ಬಂದನಂತರ ನಾಗ ರಮ್ಯಳಿಗೆ ಇನ್ನು ಮುಂದೆ ಮನೆಬಿಟ್ಟು ಕೆಲಸಕ್ಕೆ ಹೋಗಬೇಡ ಎಂದಾಗ ಮನಸ್ಸು ಬಂದಾಗ ಹೋಗುವುದು ಬೇಡವೆಂದಾಗ ಬಿಡುವುದಕ್ಕೆ ಅದು ನಮ್ಮ ಮನೆ ಅಲ್ಲ ಎಂಬುದು, ಇನ್ನೊಂದು ಮದುವೆಗೆ ಸಮಾಜ ಚಿಂತೆ ಇದೆಯೇ ನಿನಗೆ ಎಂಬ ಅತ್ತಿಗೆಯ ಮಾತಿಗೆ ಸಮಾಜ ನೀವು ಹೀಗಿರುವುದು ನೋಡಿ ಬಹುಮಾನ ಕೊಟ್ಟತ್ತೆ ? ನಿಮ್ಮ ತಾಯಿ ಬಂದು ಕೇಳಿದರೆ ? ಅಣ್ಣ ತಮ್ಮಂದಿರು ವಿಚಾರಿಸಿದರೆ ? ಎಂದು ಹೇಳಲಿ ಹಾಗೂ ಗಂಡಸಿಗೆ ಎರಡು ಮೂರು ಮಕ್ಕಳನ್ನು ಬಿಟ್ಟು ಹೆಂಡತಿ ಸತ್ತರೆ ಆತ ಪುನಃ ಮದುವೆಯಾಗುವನು. ಹೆಣ್ಣಿಗೆ ಮರು ಮದುವೆ ಎಂದಾಗ ಸಮಾಜ ಹುಬ್ಬೆರಿಸಿ ನೋಡುವುದು ಮಹಿಳೆ ಸಮಾಜದ ವ್ಯವಸ್ಥೆಗೆ ತಲೆಬಾಗಿ ಅನುಭವಿಸಬೇಕಾಗುತ್ತದೆ. ಪುರುಷನ ಗುಲಮಳಾಗಿ ಬದುಕಬೇಕು ಎಂಬಲಿ ಬಂಡಾಯದ ಅಲೆಗೆ ಅಪ್ಪಳಿಸಿವೆ. ಈ ವ್ಯವಸ್ಥೆ ಬದಲಾಗಲು ಮಹಿಳೆ ಜಾಗ್ರತಳಾಗಬೇಕು. ಸಮಾಜದ ಎಲ್ಲಾ ರಂಗಗಳಲಲಿ ದುಡಿಯುತ್ತಾ ಆರ್ಥಿಕವಾಗಿ ಪ್ರಬಲರಾಗಿ ಸಂಸಾರದ ಭಾರ ಹೊರಬೇಕು. ಇದಕ್ಕೆಲ್ಲಾ ಕಲಿತ ಮಹಿಳೆಯರು ಬೇಕು ಪ್ರಜ್ಞಾವಂತ ಮಹಿಳೆಯರಿಂದ ಪುರುಷ ಹಾಗೂ ಮಹಿಳೆಯರಲ್ಲಿನ ಸಮಾನತೆಯಿಂದ ಸಮಾಜದ ಅಭಿವೃದ್ಧಿ ಎಂಬುದು ಪುರುಷ ಸಮಾಜ ಅರಿಯುವಂತೆ ಮಾಡಬೇಕು [1]ಹೆಣ್ಣಿನ ನೋವನ್ನು ಮಹಿಳೆ ಅರ್ಥಮಾಡಿಕೊಳ್ಳುವಷ್ಟು ಪುರುಷ ಅರಿಯಲಾರ ಎಂದು ಹೇಳುವಲ್ಲಿ ಲೇಖಕಿ ರಮ್ಯಳ ಮೂಲಕ ಮಹಿಳೆಯ ನೋವು, ಪುರುಷ ಸಮಾಜದ ವಿರುದ್ಧ ತಮಗಿರುವ ಆಕ್ರೋಶ ವ್ಯಕ್ತಪಡಿಸಿದ್ದಾರೆ. ಮಹಿಳೆಯರು ಮುಂದೆ ಬರಲು ಸಾಕ್ಷರತೆಯೇ ಅಸ್ತ್ರ ಎಂಬುದು ತಿಳಿದುಬರುತ್ತದೆ.

ಒಂದು ಮಗು ತನ್ನ ತಾಯಿಯ ಮಮತೆ, ಪ್ರೀತಿಗಾಗಿ ಹೇಗೆ ತೊಳಲಾಡುತ್ತದೆ ಎಂಬುದು ರಾಕೇಶನ ಮೂಲಕ ಚಿತ್ರಿಸಲಾಗಿದೆ. ದಿವ್ಯ ಹಡೆದ ತಾಯಿಯಾದರು ರಮ್ಯ ನನ್ನ ಹಡೆದ ತಾಯಿಯೆಂದೆ ತಿಳಿದಿರುವ ರಾಕೇಶ ಮಗುವಾಗಿದ್ದಾಗಿನಿಂದಲು ಅಕ್ಕರೆಯಿಂದ ಬೆಳೆಸಿದಳು. ಬೆಳೆದು

1. ಪ್ರಗತಿಯ ಪಥದಲ್ಲಿ ಭಾರತೀಯ ನಾರಿ -ಯಶೋದಮ್ಮ ಸಿದ್‌ಬಟ್ಟೆ ಪು.ಸಂ. 37

ದೊಡ್ಡವನಾದ ಮಗನಿಗೆ ರಮ್ಯ ನನ್ನ ತಾಯಿ ಎಂಬ ಅರಿವು ಇದೆ [2] `ಪುತ್ರಶೋಕಂ ಜೀವನ ಪರ್ಯತಂ` ಎನ್ನುವಂತೆ ಧೀರಜಿನ ಮರಣದ ನಂತರ ಮನೋವ್ಯಥೆ ಪಡುತ್ತಿರುವ ದಿವ್ಯ ಇದೇ ಸಮಯದಲ್ಲಿ ಕಾರ್ತಿಕನೊಂದಿಗೆ ಮದುವೆಯಾದ ರಮ್ಯ ಇವರಿಬ್ಬರ ನಡುವೆ ರಾಕೇಶ `ಇಬ್ಬರ ಜಗಳದಲ್ಲಿ ಬರುಡಾಯಿತು ಮಗು` ಎಂಬಂತೆ ಚಿತ್ರಿಸಲಾಗಿದೆ. ರಮ್ಯಳಿಗೆ ಎಚ್ಚರ ಬಂದಿಲ್ಲ ಕೋಮಾ ಸ್ಥಿತಿಯಲ್ಲಿ ಇದ್ದಾಳೆ ಎಂದಾಗ ಒಮ್ಮೆ ನೋಡುವ ಬಯಕೆವ್ಯಕ್ತಪಡಿಸಿದಾಗ ಕಾರ್ತಿಕ ಕಾಲೇಜಿಗೆ ಹೋದಾಗ ರಮ್ಯಳನ್ನು ಖಾಸಗಿ ಆಸ್ಪತ್ರೆಯಲ್ಲಿ ದಾಖಲಿಸಿ ಮಂಚದ ಮೇಲೆ ಮಲಗಿಸಿ ಆಕ್ಸಿಜನ್, ಬ್ಯಾಂಡೇಜ, ಡಿಪ್ ಹಾಕಿ ಕಣ್ಣು ಮುಚ್ಚಲು ಹೇಳಿ ದಿನೇಶ ದಿವ್ಯದೊಂದಿಗೆ, ರಾಕೇಶ ಕರೆತಂದು ತೋರಿಸಿದಾಗ ಅವರ ಬಳಿ ಹೋಗ ಬಾರದಪ್ಪ ನೀನಿನ್ನು ಚಿಕ್ಕವನು ಅವರು ಹೆಚ್ಚು ದಿನ ಬದುಕುವುದಿಲ್ಲ ಎಂದಾಗ ಮಮ್ಮಿ ಎಂದು ರಾಕೇಶ ಕೈ ಹಿಡಿದಾಗ ರಮ್ಯಳ ಕಣ್ಣಿನಿಂದ ನೀರು ಬರುತ್ತಿದ್ದವು ಕೈಹಿಡಿದು ರಾಕೇಶನ ಮೈಸವರಿ ನಾನಿನ್ನು ಬದುಕುವುದಿಲ್ಲ. ಇವರೇ ನಿನ್ನ ತಂದೆ ತಾಯಿ ಅವರೊಂದಿಗೆ ಚನ್ನಾಗಿರು ಎಂದು ಮುಖ ತಿರುಗಿಸುವಳು ನೋವು ತರುವ ಅಂಶವಾಗಿದೆ.

ಕಾದಂಬರಿಯಲ್ಲಿನ ವಿಶಿಷ್ಟ ಪಾತ್ರಗಳಲೊಂದಾದ ಶೈಲಾಳ ತಂದೆಯಾದ ಮಂತ್ರಿಗಳು ಬಡವರು ಬಂಧುಗಳೆಂದು ಹೊಗಳಿಸಿಕೊಳ್ಳುವ ಇಂದಿನ ರಾಜಕಾರಣಿಗಳು ಬಡವರನ್ನೇ ಕಡೆಗಣಿಸುತ್ತಾರೆ. ಇಲ್ಲಿನ ಮಂತ್ರಿಯು ಹೃದಯ ಶ್ರೀಮಂತಿಕೆಯಿಂದ ಕೂಡಿರುವ ವ್ಯಕ್ತಿ. ಇನ್ನೊಬ್ಬರ ನೋವು ಅರ್ಥ ಮಾಡಿಕೊಳ್ಳುವ ದೇವರಂತಹ ಮನುಷ್ಯನನ್ನಾಗಿ ಚಿತ್ರಿಸಲಾಗಿದೆ. ಧನರಾಜನ ಸ್ವಭಾವ ಗುರುತಿಸಿ ಕೆಲಸಕ್ಕೆ ಸೇರಿಸಿಕೊಳ್ಳುವರು. ಬೆಂಗಳೂರಿನ ಕಾಲೇಜಿಗೆ ವರ್ಗಾವಣೆ ಮಾಡಿ ಪ್ರಿನ್ಸಿಪಾಲರಾಗಿ ಮಾಡಿರುವುದು. ಈಗ ತನ್ನ ಮಗಳಾದ ಶೈಲಾಳಿಗೆ ಧನರಾಜನಿಗೆ ಕೊಡಲು ಮುಂದಾಗಿರುವುದು, ಮಗನಾದ ಗೌತಮ ಧನರಾಜನೊಂದಿಗೆ ಕೆಟ್ಟವಾಗಿ ನಡೆದುಕೊಂಡಾಗ ಮಗನನ್ನು ಬಯುವುದು ಧನರಾಜನನ್ನು ತನ್ನ ಮನೆಗೆ ಆಹ್ವಾನಿಸಿ ಮಗಳೊಂದಿಗೆ ಮಾತನಾಡಲು ಅವಕಾಶ ಕಲ್ಪಿಸಿಕೊಡುವಂತಹದು ಒಟ್ಟಾರೆಯಾಗಿ ಮಂತ್ರಿಯ ವ್ಯಕ್ತಿತ್ವವನ್ನು ವಿಶಿಷ್ಟವಾದ ರೀತಿಯಲ್ಲಿ ಪ್ರತಿಬಿಂಬಿಸಲಾಗಿದೆ.

ಕಾದಂಬರಿಯ ಮುಕ್ತಾಯದ ಭಾಗದಲ್ಲಿ ಧನರಾಜ ಹಾಗೂ ಶೈಲಾಳ ಪ್ರಣಯದ ಕತೆಯು ಒಳಗೊಂಡಿದೆ. ತನ್ನ ಮನೆಗೆ ಕರೆದು ತನ್ನ ಮಗಳಿಗೆ ಮದುವೆಯಾಗು ಎಂಬ ಆಹ್ವಾನವು ಬಂದಿದೆ. ಹಾಗೆಯೇ ಇಬ್ಬರು ತಮ್ಮ ವಿಚಾರಗಳು ಹಂಚಿಕೊಳ್ಳಲು ಸಮಯ ಹಾಗು ಅವಕಾಶವು ನೀಡಲಾಗಿದೆ. ಮದುವೆಯ ತಯಾರಿಯು ಅಮೆ ವೇಗದ ಗತಿಯಲ್ಲಿ ಸಾಗುತ್ತಿರುವಾಗ ಒಂದು ವಿಘ್ನ ಕಾಣಿಸಿಕೊಳ್ಳುತ್ತದೆ. ಮಂತ್ರಿಗಳ ಮಗನಾದ ಗೌತಮ ತನ್ನ ಗೆಳೆಯ ಡಾ. ಹರ್ಷನಿಗೆ ತನ್ನ ತಂಗಿ ಶೈಲಾಗೆ ಕೊಟ್ಟು, ತಾನು ಅವನ ತಂಗಿಯಾದ ಡಾ. ಸೃಷ್ಠಿ ಯೊಂದು ಮದುವೆಯಾಗುವ

---

2. ವಿಶ್ವಮೇಘ -ಯಶೋದಮ್ಮ ಸಿದ್‌ಬಟ್ಟೆ ಪು.ಸಂ. 37

ಬಯಕೆಯೊಂದಿಗೆ ಇಂಡಿಯಾಗೆ ಬಂದಾಗ ತನ್ನ ತಂಗಿ ಶೈಲಾಳೊಂದಿಗೆ ಧನರಾಜನ ಮದುವೆ ನಿಗದಿಯಾಗಿದೆ ಎಂದು ತಿಳಿದು ಧನರಾಜನೊಂದಿಗೆ ಕೆಟ್ಟದಾಗಿ ನಡೆದುಕೊಳ್ಳುತ್ತಾನೆ. ತಾವು ಅನ್ನ ಹಾಕಿ ಸಾಕಿದ ನಾಯಿ ಎಂದು ಕೂಡ ಕರೆಯುತ್ತಾನೆ. ಇಲ್ಲಿ ಗೌತಮನು ತಾನು ಡಾ. ಹರ್ಷನಿಗೆ ಕೊಟ್ಟ ಮಾತು ಉಳಿಸಿಕೊಳ್ಳಲು ಆಗುತ್ತಿಲ್ಲ ಎಂಬ ಕಾರಣಕ್ಕಾಗಿ ಧನರಾಜನ ಮೇಲೆ ರೇಗುತ್ತಿರುವುದು ಕಂಡುಬರುತ್ತದೆ.

ಮಂತ್ರಿ ಮಗನಾದ ಧನರಾಜ ತಾನು ಸೋಲಬಾರದೆಂದು ಶೈಲಾಳಿಗೆ ಸೀರೆ, ಕೊಡಿಸುವುದಾಗಿ ಹೇಳಿ ರೇಷ್ಮೆ ಸೀರೆ ಕೊಡಿಸಿ ಚುಡಿದಾರ ತೆಗೆದುಕೊಳ್ಳೋಣ ಎಂದು ಹೊರಗಡೆ ಬಂದು ತಾನು ಡಾ. ಸೃಷ್ಠಿಯ ಕಾರಿನಲ್ಲಿ ಕುಳಿತು ಹರ್ಷನಿಗೆ ಶೈಲಾ ಇರುವ ಕಾರಿನಲ್ಲಿ ಕುಳಿತು ಹೋಗುತ್ತಾರೆ. ಹರ್ಷಾ ಶೈಲಾಳ ಮಾನಭಂಗಕ್ಕೆ ಮುಂದಾಗುತ್ತಾನೆ. ಉಪಾಯದಿಂದ ಶೈಲಾ ಧನರಾಜನಿಗೆ ಕರೆ ಮಾಡಿ ಹೇಳಿದಾಗ ಪೋಲಿಸರು ಬಂದು ಹರ್ಷನನ್ನು ಬಂದಿಸುವಂತಹ ವಿಷಯ ಚರ್ಚೆಗೆ ಬಂದಿದೆ. ಮಂತ್ರಿಗಳು ದೇವರಂತಹ ಗುಣ ಹೊಂದಿದವರು ಬರುಶಟಗನ ಭಕ್ತಿ ದಿಟವೆಂದು ನಂಬಲು ಬೇಡ ಮತದೊಳಿನ ಬೆಕ್ಕು ಇಲಿಯ ಕಂಡೋಡೆ ಪುಟ ನೆಗೆದಂತಾಯ್ತು`` ಎನ್ನುವಲ್ಲಿ ಬೆಕ್ಕಿನ ಮೂಲ ಪ್ರವೃತ್ತಿ ಹಿಂಸೆ ಮಾಡುವುದು. ಇಲ್ಲಿ ಮಂತ್ರಿಗಳ ಮಗ ಎಂಬ ದರ್ಪ ಅಹಂಕಾರದಿಂದ ವರ್ತಿಸುವುದು ಹಾಗೂ ಮಂತ್ರಿಗಳ ಮಕ್ಕಳು ಯಾವ ಹಂತಕ್ಕೆ ಇಳಿಯಬಲ್ಲರು ಎಂಬ ಅಂಶ ಕಣ್ಣಿಗೆ ಹಾಕಿದ್ದಾರೆ.

ಶೈಲಾ ಧನರಾಜನೊಂದಿಗೆ ಮದುವೆಯಾಗುವ ಸಂದರ್ಭದಲ್ಲಿ. ರಮ್ಯಳು ಸುಂದರವಾದ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಗಂಡನ ಮನೆ ಸೇರುವ ಮಂತ್ರಿ ಮಗಳು ಗರ್ವ ಅಹಂಕಾರವಿರದೆ ಪ್ರೀತಿ ಗೌರವದಿಂದ ದಾಂಪತ್ಯ ಜೀವನ ನಡೆಸುವದು. ಧನರಾಜ ಬಡತನದ ಹಿನ್ನಲೆಯಿಂದ ಬಂದವನು ಮಂತ್ರಿಗಳ ಮಗಳೊಂದಿಗೆ ವಿವಾಹವಾಗುವುದು ಲೇಖಕಿಯ ವಿಶಿಷ್ಟತೆ ಕಂಡುಬಂದಿದೆ. ಕಾದಂಬರಿಯುದ್ದಕ್ಕೆ ಉನ್ನತ ಚಿಂತನೆಗಳಂತಹ ಅಂಶಗಳನ್ನು ಮುಂದೆ ಮಾಡಿದ್ದಾರೆ ಅಂದರೆ ಬಡವರು, ಕೆಳವರ್ಗದವರು ಎನ್ನದೆ ಅವರಲ್ಲಿಯು ತಾನು ಮುಂದೆ ಬರಬೇಕು ಎತ್ತರಕ್ಕೆ ಬರಬೇಕೆಂಬ ಹಂಬಲ ಪರೋಕ್ಷವಾಗಿ ವ್ಯಕ್ತಪಡಿಸಿದ್ದಾರೆ. ಧನರಾಜನ ಚಿಂತನೆ ಉನ್ನತ ಮಟ್ಟದಾಗಿರುವುದರಿಂದ ಉನ್ನತ ಮಟ್ಟಕ್ಕೆ ಏರಿದನು ಎಂಬ ಅಂಶವು ಇಲ್ಲಿ ಪ್ರತ್ಯಕ್ಷೀಸಲಾಗಿದೆ.

ಯಶೋದಮ್ಮ ಸಿದ್‌ಬಟ್ಟೆರವರ ಈ ಕಾದಂಬರಿಯಲ್ಲಿ ದಾಂಪತ್ಯ ಜೀವನದ ಸೊಗಸು ಕಂಡುಬರುತ್ತದೆ. `ಮದುವೆ ಅನ್ನುವುದು ಋಣಾನುಬಂಧದ ಬಂಧನ` ಎಂಬ ಮಾತಿನೊಂದಿಗೆ ಒಬ್ಬರಿಗೊಬ್ಬರು ವಿಶ್ವಾಸದಿಂದ ಕಾಣುವುದು ನೋವು ನಲುವಿನಲ್ಲಿ ಸಹಭಾಗಿಯಾಗಿ ಸಹಕರಿಸುವುದು ಪ್ರೀತಿ, ಪ್ರೇಮ, ಅನೇಕಂಪದಿಂದ ಒಬ್ಬರನೊಬ್ಬರು ಆದರಿಸುವದು ಇಲ್ಲಿ ಕಂಡು ಬರುವ ಅಂಶವಾಗಿದೆ. ಲೆಖಕಿ ಇಲ್ಲಿ ದಿವ್ಯ - ದಿನೇಶ, ಕಾರ್ತಿಕ -ರಮ್ಯ, ಅಖಿಲಾ- ಶ್ರೀಧರ,

ಧನರಾಜ -ಶೈಲಾ, ಗೌತಮ- ಸೃಷ್ಟಿ ಇವರುಗಳ ಜೀವನದಲ್ಲಿ ಮದುವೆಯ ನಂತರ ಒಬ್ಬರನೊಬ್ಬರು ಪ್ರೀತಿಸುವುದು ಕಂಡುಬರುತ್ತದೆ. ದಾಂಪತ್ಯ ಎಂಬ ಪರಿಕಲ್ಪನೆಯೊಂದಿಗೆ ಬರುವುದು `ಲೈಂಗಿಕತೆ` ಯ ಪರಿಕಲ್ಪನೆ ಇದು ದಾಂಪತ್ಯ ಜೀವನದ ಅವಿಭಾಜ್ಯ ಅಂಗವೆಂಬುದು ಈ ಕೃತಿಯು ತೋರಿಸಿಕೊಟ್ಟಿದೆ.

ಲೈಂಗಿಕ ಸಂತೃಪ್ತಿ ಇರುವ ವ್ಯಕ್ತಿ ಉನ್ನತ ಮಟ್ಟಕ್ಕೆ ಏರುತ್ತಾನೆ. ಆದರೆ ಲೈಂಗಿಕತೆಯಲ್ಲಿ ಸಂತೃಪ್ತನಲ್ಲದವನು ಜೀವನದಲ್ಲಿ ಜಿಗುಪ್ಸೆ ಹೊಂದುತ್ತಾನೆ. ಹೀಗಿರುವಾಗ ಈ ಲೈಂಗಿಕತೆ ವ್ಯಕ್ತಿಯ ಜೀವನದಲ್ಲಿ ಅತಿ ಮುಖ್ಯವಾದುದು. ಲೈಂಗಿಕ ಸಾಮರ್ಥ್ಯವಿರುವ ವ್ಯಕ್ತಿಯು ತನ್ನ ಹೆಂಡತಿಯನ್ನು ಪ್ರೀತಿ ವಿಶ್ವಾಸಗಳಿಂದ ನೋಡಿಕೊಳ್ಳುತ್ತಾನೆ. ಲೈಂಗಿಕ ದೌರ್ಬಲ್ಯ ಇರುವ ವ್ಯಕ್ತಿಯು ತನ್ನ ತಪ್ಪನ್ನು ಮರೆಮಾಚಿಕೊಳ್ಳು ತನ್ನ ಹೆಂಡತಿಯ ಮೇಲೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಹಿಂಸೆಗೆ ಮುಂದಾಗುತ್ತಾನೆ.

ಕಾದಂಬರಿಯ ಕೇಂದ್ರ ವ್ಯಕ್ತಿಯಾಗಿರುವ ನಾಗಪ್ಪ ಲೈಂಗಿಕ ದೌರ್ಬಲ್ಯತೆಯಿಂದ ಕೂಡಿದ ವ್ಯಕ್ತಿ. ತನ್ನ ಪತಿಗೆ ಸಂತೃಪ್ತ ಜೀವನ ನೀಡಲು ಅವಳ ಭಾವನೆಗಳಿಗೆ ಸ್ಪಂಧಿಸಲು ಆಗುತ್ತಿಲ್ಲ ಕಾರಣ ಅವನು ಲೈಂಗಿಕತೆಗೆ ಪರಿಪಕ್ವನಾದ, ಸಾಮರ್ಥ ವ್ಯಕ್ತಿಅಲ್ಲ. ತನ್ನ ಕೊರತೆಯ ಕಾರಣದಿಂದಾಗಿ ಅದನ್ನು ಮರೆ ಮಾಡಲು ರಮ್ಯಳಿಗೆ ಚಿತ್ರಹಿಂಸೆ ನೀಡುವುದು, ಹೊಡೆಯುವುದು, ಪರಚುವುದು, ಬೈಯುವ ಕೆಲಸ ಮಾಡುತ್ತಾನೆ. ರಮ್ಯಳ ತಂಗಿಯ ಮಗನಾದ ರಾಕೇಶನಿಗೆ ದತ್ತು ತೆಗೆದುಕೊಂಡಾಗ ತನ್ನ ದಾರಿ ಸುಗಮ ಎಂಬ ಭಾವನೆ ಅವನಲ್ಲಿ ಬೆಳೆಯುತ್ತದೆ.

ಭಾರತೀಯ ಸಂಸ್ಕೃತಿ ಪರಂಪರೆಗಳಲ್ಲಿ ದಂಪತಿಗಳಿಗೆ ಮದುವೆಯಾದ ನಂತರ ಮಕ್ಕಳಾಗದಿದ್ದ ಪಕ್ಷದಲ್ಲಿ ಪತ್ನಿಯನ್ನೇ ಕಾರಣಿಭೂತ ಮಾಡವು ಪದ್ಧತಿ ಇಂದಿಗೂ ಇದೆ. ಆಧುನಿಕವಾಗಿ, ವಿಜ್ಞಾನವು ಕೂಡಾ ಸಾಬಿತು ಪಡಿಸಿರುವಂತೆ ಪುರುಷರು ಸಹ ಮಕ್ಕಳು ಆಗದೇ ಇರುವುದಕ್ಕೆ ಕಾರಣ ಎಂಬುದು ಸಾಬಿತುಪಡಿಸಿದೆ. ಕಾದಂಬರಿಯ ಲೇಖಕಿ ಇಲ್ಲಿ ಮದುವೆಯಾದ ನಂತರ ಮಕ್ಕಳಾಗದೆ ಇರುವುದಕ್ಕೆ ಕೇವಲ ಹೆಣ್ಣು ಕಾರಣಳಲ್ಲ, ಪುರುಷರು ಹಲವು ರೀತಿಯಲ್ಲಿ ಕಾರಣಿಕರ್ತನಾಗಿರುತ್ತಾನೆ ಎಂಬ ಅಂಶ ಪ್ರಮುಖ ವಸ್ತುವನ್ನಾಗಿರಿಸಿಕೊಂಡು ಈ ಕಾದಂಬರಿ ರಚಿಸಿದ್ದಾರೆ.

ಒಟ್ಟಾರೆ ಕಾದಂಬರಿ ಆಧುನಿಕತೆಯ ಮೇಲೆ ಬೆಳಕು ಚಲ್ಲುವ ಹಾಗೂ ವೈಚಾರಿಕತೆ ಮನೋಭಾವವನ್ನು ಬೆಳೆಸುವ ಧೋರಣೆ ಆಶಯಗಳನ್ನು ಹೊಂದಿದೆ.

ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮ ಅಮೂಲ್ಯವಾದ ಮೂರು ಕಾದಂಬರಿಗಳನ್ನು ನೀಡಿರುವ ಯಶೋದಮ್ಮ ಸಿದ್‌ಬಟ್ಟೆ ಈ ನಾಡಿನಲ್ಲಿ ಕಾದಂಬರಿಯ ಬರವನ್ನು ನಿಗಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿ ಜನಪ್ರಿಯ ಪ್ರಕಾರವಾಗಿದ್ದು, ಉಳಿದ ಪ್ರಕಾರಗಳನ್ನು ಹಿಂದಕ್ಕೆ ಹಾಕಿ ತನ್ನ

ಓದುಗರನ್ನು ಹಿಡಿದಿಟ್ಟುಕೊಳ್ಳುವಲ್ಲಿ ಕಾದಂಬರಿ ಯಶಸ್ವಿಯಾಗಿದೆ. ದೊಡ್ಡ ಸಾಹಿತಿಗಳಿಂದ ಯುವ ಸಾಹಿತಿಗಳನ್ನಳಗೊಂಡು ಈ ಪ್ರಕಾರದ ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದಾರೆ. ಈ ಜನಪ್ರಿಯತೆ ಹಾಗೂ ಆಕರ್ಷಣೆಯನ್ನು ಮನಗಂಡೇ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೆಚ್ಚಿನ ಮಹಿಳಾ ಲೇಖಕಿಯರು ಕಾದಂಬರಿ ರಚನೆಯನ್ನೇ ಆಯ್ಕೆ ಮಾಡಿಕೊಂಡು ಬರೆಯುತ್ತಿದ್ದಾರೆ. ಇಂತಹ ಜನಪ್ರಿಯ ಪ್ರಕಾರವನ್ನೇ ಆಯ್ಕೆ ಮಾಡಿಕೊಂಡ ಯಶೋದಮ್ಮ ಸಿದ್‌ಬಟ್ಟೆ ರವರುಕಾದಂಬರಿ ರಚನೆಗೆ ತೊಡಗಿದ್ದಾರೆ. ಕನ್ನಡ ಸಾಹತ್ಯವೆ ಬರುಡಾಗಿರುವ ಈ ನಾಡಿನಲ್ಲಿ ಪ್ರಬುದ್ಧವಾಗಿರುವ ಕಾದಂಬರಿಗಳು ಬರೆದು ಜನಮೆಚ್ಚುಗೆ ಪಡೆದಿದ್ದಾರೆ. ಇವರು ಮಂಗಳಾ, ವಿಶ್ವಮೇಘಾ, ಹೊಸ ಹೆಜ್ಜೆ ಗಳೆಂಬ ಸಾಮಾಜಿಕ ಕಾದಂಬರಿಗಳು ಬದಲಾವಣೆಯನ್ನು ಪ್ರತಿಬಿಂಬಿಸುವ ಸಾಹತ್ಯ ಕೃತಿಗಳಾಗಿವೆ.

## ೩.೨ ಸಣ್ಣ ಕಥೆಗಳು :

ಕನ್ನಡ ಸಾಹಿತ್ಯಕೋಶವನ್ನು ಶ್ರೀಮಂತಗೊಳಿಸಿರುವ ಸಾಹಿತ್ಯ ಪ್ರಕಾರಗಳಲೊಂದಾದ ಸಣ್ಣ ಕಥೆಗಳು, [1]ಕಾದಂಬರಿಯ ತರುವಾಯ ಸಣ್ಣ ಕಥೆಯೇ ಅತ್ಯಂತ ಜನಪ್ರೀಯವಾದ ಸಾಹಿತ್ಯ ಪ್ರಕಾರವಾಗಿ ಬೆಳೆದಿದೆ. ಕಥೆಯ ವಸ್ತು ಅಲ್ಲಿನ ಪಾತ್ರ ರಚನೆ, ಅದರಲ್ಲಿನ ಆವರಣ ಎಲ್ಲವೂ ಒಂದೇ ಒಂದು ಗುರಿಯನ್ನು ಮುಟ್ಟುವಂತೆ ಹಾಗೂ ಓದುಗರಲ್ಲಿ ಒಂದೇ ಒಂದು ಪರಿಣಾಮವನ್ನುಂಟು ಮಾಡುವಂತಿರುತ್ತವೆ. ಕಿರಿದಾದರು ಹಿರಿದಾದ ಭಾವ, ಜ್ಞಾನ, ಅನುಭವಗಳನ್ನು ತುಂಬಿ ಜೀವನಕ್ಕೆ ಬೆಳಕು ಬೀರುವುದು ಅದರ ವೈಶಿಷ್ಟ್ಯವಾಗಿದೆ. [2]ಎಡ್ಗರ್ ಅಲೆನ್ ಪೊ ಹೇಳುವಂತೆ ಓದಲು ಅರ್ಧ ಗಂಟೆಯಿಂದ ಒಂದು ಅಥವಾ ಎರಡು ಗಂಟೆಗಳ ಕಾಲ ತೆಗೆದುಕೊಳ್ಳುವ ಸಂಕ್ಷಿಪ್ತವಾದ ಗದ್ಯ ನಿರೂಪಣೆಯಾಗಿರುತ್ತದೆ.

ಕನ್ನಡದಲ್ಲಿ ಸಣ್ಣ ಕತೆಗಳನ್ನು ಬರೆದವರಲ್ಲಿ ಮಾಸ್ತಿಯವರೇ ಮೊದಲಿಗರು ಕೆರೂರು ವಾಸುದೇವಾಚಾರ್ಯ, ಪಂಜೆ ಮಂಗೇಶರಾಯರು, ಎಂ.ಎನ್.ಕಾಮತ್ ಈ ಮೊದಲು ಸಣ್ಣ ಕಥೆ ಬರೆದು ಮುನ್ನುಡಿ ಹಾಕಿದ್ದಾರೆ. ನವೋದಯ ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಸಾಹಿತ್ಯಿಕ ಚಳುವಳಿಗಳು, ಸಿದ್ಧಾಂತಗಳು ಸಣ್ಣ ಕತೆಯ ಪ್ರಕಾರದ ಮೇಲೆ ತಮ್ಮ ಗಾಢವಾದ ಪ್ರಭಾವ ಬೀರಿವೆ. ಕನ್ನಡ ಸಾಹಿತ್ಯದಲ್ಲಿ ಅದರಲ್ಲಿಯೂ ಹೈದ್ರಾಬಾದ ಕರ್ನಾಟಕ ಭಾಗದಲ್ಲಿ ಸಣ್ಣ ಕಥೆಗಳು ಬರೆದ ಸಾಹಿತಿಗಳ ಸಂಖ್ಯೆಯೂ ಕಡಿಮೆ ಇರುವಾಗ ಮಹಿಳೆಯರಂತು ತೀರಾ ಕಡಿಮೆ.

ಬೀದರ ಗಡಿನಾಡಿನ ಸಾಹಿತಿಗಳಾಗಿರುವ ಯಶೋದಮ್ಮ ಸಿದ್‌ಬಟ್ಟೆರವರು ವಿವಿಧ ಪ್ರಕಾರದ ಸಾಹಿತ್ಯ ಕೃತಿಗಳು ಧಾರೆಯರೆಯುವುದರೊಂದಿಗೆ ಈ ಭಾಗದ ಸಾಹಿತ್ಯದ ಕಳಕಳಿ ಹೊಂದುವುದರೊಂದಿಗೆ ಸಾಹಿತ್ಯದ ಸಮೃದ್ಧಿಯ ಕಾಯಕ ಕೈಗೊಂಡಿರುವುದು ಕಂಡುಬರುತ್ತದೆ. ಅನೇಕ ಸಣ್ಣ ಕಥೆಗಳನ್ನು ಬರೆಯುವುದರ ಮೂಲಕ ಕನ್ನಡ ಸಾಹಿತ್ಯ ಸೇವೆ ಮಾಡಿದ್ದಾರೆ.

ಸಣ್ಣ ಕಥೆಗಳು :

1. ವಿಧಿ
2. ದೇವ ಮಾನವ
3. ಮಿಂಚು ಸಿಡಿಲು
4. ಆತಂಕ
5. ಆಕಸ್ಮಿಕ
6. ಬೇಡವಾದ ಶವ.

---

1. ಕಲಾ ಸಂಗಮ -ಪ್ರೊ. ಕೆ.ಎಸ್. ನಾಯಕ ಪು.ಸಂ. 2

೧. ವಿಧಿ :

ಯಶೋದಮ್ಮ ಸಿದ್‌ಬಟ್ಟೆಯವರು ಬರೆದಿರುವ ಈ ಸಣ್ಣ ಕತೆ ಉತ್ತರ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ವಿಧಿ ಎಂಬ ಕತೆಯು ಒಂದಾಗಿದೆ. ಈ ಸಣ್ಣ ಕತೆಯು ಗಾರಜ್ಜಿಯ ಬದುಕಿನ ಘಟನೆಯನ್ನು ಹೆಣೆಯಲಾಗಿದೆ. ಅವಳ ವ್ಯಕ್ತಿತ್ವದ ಮೇಲೆ ಕತೆಯು ಅವಲಂಬಿತವಾಗಿದೆ.

ಹುಲ್ಲಿನ ಜೋಪಡಿಯಂತಹ ಮನೆಯಲ್ಲಿ ವಾಸಿಸುವ ಗೌರಮಾಜ್ಜಿ ಎಲ್ಲರ ಪ್ರೀತಿಗೆ ಪಾತ್ರಳಾದವಳಾಗಿದ್ದಳು. ಮಕ್ಕಳಿಂದ ಮುದುಕರ ವರೆಗೆ ಪ್ರಿಯಳಾಗಿದ್ದಳು. ಚಿಕ್ಕ ಹುಡುಗ ರಾಕೇಶ ಗೌರಮಾಜ್ಜಿ ಈ ಕಡೆಗೆ ಬಂದಾಗೊಮ್ಮೆ ಚಪ್ಪಾಳೆ ತಟ್ಟುತ್ತಿದ್ದನು. ಮನೆಯ ಯಜಮಾನ್ರು ಗೌರಮಾಜ್ಜಿಯಲ್ಲಿ ಸತ್ತು ಹೋಗಿರುವ ತನ್ನ ತಾಯಿಯ ರೂಪ, ನೆನಪು ಕಂಡಂತೆ ಭಾಸವಾಗಿ ಬಾ ಅಮ್ಮ ಎಂದು ಉಪಚರಿಸಿ ತನ್ನ ಪಕ್ಕದಲ್ಲಿ ಕೂಡಿಸಿಕೊಂಡು ಮಾತನಾಡುತ್ತಿದ್ದರು. ಗೌರಮಾಜ್ಜಿಯು ಅಷ್ಟೇ ಎಲ್ಲರೊಡನೆ ನಗುತ್ತಾ ಆತ್ಮೀಯವಾಗಿ ಮಾತನಾಡುತ್ತಿದ್ದಳು. ಯಾರು ಏನು ಕೊಟ್ಟರು ತೆಗೆದುಕೊಳ್ಳುತ್ತಿದ್ದಳು. ದಿಕ್ಕಿಲ್ಲದ ಈ ಅಜಿಯು ಕುರಿತು ಅವರಿವರು ಹೇಳಿದ ಮಾತು ತನ್ನಲ್ಲಿರುವ ಐದು ಸಾವಿರ ರೂಪಾಯಿ, ಕೊಡ, ಹಂಡೆ, ಮನೆ ಪಾತ್ರೆಗಳು, ಬಟ್ಟೆ ಬರೆ ಎಲ್ಲಾ ತೆಗೆದುಕೊಂಡು ಅವಳ ಗೆಳತಿ ಸಾವಿತ್ರಮ್ಮನಿಗೆ ಕೊಟ್ಟು ಅವಳ ಹತ್ತಿರವೇ ಉಳಿದುಕೊಂಡಳು.



ತನ್ನಲ್ಲಿದ್ದುದೆಲ್ಲವನ್ನು ಸಾವಿತ್ರಮ್ಮನಿಗೆ ಕೊಟ್ಟು ಕೈ ಖಾಲಿಯಾಗಿ ಕುರಿತ ಗೌರಮಾಜ್ಜಿಗೆ ಒಂದು ದಿನ ಸಾವಿತ್ರಮ್ಮನ ಗಂಡನಾದ ಶಿವಪ್ಪ ಗೌರಜ್ಜಿಗೆ ಕುಡಿದು ಬಾಯಿಗೆ ಬಂದಂತೆ ಬಯುತ್ತಿದನು. ತನ್ನ ಮನೆಯಿಂದ ಹೊರಟು ಹೋಗುವಂತೆ ತಿಳಿಸಿದನು. ಗೆಳತಿಗೆ ಕರೆದು ತನ್ನದೆಲ್ಲ ಹಿಂದಿರುಗಿಸುವಂತೆ ಕೇಳಿದಾಗ ಸಾವಿತ್ರಮ್ಮ ಸಮಾಧಾನ ಹೇಳಿ ಕುಡಿದ ಅಮಲಿನಲ್ಲಿನ ಶಿವಪ್ಪನ ಮಾತುಗಳಿಗೆ ಗಂಭೀರವಾಗಿ ಪರಿಗಣಿಸದೇ ಇರಲು ಹೇಳಿದ ಸಾವಿತ್ರಮ್ಮನ ಸಮಧಾನದ ಮಾತುಗಳಿಂದ ಸಂತುಷ್ಟಳಾಗುತ್ತಾಳೆ. ಗೌರಮ್ಮಾಜ್ಜಿ ಕಲ್ಕತ್ತಾದಿಂದ ಬಂದ ಶಂಕರ ಎಲ್ಲರಿಗೂ ನಮಸ್ಕರಿಸುತ್ತಾ ಅಜ್ಜಿಗೆ ನಮಸ್ಕರಿಸಿದ್ದಾಗ ಎಲ್ಲಿಲ್ಲದ ಆನಂದವಾಗಿ ಅವನ ಹಣೆ ಮುತ್ತಿಟ್ಟು, ಮೈಕೈಸವರಿ ಕಣ್ತುಂಬ ನೀರು ತುಂಬಿಕೊಂಡು ಯಾರೊಂದಿಗೂ ಮಾತನಾಡದೆ ಮನೆಗೆ ಹೋಗುತ್ತಾಳೆ. ಅಂದಿನಿಂದ ದಿನನಿತ್ಯ ಶಂಕರನು ಆಟವಾಡುವುದು ನೋಡಿ ಕಣ್ತುಂಬ ನೀರು ತಂದು ಸಂತೋಷ ಪಡುತ್ತಿದ್ದಳು. [1]`ಪುತ್ರ ಶೋಕಂ ಜೀವನ ಪರ್ಯಂತಂ` ಎನ್ನುವಂತೆ ತನ್ನ ಮಗನ ನೆನಪು ಕಾಡತೊಡಗಿದೆ. ಗೌರಮ್ಮಜಿಗೆ ಕಲ್ಕತ್ತಗೆ ಮರಳಿ ಹೋಗುವಾಗ ಸೀರೆ ಹಾಗೂ ಸ್ವೀಟರ ತಂದುಕೊಟ್ಟಾಗ ಅತಿವ ಸಂತೋಷಗೊಂಡು ಇವರೆಲ್ಲರು ರೈಲ್ವೆ ಸ್ಟೇಷನಗೆ ಬರುವ ಮೊದಲು ತಾನು ಅಲ್ಲಿ ಇವರಿಗಾಗಿ ಕಾಯುತ್ತಿದ್ದಳು.

---

1. ವಿಶ್ವಮೇಘ -ಯಶೋದಮ್ಮ ಸಿದ್‌ಬಟ್ಟೆ ಪು.ಸಂ. 37

ಹೇಳಲಾರೆನು ತಾಳಲಾರೆನು ಮನಸ್ಸಿನ ವೇದನೆ ಎನ್ನುವಂತೆ ಅಜ್ಜಿ ತನ್ನ ಕತೆ ಪ್ರಾರಂಭಿಸಿದಳು. ಹದಿಮೂರನೆ ವರ್ಷದಲ್ಲಿ ತನ್ನ ಮದುವೆ ಗಂಡನ ವಯಸ್ಸು ಆಗ ೨೫. ಗಂಡನ ಮೀಸೆ ನೋಡಿಯೇ ಹೆದರುವ ನಾನು ಹುಲಿಯಲ್ಲಿ ಕುರಿಯಾಗಿ ಬೆಳೆದಿದ್ದೇನೆಂಬ ಉಪಮೇಯ ಕಥೆಗಾರ್ತಿ ಬಳಸಿದ್ದಾರೆ. ವಿಧಿಯ ವಶಕ್ಕೆ ಸಿಲುಕಿ ಮಗ ಜನಿಸಿದ ೨ ವರ್ಷದಲ್ಲಿ ಚಳಿ ಜ್ವರ ಬಂದು ಸತ್ತು ಹೋದರು. ಮಗನನ್ನು ಚೆನ್ನಾಗಿ ಸಾಕಲು ಅಲ್ಲಿ ಅಲ್ಲಿ ಕೆಲಸ ಮಾಡಿದಳು. ಹದಿನೈದು ವರ್ಷದ ಹುಡುಗನಿಗೆ ಬೊಂಬಾಯಿ ಊರಿನವನ ಮಾತಿಗೆ ಮರುಳಾಗಿ ಕೆಲಸ ಸಿಗುತ್ತದೆ ಎಂಬ ಆಸೆ ಹೊತ್ತ ಹೋದವನು. ರೈಲು ಅಪಘಾತವಾಯಿತು ಅದರಲ್ಲಿ ಅವನು ಮಡಿದ ಸಮಾಚಾರ ಗಾಯದ ಮೇಲೆ ಬರೆ ಬಡೆದಂತಾಯಿತು. ಒಬ್ಬಳೆ ಇರುವುದಕ್ಕೆ ಮನಸಾಗದೆ ಪರಮಾತ್ಮ ಯಾವಾಗ ಸಾವು ಕೊಡುತ್ತಾನೆಂಬ ದಾರಿ ಕಾಯುತ್ತಿದ್ದೆನೆಂಬಲ್ಲಿ ಗೌರಮಾಜ್ಜಿಯ ನೋವಿದ ವ್ಯಥೆ ಕಂಡುಬರುತ್ತದೆ. ಆದರೆ ಗೌರಮಾಜ್ಜಿಯ ಮಗ ರೈಲ್ವೆ ಅಪಘಾತದಲ್ಲಿ ಸತ್ತಿರಲಿಲ್ಲ. ತನ್ನ ತಾಯಿ ಸುಖವಾಗಿರಲೆಂದು ಬಯಸಿ ಒಂದು ಸುಟಕೇಸ ತುಂಬ ಹಣ ತುಂಬಿಕೊಂಡು ಬಂದನು. ಅವನನ್ನು ಗುರುತಿಸಿದ ತಾಯಿ ಅವನ ಮುಖ ನೋಡಿ ನೀನು ಸತ್ತಿಲ್ಲ ಮಗ ಬದುಕಿದ್ದಿಯಾ ಎಂದು ಕಣ್ಣುಮುಚ್ಚಿದಳು.

ಆಸಕ್ತಿ ಕುತುಹಲ ಹುಟ್ಟಿಸುವಂತ ಸಣ್ಣ ಕತೆಯನ್ನು ಯಶೋದಮ್ಮ ಸಿದ್‌ಬಟ್ಟೆರವರು ಅಭಿವ್ಯಕ್ತಿಸಿದ್ದಾರೆ. ಸಂಬಂಧಗಳ ಹೆಣೆಯುವ ಸಾಮಾಜಿಕ ಬದುಕಿನ ಹಳ್ಳಿಯ ಚಿತ್ರಣದಿಂದ ಕೂಡಿರುವ ಈ ಕಥೆ ಓದುಗರ ಮನಸ್ಸನ್ನು ಹಿಡಿದಿಡುವಲ್ಲಿ ಯಶಸ್ವಿಯಾಗಿದೆ.

**೨. ದೇವ ಮಾನವ :**

ಯಶೋದಮ್ಮ ಸಿದ್‌ಟ್ಟೆಯವರ ಸಣ್ಣ ಕತೆಗಳಲ್ಲಿ ಒಂದಾಗಿರುವ `ದೇವ ಮಾನವ` ಕಥೆ ಕಲ್ಲು ಹೃದಯ ಕರಗಿಸುವ ಕರುಣಾಜನಕ ಕಥೆಯಾಗಿದೆ. ಜೊತೆಗೆ ನಿಸ್ವಾರ್ಥಿಯಾಗಿ ಕಷ್ಟದಲ್ಲಿರುವ ಬಡ ಹೆಣ್ಣು ಮಕ್ಕಳಿಗೆ ರಕ್ತ ಕೊಡುವ ವ್ಯಕ್ತಿಯ ಚಿತ್ರಣ ಕಥೆಯ ವಸ್ತುವಾಗಿದೆ.

ರಕ್ತದಾನ ಮಾಡಲು ಬಂದಿದ್ದೇನೆ ಯಾರಾದರೂ ಸೀರಿಯಸ್ ಪೇಷಂಟ ಇದ್ದರೆ ಒಂದು ಬಾಟಲ ರಕ್ತ ತೆಗೆದುಕೊಳ್ಳಿ ಎಂದು ಕೊಟ್ಟು ಹೋಗುತ್ತಿದ್ದು `ಓ` ಗ್ರೂಪಿನ ಯುವಕ ಅನೇಕ ರೋಗಿಗಳಿಗೆ ಪ್ರಾಣಾಪಾಯದಿಂದ ದೂರ ಮಾಡಿದನು. ಶಸ್ತ್ರ ಚಿಕಿತ್ಸೆ ಮಾಡಲು ಸಿದ್ಧವಾದಾಗ ನಿಶ್ಚಕ್ತಳಾದ ಹೆಣ್ಣು ಮಗಳಿಗೆ ರಕ್ತ ಕೊಡಲು ಗಂಡನು ಹಿಂದೆ ಸರಿದಾಗ ಅದೇ ಸಮಯಕ್ಕೆ ಸರಿಯಾಗಿ `ಅನಾಥ` ನಾಮಧೇಯ ಯುವಕ ರಕ್ತದಾನ ಮಾಡಲು ಬಂದನು. ``ನೀನೀಗ ಓರ್ವ ಹೆಣ್ಣು ಮಗಳ ಪಾಲಿಗೆ ದೇವರಾಗಿ ಬಂದಿರುವೆ ಬಾ`` ಎಂದಾಗ ಸಂತೋಷದಿಂದ ರಕ್ತ ನೀಡಿ ಅವರ ಅವರ ಜೀವ ಉಳಿಸಿದ. ಹುಡುಗಿಯೊಬ್ಬಳಿಗೆ ಸ್ಕೂಟರ ಅಪಘಾತದಲ್ಲಿ ತಲೆಯೊಡೆದು ರಕ್ತಸ್ರಾವ ಜಾಸ್ತಿಯಾಗಿ ಸಾವು ಬದುಕಿನೊಡನೆ ಸೆಣಸಾಟ ನಡೆಸಿದಾಗ ರಕ್ತ ನೀಡಿ ಪ್ರಾಣ ಉಳಿಸಿದನು.

ಮೊದಲ ಸಲ ರಕ್ತ ಕೊಡಲು ಬಂದಾಗ ವೈದ್ಯರಾದ ಡಾ. ಸುರೇಶ ಆಶ್ಚರ್ಯವಿಲ್ಲದೆ ಹಣಕ್ಕಾಗಿ ರಕ್ತ ಕೊಡುತ್ತಿದ್ದಾನೆಂದು ಕೊಂಡಿದ್ದರು. ಹಣ ಕೊಡಲು ಹೋದಾಗ ``ನಾನು ಹಣಕ್ಕಾಗಿ ರಕ್ತ ಕೊಟ್ಟಿಲ್ಲ ಬಡ ಹೆಣ್ಣು ಮಕ್ಕಳ ಪ್ರಾಣಕ್ಕೆ ಗಂಡಾಂತರ ಬಂದಾಗ ರಕ್ತ ತರಲು ಅವರಲ್ಲಿ ಹಣವಿರುವುದಿಲ್ಲ`` ಅಂತಹ ತಾಯಂದರಿಗೆ ನನ್ನ ರಕ್ತ ಕೊಟ್ಟು ಪ್ರಾಣ ಉಳಿಸಬೇಕೆಂದು ನನ್ನ ಆಸೆ ಎಂದು ನಡೆದನು. ಇಂತಹ ಹಲವು ಬಾರಿ ರಕ್ತ ನೀಡಿ ಮಹಿಳೆಯರ ಜೀವ ಉಳಿಸಿದನು. ಪ್ರಾಣಾಪಾಯದಿಂದ ಪಾರಾದವರೆಲ್ಲರು ರಕ್ತಕೊಟ್ಟ ಯುವಕನನ್ನು ತೋರಿಸಿ ಎಂದಾಗ ವೈದ್ಯರು ರಕ್ತ ನೀಡಿದ ಆ ಯುವ ಎಷ್ಟೋ ಬಾರಿ ಬಂದು ರಕ್ತಕೊಟ್ಟು ಹೋಗುತ್ತಾನೆ ತಾನಾರೆಂದು ಹೇಳುವುದೇ ಇಲ್ಲ ಎಂದು ಮಾತು ಮುಗಿಸುತ್ತಿದ್ದರು.

ಮತ್ತೊಂದು ದಿನ ರಕ್ತದಾನ ಮಾಡಿ ಸಶಕ್ತಳಾದ ಗರ್ಭಿಣಿಗೆ ಯುವಕ ರಕ್ತ ಕೊಟ್ಟು ಶಸ್ತ್ರ ಚಿಕಿತ್ಸೆ ಮಾಡಿ ಗಂಡಾಂತರದಿಂದ ಪಾರು ಮಾಡಿದ್ದಾಗ ವೈದ್ಯರಾದ ಡಾ. ಸುರೇಶರವರಿಗೆ ಆಶ್ಚರ್ಯ ಕುತುಹಲ ಮಾಡಿತ್ತು. ಪ್ರತಿ ಸಾರಿಯು ಒಬ್ಬೊಬ್ಬ ಜೀವ ಉಳಿಸುತ್ತಾನೆ ! ಫಲಾಪೇಕ್ಷೆಯನ್ನು ಮಾಡೋದಿಲ್ಲ ಅವನ ಹಿನ್ನಲೆ ತಿಳಿಯಬೇಕೆಂದು ವೈದ್ಯರು ಪುನಃ ನಾಳೆ ಬರಲು ಹೇಳಿರುವುದು ಯುವಕನಿಗೂ ಆಶ್ಚರ್ಯವನ್ನುಂಟು ಮಾಡಿತ್ತು. ಮತ್ತಾರಿಗಾದರು ರಕ್ತ ಬೇಕಾಗಿದೆಯೇ ಹೇಗೆ ? ಹಾಗೆ ಕೊಡಲು ಬರುವುದಿಲ್ಲ ? ಯಾಕೆ ಬರ ಹೇಳಿದರು ಎಂಬ ಪ್ರಶ್ನೆಗಳು ಇಡೀ ರಾತ್ರಿ ನಿದ್ರೆ ಕೆಡಿಸಿದವು. ಆಸ್ಪತ್ರೆಗೆ ಮರುದಿನ ಬಂದ ಯುವಕನಿಗೆ ಆತ್ಮೀಯವನ್ನಾಗಿ ಸ್ವಾಗತಿಸಿದ ವೈದ್ಯರಾದ ಡಾ. ಸುರೇಶರವರು ನಾನು ವೈದ್ಯನಾಗಿ ಎಷ್ಟೋ ಜೀವ ಉಳಿಸಿದ್ದೇನೆ. ನೀನು ರಕ್ತಕೊಟ್ಟು ಜೀವ ಉಳಿಸಿರುವೆ. ನನ್ನ ವೈದ್ಯಕೀಯ ಜೀವನದಲ್ಲಿ ನಿನ್ನಂತಹ ದಾನಿಯನ್ನು ನೋಡಿಲ್ಲ. ನಿನ್ನ ಒಂದು ಭಾವಚಿತ್ರ ಕೊಡಿ ಒಂದು ಸನ್ಮಾನ ಸಮಾರಂಭ ಮಾಡಬೇಕೆಂದಿದೆವೆಂದಾಗ ಯುವಕ ತನ್ನ ಪರಿಚಯ ಕೊಡುತ್ತಾನೆ.

ಇಪ್ಪತ್ತು ವರ್ಷಗಳ ಹಿಂದೆ ನನ್ನ ಕುಟುಂಬದಲ್ಲಿ ತಂದೆ ತಾಯಿ ತಂಗಿಯೊಂದಿಗೆ ಸಂತೋಷದಿಂದಿರುವಾಗ ದುಃಖದ ಘಟನೆ ಕೂಡಿ ಬಂತು. ಮಧ್ಯೆ ರಾತ್ರಿ ತನ್ನ ತಾಯಿಗೆ ಗರ್ಭ ಹೋಗಿ ರಕ್ತಸ್ರಾವವಾಯಿತು. ಇದನ್ನು ನೋಡಿದ ಚಂದ್ರಶೇಖರನಿಗೆ ತಲೆ ತಿರುಗಿತ್ತು. ತಾಯಿ ರಕ್ತದ ಮಡುವಿನಲ್ಲಿ ಬಿದ್ದು ಒದ್ದಾಡುತ್ತಿದ್ದಳು. ಆಸ್ಪತ್ರೆಗೆ ಸೇರಿಸಿದಾಗ ಮರುದಿವಸ ವೈದ್ಯರು ರಕ್ತ ಕೇಳಿದರು. ತಂದೆ ರಕ್ತ ತರಲು ಮಣಿಪಾಲಗೆ ಹೋಗಿದ್ದರು. ಹೋಗುವಾಗ ತಂದೆ ರೋಗಿಯಾಗಿರುವ ತನ್ನ ಹೆಂಡತಿಗೆ ``ನೀನೇನು ಹೆದರಬೇಡ ಬೇಗ ಹೋಗಿ ರಕ್ತ ತರುತ್ತೆನೆಂದು`` ಹೇಳಿದರು. ಇತ್ತ ತಾಯಿಯ ಸಂಕಟ, ನರಳಾಟ ಜಾಸ್ತಿಯಾಯಿತು. ವೈದ್ಯರು ``ನಾವು ಮಾಡುವ ಪ್ರಯತ್ನವೆಲ್ಲಾ ಮಾಡಿದ್ದೆವು. ಆದರೆ ಕೈಮೀರಿ ಹೋಯಿತು ಸಾರಿ`` ಎಂದು ಹೇಳಿ ಅಜ್ಜಿ ಬಾಯಿ ಬಾಯಿ ಬಡಿದುಕೊಂಡು ಅತ್ತರು. ಅದೇ ಸಮಯಕ್ಕೆ ಸರಿಯಾಗಿ ಕೆದರಿದ ತಲೆ ಕೆಂಪಾದ ಕಣ್ಣು ಪ್ರಯಾಣದ

ಆಯಾಸದಿಂದ ಅವಸರವಾಗಿ ತಂದೆ ಬಂದಾಗ ನಿನ್ನ ಹೆಂಡ್ತಿ ಹೋದಳಪ್ಪ ನೀನೇನೂ ಅಷ್ಟು ದೂರ ಹೋಗಿ ರಕ್ತ ತಂದೆ ಎಂದಾಗ ಗಟ್ಟಿಯಾಗಿ ಅತ್ತರು ಕೈಯಲ್ಲಿ ರಕ್ತ ಕೆಳಗೆ ಬಿದ್ದು ರಕ್ತ ಹರಿದಾಡಿತ್ತು. ತಂದೆ ಅಲ್ಲಿಯೇ ಕುಸಿದು ಬಿದ್ದು ಆ ರಕ್ತದಲ್ಲಿ ತೇಲಾಡಿದರು. ಚಂದ್ರು ಕೊನೆ ಬಾರಿ ನಿಮ್ಮಮ್ಮನನ್ನು ಕಣ್ತುಂಬಾ ನೋಡು ಇನ್ಮುಂದೆ ಅಮ್ಮ ಎಲ್ಲಿ ಎಂದು ಕೇಳಬೇಡಾ ಎಂದು ಅಮ್ಮನನ್ನು ತೋರಿಸಿದರು. ನನಗೆ ಯಾವಾಗಲು ಅಮ್ಮನ ನೆನಪಾಗುತ್ತಿತ್ತು. ತಬ್ಬಲಿಯಾದ ನಾನು ಹೀಗೆ ಬೆಳೆದೆವು ಎಂದು ಹೇಳಿದ.

ತನ್ನ ತಾಯಿಯ ಸಾವಿಗೆ ಕಾರಣವಾದ ಎರಡು ಬಾಟ್ಲಿ ರಕ್ತ ಸಿಕ್ಕಿದರೆ ತನ್ನ ತಾಯಿ ಖಂಡಿತ ಬದುಕುತ್ತಿದ್ದಳು. ಆದರೆ ಹಾಗಾಗಲಿಲ್ಲ. ನಾನು ತನ್ನ ತಂಗಿ ಮಾತೃ ವಾತ್ಸಲ್ಯದಿಂದ ವಂಚಿತರಾದೇವು ಇಂಥಹ ನೋವು ಯಾವ ಹೆಣ್ಣು ಮಕ್ಕಳಿಗೆ ಬರಬಾರದೆಂಬ ಕಾರಣದಿಂದ ತಾನು ರಕ್ತದಾನ ಮಾಡುತ್ತೇನೆ. ಜಗತ್ತಿನ ಮಕ್ಕಳಿಗೆ ತಾಯಿಯ ಪ್ರೀತಿ ಸಿಗಬೇಕು. ಅದುವೇ ನನ್ನ ಹಿರಿದಾಸೆ ಇದರಿಂದ ನನಗೆ ಹೆಸರು ಕೀರ್ತಿಯ ಅವಶ್ಯಕತೆ ಇಲ್ಲವೆಂದಾಗ ವೈದ್ಯರಿಗೆ ಇವನ ಬಗ್ಗೆ ಇನ್ನು ಹೆಚ್ಚಿನ ಹೆಮ್ಮೆ ಮೂಡಿತ್ತು. ಈ ವ್ಯಕ್ತಿ ಒಬ್ಬ ದೇವ ಮಾನವನೆ ಎಂದು ಉದ್ಗಾರವೆತ್ತುತ್ತಾರೆ.

ಹೀಗೆ ಕರುಣಾಜನಕ ಕಥೆ ಓದುಗರ ಮನಸ್ಸನ್ನು ಕನಿಕರದಿಂದ ಹಿಡಿದಿಡುವ ಕಥೆ ಓದುಗರ ಕಣ್ಣಲ್ಲಿ ನೀರು ಬರಿಸುವ ಕರುಣಾಜನಕ ಕಥೆ ಇದಾಗಿದೆ. [1]ಒಳ್ಳೆಯ ವಸ್ತುಗಳಲ್ಲಿ ಪ್ರೇಮ, ಕೆಟ್ಟ ವಿಷಯದಲ್ಲಿ ದ್ವೇಷ, ಅನ್ಯಾಯ ಕಂಡರೆ ರೋಷ, ತಾನು ಗಳಿಸಿದ್ದಲ್ಲಿ ಅಭಿಮಾನ, ಮಾಡಬೇಕಾದ ಮಹಾತ್ಕಾರ್ಯಗಳ ಚಿಂತೆ ಮೊದಲಾದ ಭಾವನೆಗಳು ನಮ್ಮಲಿರಬೇಕು.

**೩. ಮಿಂಚು-ಸಿಡಿಲು :**

ಯಶೋದಮ್ಮ ಸಿದ್‌ಬಟ್ಟೆಯವರ ಮತ್ತೊಂದು ಸಣ್ಣ ಕತೆಯಾದ ಮಿಂಚು-ಸಿಡಿಲು ಲಲಿತಾಳ ದುರಂತ ಕಥೆಯನ್ನು ಒಳಗೊಂಡಿದೆ. ಈ ಕಥೆಯು ಸುತ್ತಿ ಬಳಸಿ ಬರೆಯಲಾಗಿದ್ದು, ಪ್ರಾರಂಭದಲ್ಲಿ ಕಥೆಯು ಸಂತೋಷ ಸಮಧಾನಗಳನ್ನು ಕಾಯ್ದುಕೊಂಡು ಮುಂದುವರೆದಿದೆ. ಆದರೆ ಕೊನೆಯು ಒಂದರ್ಥದಲ್ಲಿ ವಿಶೇಷತೆಯಿಲ್ಲದ ರೀತಿಯಲ್ಲಿ ಮುಕ್ತಾಯವಾಗಿದೆ.

ಮಲೆನಾಡಿನ ಪರಂಪರೆಯಾದ ದೀಪಾವಳಿಯ ನೀರು ತುಂಬುವ ಹಬ್ಬದ ಆಚರಣೆಯ ಕುರಿತು ಪ್ರಾರಂಭವಾಗುತ್ತದೆ. ತಂದೆಯನ್ನು ಕಳೆದುಕೊಂಡ ಬಾಲಕ ದೀಪಾವಳಿ ಹಬ್ಬದ ದೀಪ ಹೊಸ ಬಟ್ಟೆ, ಪಟಾಕಿ ಇಲ್ಲದೆ ದುಃಖಿಸುತ್ತಾ ಎಂಟು ವರ್ಷದ ಹಿಂದೆ ತಂದೆ ತೀರಿಹೋದಾಗಿಯಿಂದ ಹಬ್ಬದ ಕುರಿತು ಉತ್ಸಾಹ ಇಲ್ಲದೆ ಕುಳಿತ್ತಿದ್ದಾರೆ. ಇನ್ನೊಂದೆಡೆಗೆ ತಂದೆ ಸತ್ತಾಗಿನಿಂದಲೂ ತಾಯಿ ಹಾಸಿಗೆ ಹಿಡಿದು ಸ್ವರ್ಗಕ್ಕೆ ಹೋಗುವ ದಿನಗಳನ್ನೇ ನೆನೆಸುತ್ತಾ ಮಲಗಿದ್ದಾಳೆ.

---

1. ನಾನು ಯಾರು -ಡಾ. ಶ್ರದ್ಧಾನಂದ ಸ್ವಾಮಿಗಳು ಪು.ಸಂ. 69

ಮಗಳಾದ ಲಲಿತಾ ಎಂಟು ವರ್ಷಗಳ ಹಿಂದೆ ಕಾಲೇಜು ಕಲಿಯುವಾಗ ಬೇರೆ ಜಾತಿಯ ಹುಡುಗನೊಂದಿಗೆ ಪ್ರೀತಿಸಿದಳು. ಅವನನ್ನೇ ಮದುವೆಯಾಗುವ ಪ್ರಸ್ತಾಪ ತಂದೆಗೆ ಹೇಳಿದಾಗ ತಂದೆ ನಿರ್ಧಾಕ್ಷಿಣ್ಯವಾಗಿ ತಿರಸ್ಕರಿಸಿದ್ದಾಗ ಲಲಿತಾ ತಾನು ಅವನನ್ನು ಮದುವೆಯಾಗುತ್ತೇನೆ ಬೇಡ ಎಂದರೆ ಆತ್ಮಹತ್ಯೆ ಮಾಡಿಕೊಳ್ಳುತೇನೆಂದು ಪ್ರಯತ್ನಿಸುತ್ತಿರುವಾಗ, ತಂದೆ ತಾಯಿ ಮದುವೆಗೆ ಒಪ್ಪಿ ಮದುವೆ ಮಾಡಿ ಗಂಡನ ಮನೆಗೆ ಕಳುಹಿಸುವಾಗ ಅಪ್ಪ ಇಂದಿನಿಂದ ನೀನು ನನ್ನ ಪಾಲಿಗೆ ಸತ್ತಂತೆ ಎಂದು ಕ್ರೂರವಾಗಿಯೇ ಹೇಳಿದರಿಂದ ತನ್ನ ತಂದೆ ತೀರಿ ಹೋದ ವಿಷಯ ತಿಳಿದು ಹನ್ನೆರಡು ವರ್ಷಗಳು ಕಳೆದ ನಂತರ ಈಗ ಈ ಮನೆಗೆ ಬಂದಿದ್ದಾಳೆ.

ಹನ್ನೆರಡು ವರ್ಷಗಳ ನಂತರ ಮನೆಗೆ ಬಂದ ಲಲಿತಾಳನ್ನು ಕಂಡು ಎಲ್ಲರು ಸಂತೋಷದಿಂದಿರುವುದು ಅವಳ ಆಗಮನದಿಂದ ಹಾಸಿಗೆ ಹಿಡಿದಿರುವ ತಾಯಿ, ಅಣ್ಣ, ತಮ್ಮ, ಅತ್ತಿಗೆ ಎಲ್ಲರಲ್ಲಿಯು ಸಂತೋಷ, ಸಂಭ್ರಮ ಗಳಿಗೆಯನ್ನು ಸೆರೆಹಿಡಿದು ಮನ ಸಂತೋಷಗೊಳ್ಳುವ ರೀತಿಯಲ್ಲಿ ಕಥೆ ಬರೆದಿದ್ದಾರೆ. ಮನೆಯಲ್ಲಿ ಒಡಾಗಿ ತಾನು ಸಂತೋಷ ಪಟ್ಟ ಲಲಿತಾ ನಾಲ್ಕಾರು ವರ್ಷಗಳಿಂದ ಹಾಸಿಗೆ ಹಿಡಿದಿರುವ ತನ್ನ ತಾಯಿಯನ್ನು ಕಾರಿನಲ್ಲಿ ಕೂರಿಸಿಕೊಂಡು ಚಿಕ್ಕಮಗಳೂರು ಪ್ರದಿಕ್ಷೇಣೆ ಹಾಕುವುದು ತಮ್ಮನಿಗೆ ಬಟ್ಟೆ ಪಟಾಕಿ ಕೊಡಿಸಿರುವುದು ಇಡೀ ಮನೆಯಲ್ಲಿ ಹಬ್ಬದ ವಾತಾವರಣ ಉಂಟುಮಾಡಿದೆ.

ನಾಗಪೂರದಲ್ಲಿದ್ದರು ಸಂಪ್ರದಾಯ ಮರೆಯದ ಲಲಿತಾ ತುಳಸಿ ಪೂಜೆ, ತುಳಸಿ ಮದುವೆ ತನ್ನ ತಾಯಿಯ ಆಜ್ಞೆಯಂತೆ ಮಾಡಿದ್ದಾಳೆ. ಲಲಿತಾಳ ಗಂಡನಿಂದ ಆದಷ್ಟು ಬೇಗ ಬರುವಂತೆ ಪತ್ರ ಬರೆದಿದ ನಾಗಪೂರಕ್ಕೆ ಹೋಗಲು ಸಿದ್ಧಳಾದ ಲಲಿತಾ ತಾನು ಅತ್ತು, ಮನೆಯವರೆಲ್ಲರ ಕಣ್ಣಲ್ಲಿ ನೀರೂರಿಸಿ ಹೊರಟು ಹೋದಳು.

ಸಂತೋಷ, ಸಂಭ್ರಮದಿಂದ ಕೂಡಿದ ಮನೆಯಲ್ಲಿ ಲಲಿತಾ ಹೋದನಂತರ ``ಕರೆಂಟ ಹೋದಂತೆ ಮನೆಯಲ್ಲಿ ಬಿಕೋ ಎನ್ನುತ್ತಿತ್ತು`` ಎಂದು ಅರ್ಥಪೂರ್ಣವಾಗಿ ಬಳಸಿದ್ದಾರೆ. ಲಲಿತಾ ತವರು ಮನೆಯ ಸೀರೆಯುಟ್ಟೆ ಹೋಗುವಳು. ಹೆಣವಾದ ಪ್ರಸಂಗ ಕಥೆ ಓದುಗರ ಹುಬ್ಬಿಸುತ್ತದೆ. ತನ್ನ ತಾಯಿಯ ಹೆಸರಿನಲ್ಲಿ ಪತ್ರ ಬರೆದು ನಿಮ್ಮೆಲ್ಲರ ಮಾತು ಮೀರಿ ಮದುವೆಯಾಗಿದೆ. ನನ್ನನ್ನು ಪ್ರೀತಿಯಿಂದ ವಂಚಿತ ಮಾಡಿದರೆ ಸಾಯುವೆ ಹೊರೆತು ತವರಿಗೆ ಬರಲಾರೆನೆಂದು ಶಪತ ಮಾಡಿದ್ದೆ. ಆದರೆ ಇಂದು ಸಾವು ನನ್ನ ಸುತ್ತ ಸುಳಿದಿದೆ ಎಂದು ಹೇಳಿ ತನ್ನ ಸಾವಿಗೆ ಕಾರಣ ನೀಡಿದ್ದಾಳೆ. ``ಒಂದು ಹೆಣ್ಣು ಏನಾದರೂ ಸಹಿಸಿಕೊಳ್ಳಬಹುದು ಆದರೆ ಗಂಡನ ಪ್ರೀತಿಯಲ್ಲಿ ಪಾಲು ಮಾತ್ರ ಸಹಿಸಳು`` ಎಂಬುದು ಅರ್ಥಪೂರ್ಣವಾದ ನುಡಿಯಾಗಿದೆ.

ಸೃಜನಶೀಲ ಬರಹಗಾರ್ತಿಯಾಗಿರುವ ಯಶೋದಮ್ಮ ಸಿದ್‌ಬಟ್ಟೆ ಕಥೆಯ ಹೆಸರು ಅರ್ಥಪೂರ್ಣವಾಗಿ ಇಟ್ಟಿದ್ದಾರೆ. ಲಲಿತಾಳ ತಾಯಿ ಮಗಳ ಸಾವಿನ ವಿಷಯ ತಿಳಿದು ಮೊನ್ನೆತಾನೆ

`ಮಿಂಚು` ಬಂದ ಹಾಗೆ ಬಂದು ಎಲ್ಲರನ್ನು ಸಂತೋಷಪಡಿಸಿ ಈಗ `ಸಿಡಿಲು` ಬಡಿದ ಹಾಗೆ ಸಾವಿನ ಸುದ್ದಿಕೊಟ್ಟಿದ್ದಾಳೆ ಎನ್ನು ಉಪಮೆಯವನ್ನು ಬಳಸಿ ಕಥೆಗೆ ಅರ್ಥಪೂರ್ಣ ಶೀರ್ಷಿಕೆಯನ್ನು ನೀಡಿದ್ದಾರೆ.

೪. ಆತಂಕಃ

ಈ ಕಥೆಯು ಕಾಲೇಜು ವಿದ್ಯಾರ್ಥಿನಿ ವಿದ್ಯಾರ್ಥಿಯರು ಪ್ರೇಯ, ಯೌವ್ವನದ ವಯಸ್ಸಿನ ಕಾಲೇಜಿನಲ್ಲಿ ಕಲಿಯುವ ಯುವಕರ ವರ್ತನೆಯ ಮೇಲೆ ಪ್ರತಿಬಿಂಬವಾಗಿದೆ. ಹೆಣ್ಣು ಹೆತ್ತವರು ಮನೆಗೆ ಬಾರದ ಮಗಳ ಬಗ್ಗೆ ಹೇಗೆ ಆತಂಕ ಪಡುವರು. ಅವರ ಯೋಚನೆಗಳು ಯಾವ ರೀತಿಯಾಗಿ ಬದಲಾಗುತ್ತಾ ಹೋಗುತ್ತವೆ. ಇಂದಿನ ಯುವಜನಾಂಗ ಯಾವ ದಾರಿಯೆಡೆಗೆ ಸಾಗುತ್ತಿದೆ. ವಿಧಿ ಹೇಗೆ ಇನ್ನೊಬ್ಬರೊಂದಿಗೆ ಆಟವಾಡಿಸುತೆಂಬ ಅಂಶಗಳೆಲ್ಲ ಈ ಕಥೆಯಲ್ಲಿ ಬಂದಿವೆ.

ಕಾಲೇಜಿಗೆ ಹೋಗಿರುವ ವಿಸ್ಮಿತಾ ಸಮಯ ಮೀರಿದರು ಮನೆಗೆ ಬಾರದೆ ಇದ್ದಾಗ ಮೂಕ ವಿಸ್ಮಿತಳಾದ ತಾಯಿ ಶಾಂತಮ್ಮಳ ಕಳವಳ, ಅವಳ ಅಭಿವ್ಯಕ್ತಿಯನ್ನು ವರ್ಣನಾತ್ಮಕದಿಂದ ಮೂಡಿದೆ. ಮನೆಯ ಒಳಗೆ ಹೊರಗೆ ಓಡಾಡುವುದರ ಜೊತೆಗೆ ಗಡಿಯಾರ, ಒಮ್ಮೆ ಗೇಟನ್ನು ಒಮ್ಮೆ ಹಾಗೆಯೇ ಗೊಡೆಯ ಕಡೆಗೆ ಗಂಭೀರವಾಗಿ ತಿರುಗಾಡುತ್ತಾಳೆ.

`ಒಂದು ಹೆಣ್ಣಿನ ಸಮಸ್ಯೆ ಇನ್ನೊಂದು ಹೆಣ್ಣು ಸಹಜವಾಗಿ ಗುರುತಿಸಬಲ್ಲದು` ನಾಲ್ಕು ದಿನಗಳ ಹಿಂದೆ ನಡೆದ ಘಟನೆಯಿಂದ ಮಗಳು ಖಿನ್ನಳಾಗಿರುವುದು ಇಂಜಿನಿಯರಿಂಗ ವಿದ್ಯಾರ್ಥಿಯು ಪ್ರೀತಿಯ ಪತ್ರ ಕೊಟ್ಟಿರುವ ವಿಷಯ ತಾಯಿ ಮಗಳ ಮುಗ್ಧ ಮುಖದ ಗಂಭೀರತೆಯಿಂದ ಗೊತ್ತು ಮಾಡಿಕೊಂಡಿದಳು. ಸಮಾಜದಲ್ಲಿ ನಡೆಯುತ್ತೀರುವ ಕೊಲೆ, ಸುಲಿಗೆ ದೌರ್ಜನ್ಯ ಶೋಷಣೆ, ಮಾನಭಂಗ ಹೀಗೆ ಹಲವಾರು ಯೋಚನೆ ಶಾಂತಮ್ಮಳಿಗೆ ಆತಂಕ ಹುಟ್ಟಿಸಿದೆ. ಇನ್ನೊಂದೆಡೆಗೆ ವಿಸ್ಮಿತಳ ತಮ್ಮ ವಿಶ್ವ ತಂದೆ ಶಂಕರಪ್ಪಾ ಮಹತ್ಮಾ ಗಾಂಧಿ ಹೇಳುವಂತೆ ಒಂದು ಹೆಣ್ಣು ರಾತ್ರಿ ಹನ್ನೆರಡು ಗಂಟೆಗೆ ತಾನೊಬ್ಬಳೆ ನಡು ಬೀದಿಯಲ್ಲಿ ತಿರುಗಾಡಿದರೆ ನಮ್ಮ ದೇಶಕ್ಕೆ ಸಂಪೂರ್ಣ ಸ್ವಾತಂತ್ರ್ಯ ಬಂದಿದೆ. ಎಂದು ಭಾವಿಸುತ್ತೇನೆಂಬಂತೆ ವಿಶ್ವಾಳ ತಂದೆ ವಿಶ್ವ ಮೊದಲಾದವರ ಅಭಿಪ್ರಾಯ ಇಲ್ಲಿ ಹೊರತಾಗಿಲ್ಲ.

ಮಗಳು ತಾಯಿಗೆ ಈ ಹಿಂದೆ ಹೇಳಿದ ವಿಷಯ ತಂದೆಗೆ ಹೇಳಬೇಡವೆಂದದರಿಂದ ಶಾಂತಮ್ಮ ಇನ್ನೂ ಹೆಚ್ಚಿನ ಮೂಕವೇದನೆ ಅನುಭವಿಸಬೇಕಾಗಿದೆ. ರಾತ್ರಿ ಊಟದ ಸಿದ್ದತೆ ಮುಗಿದರು ಮಗಳು ಮನೆಗೆ ಬಂದೆ ಇದ್ದಾಗ ಗಂಡನಿಗೆ ವಿಷಯ ಮರೆಮಾಚದೆ ನಾಲ್ಕು ದಿನಗಳ ಹಿಂದೆ ನಡೆದುದನ್ನು ಹೇಳುತ್ತಾಳೆ. ತಂದೆ ಜವಾಬ್ದಾರಿ ವಹಿಸಲು ಮುಂದಾಗಿ ಮಗಳು ಬರುವ ಕಡೆ ನಡೆಯುತ್ತಾಳೆ.

ಹೆಣ್ಣಿನ ಶೀಲದ ಮೇಲೆ ಆಗುತ್ತಿರುವ ಅತ್ಯಾಚಾರಕ್ಕೆ ಸಾಕ್ಷಿ ಎನ್ನುವಂತೆ ತಾಯಿಯಾದ ಶಾಂತಮ್ಮ ಕೆಲವು ಉದಾಹರಣೆ ಕೊಡುವಾಗ ತಂದೆಯು ಖಿನ್ನವಾಗಿ ಬಿಡುತ್ತಾನೆ. ಲಘು ಭೂಕಂಪಿಸಿದಂತೆ ಕುಪಿಸುತ್ತಾರೆ. ನಿಧಾನವಾಗಿ ಸಾಗರ ತನಗೆ ಪ್ರೇಮ ಪತ್ರ ಕೊಟ್ಟಿರುವುದು ತನ್ನ ಹಿಂದೆ ಸುತ್ತಿದ್ದು ಹೇಳಿದಳು. ನಂತರ ತಾನು ಸೀಗುವುದಿಲ್ಲವೆಂದು ಗೊತ್ತಾದರು ಬಿಡದೆ ಏಕಾಂತದಲ್ಲಿ ನನ್ನೊಂದಿಗೆ ಮಾತನಾಡಬಯಸಿದನು. ಅವನ ದುರಾದೃಷ್ಟ ಲಾರಿಯೊಂದು ಅವನಿಗೆ ಹೊಡೆದಿತ್ತು. ರಕ್ತಮಯವಾದ ಶರೀರವನ್ನು ಆಸ್ಪತ್ರೆಗೆ ತಂದಾಗ ವಿಶ್ಮಿತಾಳೊಂದಿಗೆ ಮಾತನಾಡಬಯಸಿದಾಗ ವೈದ್ಯರು ಇವಳನ್ನು ಕರೆದಾಗ ಇವಳ ತೊಡೆಯ ಮೇಲೆ ಮಲಗಿರಡು ಪ್ರೀತಿಯ ಮಾತನಾಡಿದರು. ನಂತರ ಆಸ್ಪತ್ರೆಯಲ್ಲಿಯೆ ತೀರಿಕೊಂಡಿದು ಹೀಗಾಗಿ ವಿಶ್ಮಿತಾ ಕಾಲೇಜನಿಂದ ಮನೆಗೆ ತಡವಾಗಿ ಬಂದಿದಳು. ಈ ಕಥೆ ಕೇಳಿ ತಂದೆ ತಾಯಿಗೆ ಆಶ್ಚರ್ಯದ ಜೊತೆಗೆ ತನ್ನ ಮಗಳು ಸುರಕ್ಷಿತ ಬಂದಿರುವುದು ಸಮಧಾನ ಕೂಡಾ ಆಯಿತು.

೫. ಆಕಸ್ಮಿಕ :

ಆಧುನಿಕ ಸಮಾಜದ ಕಂಠಕವಾಗಿರುವ ವರದಕ್ಷಿಣೆಯ ವಿರುದ್ಧ ಪ್ರತಿ ಧ್ವನಿಯನ್ನೇ ವಸ್ತು ವಸ್ತುವಾಗಿರಿಸಿಕೊಂಡು ರಚಿಸಿರುವ ಈ ವ್ಯವಸ್ಥೆಯ ವಿರುದ್ಧ ತಿರುಗಿದ್ದ ವಿದ್ಯಾವಂತ ಮಹಿಳೆಯ ಧೈರ್ಯ, ಸಾಹಸದ ಪ್ರತಿಬಿಂದ ಆಕಸ್ಮಿಕ ಕಥೆಯಾಗಿದೆ.

ಪರಶಿವ ಮೂರ್ತಿ, ಸುನಂದಮ್ಮರ ಪ್ರೀತಿಯ ಮಗಳಾದ ಡಾ. ಶೀಲ ಗುಲಬರ್ಗಾದಲ್ಲಿ ಎಂ.ಬಿ.ಬಿ.ಎಸ್. ಮುಗಿಸಿರುವವಳು ಇಂಜನಿಯರಿಂಗ್ ಕೋರ್ಸ್ ಮುಗಿಸಿರುವ ಶಿವಶಂಕರನೊಂದಿಗೆ ನಿಶ್ಚಿತಾರ್ಥ ಮುಗಿದಿದ್ದು ಲಗ್ನ ಪತ್ರಿಕೆಯು ತಯಾರಾಗಿದೆ. ಖಾಸಗಿ ಕಾಲೇಜು ಶಿಕ್ಷಕರಾದ ಪರಶೀವ ಮೂರ್ತಿ ಕಷ್ಟ ಪಟ್ಟು ಮಗಳಿಗೆ ಬರೆಸಿದ್ದುದ್ದ ಸಾಧನೆ ವರದಕ್ಷಿಣೆ ನೀಡಿ ಎಲ್ಲಾ ಖರ್ಚು ವೆಚ್ಚ ನೋಡಿಕೊಳ್ಳುವ ಜವಾಬ್ದಾರಿ ಹೊತ್ತುಕೊಂಡು ಮದುವೆ ಮಾಡಿಕೊಡಬೇಕೆಂಬ ಪೂರ್ವ ನಿರ್ಧಾರವಾಗಿದೆ.

ಬಡತನದ ಕುಟುಂಬದಲ್ಲಿ ಜನಿಸಿ ತಾಯಿಯ ವಿರೋಧದ ನಡುವೆ ತಂದೆಯು ಕಾಳಜಿ ವಹಿಸಿದರಿಂದ, ಜೊತೆಗೆ ಆಸಕ್ತಿ, ಕುತುಹಲವಿರುವುದರಿಂದ ಶೀಲಾಳಿಗೆ ಗುಲಬರ್ಗಾ ಮೇಡಿಕಲ್ ಕಾಲೇಜಿನಲ್ಲಿ ಪ್ರವೇಶ ಪಡೆದಿದ್ದಾಳೆ. ವೈದ್ಯಳಾಗುವುದಕ್ಕೆ ಅನೇಕರು ಬೇರೆ ಕಾರಣಗಳಿಂದ ಸೇರಿಕೊಂಡರೆ ಶೀಲಾ ತನ್ನ ಚಿಕ್ಕಮ್ಮ ಹೆರಿಗೆಯ ಸಮಯದಲ್ಲಿ ನರ್ಸಗಳ ನಿರುತ್ಸಾಹದಿಂದ ತಾಯಿ, ಮಗುವಿನ ದುರಮರಣದಿಂದ ನೊಂದು ಸೇವೆ ಮಾಡಬೇಕು ಜನರಿಂದ ಮೆಚ್ಚುಗೆ ಪಡೆಯಬೇಕೆಂಬ ಹಂಬಲ ಡಾ. ಶೀಲಾಳಲ್ಲಿದೆ. ಹಣಗಳಿಸಬೇಕೆಂಬ ಹುಚ್ಚು ಹಂಬಲ ಮಾತ್ರ ಇವಳಲಿಲ್ಲ. ಎಂಬ ಅಂಶ ಈಗಿನ ಕಾಲದ ವೈದ್ಯರಿಗೆ ಪಾಠ ಕಲಿಸುವಂತಹ ಮನೋಭಾವದಾಗಿದೆ.

ಹೆಣ್ಣಿನ ಶೀಲದ ಮೇಲೆ ಆಗುತ್ತಿರುವ ಅತ್ಯಾಚಾರಕ್ಕೆ ಸಾಕ್ಷಿ ಎನ್ನುವಂತೆ ತಾಯಿಯಾದ ಶಾಂತಮ್ಮ ಕೆಲವು ಉದಾಹರಣೆ ಕೊಡುವಾಗ ತಂದೆಯು ಖಿನ್ನವಾಗಿ ಬಿಡುತ್ತಾನೆ. ಲಘು ಭೂಕಂಪಿಸಿದಂತೆ ಕುಪಿಸುತ್ತಾರೆ. ನಿಧಾನವಾಗಿ ಸಾಗರ ತನಗೆ ಪ್ರೇಮ ಪತ್ರ ಕೊಟ್ಟಿರುವುದು ತನ್ನ ಹಿಂದೆ ಸುತ್ತಿದ್ದು ಹೇಳಿದಳು. ನಂತರ ತಾನು ಸೀಗುವುದಿಲ್ಲವೆಂದು ಗೊತ್ತಾದರು ಬಿಡದೆ ಏಕಾಂತದಲ್ಲಿ ನನ್ನೊಂದಿಗೆ ಮಾತನಾಡಬಯಸಿದನು. ಅವನ ದುರಾದೃಷ್ಟ ಲಾರಿಯೊಂದು ಅವನಿಗೆ ಹೊಡೆದಿತ್ತು. ರಕ್ತಮಯವಾದ ಶರೀರವನ್ನು ಆಸ್ಪತ್ರೆಗೆ ತಂದಾಗ ವಿಶ್ಮಿತಾಳೊಂದಿಗೆ ಮಾತನಾಡಬಯಸಿದಾಗ ವೈದ್ಯರು ಇವಳನ್ನು ಕರೆದಾಗ ಇವಳ ತೊಡೆಯ ಮೇಲೆ ಮಲಗಿರಡು ಪ್ರೀತಿಯ ಮಾತನಾಡಿದರು. ನಂತರ ಆಸ್ಪತ್ರೆಯಲ್ಲಿಯೆ ತೀರಿಕೊಂಡಿದು ಹೀಗಾಗಿ ವಿಶ್ಮಿತಾ ಕಾಲೇಜಿನಿಂದ ಮನೆಗೆ ತಡವಾಗಿ ಬಂದಿದಳು. ಈ ಕಥೆ ಕೇಳಿ ತಂದೆ ತಾಯಿಗೆ ಆಶ್ಚರ್ಯದ ಜೊತೆಗೆ ತನ್ನ ಮಗಳು ಸುರಕ್ಷಿತ ಬಂದಿರುವುದು ಸಮಧಾನ ಕೂಡಾ ಆಯಿತು.

೫. ಆಕಸ್ಮಿಕ :

ಆಧುನಿಕ ಸಮಾಜದ ಕಂಠಕವಾಗಿರುವ ವರದಕ್ಷಿಣೆಯ ವಿರುದ್ಧ ಪ್ರತಿ ಧ್ವನಿಯನ್ನೇ ವಸ್ತು ವಸ್ತುವಾಗಿರಿಸಿಕೊಂಡು ರಚಿಸಿರುವ ಈ ವ್ಯವಸ್ಥೆಯ ವಿರುದ್ಧ ತಿರುಗಿದ್ದ ವಿದ್ಯಾವಂತ ಮಹಿಳೆಯ ಧೈರ್ಯ, ಸಾಹಸದ ಪ್ರತಿಬಿಂದ ಆಕಸ್ಮಿಕ ಕಥೆಯಾಗಿದೆ.

ಪರಶಿವ ಮೂರ್ತಿ, ಸುನಂದಮ್ಮರ ಪ್ರೀತಿಯ ಮಗಳಾದ ಡಾ. ಶೀಲ ಗುಲಬರ್ಗಾದಲ್ಲಿ ಎಂ.ಬಿ.ಬಿ.ಎಸ್. ಮುಗಿಸಿರುವವಳು ಇಂಜನಿಯರಿಂಗ್ ಕೋರ್ಸ್ ಮುಗಿಸಿರುವ ಶಿವಶಂಕರನೊಂದಿಗೆ ನಿಶ್ಚಿತಾರ್ಥ ಮುಗಿದಿದ್ದು ಲಗ್ನ ಪತ್ರಿಕೆಯು ತಯಾರಾಗಿದೆ. ಖಾಸಗಿ ಕಾಲೇಜು ಶಿಕ್ಷಕರಾದ ಪರಶೀವ ಮೂರ್ತಿ ಕಷ್ಟ ಪಟ್ಟು ಮಗಳಿಗೆ ಬರೆಸಿದ್ದುದ್ದ ಸಾಧನೆ ವರದಕ್ಷಿಣೆ ನೀಡಿ ಎಲ್ಲಾ ಖರ್ಚು ವೆಚ್ಚ ನೋಡಿಕೊಳ್ಳುವ ಜವಾಬ್ದಾರಿ ಹೊತ್ತುಕೊಂಡು ಮದುವೆ ಮಾಡಿಕೊಡಬೇಕೆಂಬ ಪೂರ್ವ ನಿರ್ಧಾರವಾಗಿದೆ.

ಬಡತನದ ಕುಟುಂಬದಲ್ಲಿ ಜನಿಸಿ ತಾಯಿಯ ವಿರೋಧದ ನಡುವೆ ತಂದೆಯು ಕಾಳಜಿ ವಹಿಸಿದರಿಂದ, ಜೊತೆಗೆ ಆಸಕ್ತಿ, ಕುತುಹಲವಿರುವುದರಿಂದ ಶೀಲಾಳಿಗೆ ಗುಲಬರ್ಗಾ ಮೇಡಿಕಲ್ ಕಾಲೇಜಿನಲ್ಲಿ ಪ್ರವೇಶ ಪಡೆದಿದ್ದಾಳೆ. ವೈದ್ಯಳಾಗುವುದಕ್ಕೆ ಅನೇಕರು ಬೇರೆ ಕಾರಣಗಳಿಂದ ಸೇರಿಕೊಂಡರೆ ಶೀಲಾ ತನ್ನ ಚಿಕ್ಕಮ್ಮ ಹೆರಿಗೆಯ ಸಮಯದಲ್ಲಿ ನರ್ಸಗಳ ನಿರುತ್ಸಾಹದಿಂದ ತಾಯಿ, ಮಗುವಿನ ದುರಮರಣದಿಂದ ನೊಂದು ಸೇವೆ ಮಾಡಬೇಕು ಜನರಿಂದ ಮೆಚ್ಚುಗೆ ಪಡೆಯಬೇಕೆಂಬ ಹಂಬಲ ಡಾ. ಶೀಲಾಳಲ್ಲಿದೆ. ಹಣಗಳಿಸಬೇಕೆಂಬ ಹುಚ್ಚು ಹಂಬಲ ಮಾತ್ರ ಇವಳಲಿಲ್ಲ. ಎಂಬ ಅಂಶ ಈಗಿನ ಕಾಲದ ವೈದ್ಯರಿಗೆ ಪಾಠ ಕಲಿಸುವಂತಹ ಮನೋಭಾವದಾಗಿದೆ.

ಬಿ.ಇ. ಮಾಡಿ ಇಂಜನಿಯರ್ ಆಗಿರುವ ಶಿವಶಂಕರ ತಂದೆಯ ದೃಷ್ಟಿಯಲ್ಲಿ ಸಮಗುಣ ಸಂಪನ್ನ ಆದರೆ ಎಲ್ಲಾ ಚಟಗಳು ಇವನಿಗೆ ಆವರಿಸಿಕೊಂಡಿದವು. ಶ್ರೀಮಂತರ ಮಗಳನ್ನೇ ಮದುವೆಯಾಗುವ ಹೆಬ್ಬಯಕೆ ಇವನಿಗಿತ್ತು. ಸೌಂದರ್ಯದ ಖಣಿಯಾಗಿರುವ ಡಾ. ಶೀಲಾಳನ್ನು ಮದುವೆಯಾದರೆ ಮುಂದೆ ಹಣ ಹರಿದು ಬರುತ್ತದೆ ಎಂಬ ಕನಸು ಕಂಡು ಮದುವೆಗೆ ಒಪ್ಪಿಕೊಂಡಿದನು.

ದೀಪಾಲಂಕಾರಗಳಿಂದ ಕಂಗೊಳಿಸುತ್ತಿದ್ದ ಪರಶಿವ ಮೂರ್ತಿಯವರ ಮನೆಗೆ ಮೊದಲೆರಡು ದಿನಗಳಿಂದ ಮನೆಯಲ್ಲಿ ನೆಂಟರಿಷ್ಟರೆಲ್ಲ ಮದುವೆಗೆ ಬಂದಾಗಿದೆ. ಮದುವೆಯ ದಿನ ನಿಲ್ಲಲು ಸಮಯವಿಲ್ಲದ ರೀತಿಯಲ್ಲಿ ಜನ ಸೇರಿದ್ದಾರೆ. ಇನ್ನೇನು ತಾಳಿ ಕಟ್ಟುವ ಸಮಯ ಶಿವಮೂರ್ತಿಯವರ ಮುಂದೆ ವರದಕ್ಷಿಣೆ ಕೊಡಂಬೇಕಾದುದು ಮುಟ್ಟಿದೆ ವರನಿಗೆ ಒಂದು ಸ್ಕೂಟರ ಕೊಡಬೇಕಾದದ್ದು ಪಟ್ಟು ಹಿಡಿದರು. ಶಿವಮೂರ್ತಿಯು ಸಹ ಸ್ಕೂಟರ ಇಲ್ಲದಿದ್ದರೆ ಮದುವೆ ಕಾರ್ಯ ನಡೆಯುವುದಿಲ್ಲವೆಂದು ಖಡಾಖಂಡಿತವಾಗಿ ಹೇಳಿ ಬಿಟ್ಟಾಗ ಪರಶಿವಮೂರ್ತಿ ದೀಪಾವಳಿ ಹಬ್ಬಕ್ಕೆ ಕೊಡಿಸುವುದಾಗಿ ಮನ ಒಲಿಸುವ ಎಲ್ಲಾ ಪ್ರಯತ್ನ ಮಾಡಿ ಸೋತು ಹೋದರು.

ಬೇಲೂರಿನ ಶಿಲಾ ಬಾಲಿಕೆಯಂತೆ ಕಾಣಿಸುತ್ತಿದ್ದ ಡಾ. ಶೀಲಾಳಿಗೆ ವಿಷಯ ಅರ್ಥವಾಗಿದೆ. ತಮ್ಮ ತಂದೆ ಶಕ್ತಿ ಮೀರಿ ನನಗೆ ಓದಿಸಿದ್ದಾರೆ ಇರುವ ಎರಡು ಸೈಟಗಳಲ್ಲಿ ಒಂದನ್ನು ಮಾರಾಟ ಮಾಡಿಯೇ ಮದುವೆಯ ಕಾರ್ಯ ಮಾಡುತ್ತಿದ್ದಾರೆ. ಶಿವಶಂಕರನ ಬಗೆಗಿದ್ದ ಎಲ್ಲಾ ಪ್ರೀತಿ, ಗೌರವ ದೂರವಾಗಿ ತಿರಸ್ಕಾರದ ಭಾವನೆಯಿಂದ ಈ ಶಿವಶಂಕರರ ಹಾಗೂ ಅವರ ಬಳಗದವರು ಮನುಷ್ಯ ಜಾತಿಗೆ ಸೇರಿದವರಲ್ಲ. ನಮ್ಮನ್ನು ಮನುಷ್ಯ ಜಾತಿ ಆದ್ದರಿಂದ ಮದುವೆಗಿದ್ದ ನನ್ನ ಒಪ್ಪಿಗೆ ಹಿಂಪಡೆಯುತ್ತೇನೆ. ಬಡವರ ಬಾಳನ್ನು ಹಾಳು ಮಾಡುವ ರಾಕ್ಷಸರು ಇಂತಹ ಮಹನೀಯರು ಎಂಥಹ ನೀಚ ಕೆಲಸವು ಮಾಡಬಲ್ಲರು ಇಂಥವರ ನೆರಳು ನನಗೆ ಬೇಡವೆಂದು ಹೇಳಿಬಿಟ್ಟಳು.

ಆ ಮದುವೆಯ ಮಂಟದಲ್ಲಿಯೇ ಧೈರ್ಯವಾಗಿ ಎದ್ದು ನಿಂತು ಬಂದಿರುವ ನೂರಾರು ತರುಣರಲ್ಲಿ ಕೈ ಮುಗಿದು ಕೇಳುವೆ ನನ್ನ ವಿದ್ಯೆಗೆ ತಕ್ಕ ಹಾಗೆ ಸಾಮಾನ್ಯವಾದ ಸಹೃದಯಿ ಯಾವ ಜಾತಿಯವರಾಗಿದ್ದರು ಸರಿ ವರದಕ್ಷಿಣೆ ಇಲ್ಲದೆ ಕೇವಲ ನನ್ನನ್ನು ಮಾತ್ರ ಮದುವೆ ಯಾಗಬಯಸುವ ಗಂಡು ಇದ್ದರೆ ಮಾಲೆ ಹಿಡಿದು ನಿಂತಳು. ಕುತಹಲದಿಂದ ನೋಡುತ್ತಿದ್ದ ಜನರ ಮಧ್ಯೆ ಓರ್ವ ತರುಣ ನೋಡಲು, ಸುಂದರನಾಗಿದ್ದನು ತಾನು ಗಂಡೆಂದು ಕಂಡು ಅವನುಟ್ಟ ಬಟ್ಟೆಗಳು ಅವನೊಬ್ಬ ಸುಶಿಕ್ಷಿತ ಎಂಬುದು ತೋರಿಸಿಕೊಟ್ಟಿದ್ದವು. ತಾನು ಹೊಲೆಯ ಜಾತಿಯವನು ಕಾಲೇಜೊಂದರಲ್ಲಿ ಪ್ರಾಧ್ಯಾಪಕನಾಗಿ ಕೆಲಸ ಮಾಡುತ್ತಿದ್ದೇನೆ. ತಾವಾಡಿದ ಮಾತಿನಿಂದ ಪ್ರಭಾವಿತನಾಗಿದ್ದೇನೆ. ನಿಮ್ಮ ತಲೆಯ ಮೇಲಿರುವ ಬಸವಣ್ಣ ನನ್ನ ಹೃದಯದಲ್ಲಿ ಮನೆ ಮಾಡಿರುವ ಅಂಬೇಡ್ಕರ ಮೇಲಾಣೆ ಈ ಮದುವೆ ಕಾರ್ಯ ನಡೆಯಲ್ಲಿ ನಮ್ಮಂಥವರಿಗೆ ತಮ್ಮಂಥಹವರ ಆಶ್ರಯ ಬೇಕು. ಹೀಗಾದಾಗ ಈ

ದೇಶದಿಂದ ಜಾತಿಯ ಭೂತ ತೊಲಗುತ್ತದೆ. ಗಾಂಧಿ ಕಂಡ ಕನಸಿನ ಭಾರತಕ್ಕೆ ನಾವಿಂದು ನಾಂದಿ ಹಾಡೋಣ ಎಂದಾಗ ಶೀಲಾ ಅವನಿಗೆ ಹಾರ ಹಾಕಿ ಮದುವೆಯಾದಳು.

ಶಿವಶಂಕರನ ಗೆಳೆಯನಾಗಿ ಮದುವೆಗೆ ಬಂದಿದ ಚಂದ್ರಶೇಖರ ಉಡುಗೊರೆ ಕೊಡಲು ಬುದ್ಧ ಬಸವ ಮತ್ತು ಅಂಬೇಡ್ಕರ ಎಂಬ ಪುಸ್ತಕವೇ ತಂದಿದ್ದರು. ಈ ಕತೆಯಲ್ಲಿ ಬದಲಾವಣೆಯ ಗಾಳಿ ಬೀಸಿದೆ ವ್ಯವಸ್ಥೆಯ ವಿರುದ್ಧ ಧ್ವನಿ ಕೇಳಿಬಂದಿದೆ. ನನಗೆ ಸಂಪ್ರದಾಯ ಬೇಕಾಗಿಲ್ಲ. ಅದರಲ್ಲಿ ನನಗೆ ವಿಶ್ವಾಸವಿಲ್ಲ. ಸಂಪ್ರದಾಯಕಿರುವ ಸತ್ಯ ಶ್ರೇಷ್ಠವೆಂಬ ಅಣ್ಣನ ವಾಣಿಯಂತೆ ಡಾ. ಶೀಲಳ ಒಪ್ಪಿಗೆಯೊಂದಿಗೆ ನೆರೆದಿರುವವರೆದುರಿಗೆ ನಾನು ಅವಳನ್ನು ಧರ್ಮ ಪತ್ನಿಯಾಗಿ ಸ್ವೀಕರಿಸುತ್ತೇನೆ. ತಮ್ಮೆಲ್ಲರ ಆಶೀರ್ವಾದವಿರಲೆಂದು ಕೇಳಿಕೊಂಡನು. ವರದಕ್ಷಿಣೆ ರಹಿತ ಅಂತರಜಾತಿ ವಿವಾಹದ ಮೇಲೆ ಬೆಳಕು ಚೆಲ್ಲುವ ಕಥೆ ಇದಾಗಿದೆ.

**೬. ಬೇಡವಾದ ಶವ :**

ಈ ಕಥೆಯು ದುರಂತ ನಾಯಕಿಯಾದ ಸುಂದರಿಯ ಜೀವನ ವೃತ್ತಾಂತವನ್ನು ಹೇಳುತ್ತದೆ. ಸೌಂದರ್ಯದ ಗಣಿಯಾಗಿದ್ದ ಸುಂದರಿ ಸಾಮಾನ್ಯ ಸ್ತ್ರೀಗಿಂತ ಹೆಚ್ಚು ಎತ್ತರ, ಎತ್ತರಕ್ಕೆ ತಕ್ಕಂತೆ ದಪ್ಪ, ನಿಂಬೆ ಹಣ್ಣಿನ ಬಣ್ಣ, ಗುಂಡಾದ ದಪ್ಪ ಮುಖ, ಗುಂಗುರು ಕುದಲುಗಳ ಕೇಶರಾಣಿ, ಎಲ್ಲರನ್ನು ಸೆಳೆಯಬಲ್ಲ ಕಣ್ಣುಗಳು, ಹಾಸ್ಟೇಲಿನಲ್ಲಿ ಎಲ್ಲರೊಂದಿಗೆ ಸ್ನೇಹದಿಂದ ವರ್ತಿಸುತ್ತಿದ್ದ ಸುಂದರಿ ಹೆಣ್ಣು ಮಕ್ಕಳ ದೃಷ್ಠಿಯಲ್ಲಿಯೇ ಬಣ್ಣದ ಬಟ್ಟೆಯಂತಿದವಳು ಇನ್ನು ಗಂಡಸರ ಗತಿ ಹೇಳಲಾಗದಂತಹ ಆ ಚೆಲುವೆಗೆ ಗಂಭೀರತೆಯೆ ಇಲ್ಲದವಳು.

ಬೆಂಗಳೂರಿನ ಒಂದು ಮಹಿಳಾ ಹಾಸ್ಟೆಲಿನಲ್ಲಿ ನೂರಾರು ಹೆಂಗಸರು ವಾಸಿಸುತ್ತಿದ್ದರು. ಇವರು ಹೆಚ್ಚಾಗಿ ಅವಿವಾಹಿತ ತರುಣಿಯರು, ಮದುವೆಯಾದವರು ಕೂಡಾ ಇದ್ದರು. ಸಾಮಾನ್ಯವಾಗಿ ಎಲ್ಲರು ಒಂದೊಂದು ಕೆಲಸಕ್ಕೆ ಸೇರಿಕೊಂಡಿದರು ಬ್ಯಾಂಕ , ಕಾರ್ಖಾನೆ, ಕಛೇರಿ, ಶಾಲೆ, ಕಾಲೇಜುಗಳಲ್ಲಿ ಕೆಲಸ ಮಾಡುತ್ತಿದ್ದರು. ಬೆಳಿಗೆ ಏಳರಿಂದ ಹೊರಗೆ ಹೋಗಲು ಪ್ರಾರಂಭಿಸಿದರೆ ಹತ್ತು ಗಂಟೆಯವರೆಗೆ ಹಾಸ್ಟಲ್ ಪೂರ್ಣ ಖಾಲಿಯಾಗುತ್ತಿತ್ತು. ಸಂಜೆ ಆರು ಗಂಟೆಯವರೆಗೆ ಹಾಸ್ಟೆಲ್ ಭೀಕೋ ಎನ್ನುತ್ತಿತ್ತು. ಮತ್ತೆ ರಾತ್ರಿ ತುಂಬುತ್ತಿತ್ತು. ಹಾಸ್ಟೆಲ್ ವಾರ್ಡನ ಆನಂದಮ್ಮ ಎಲ್ಲರನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಹಣದಾಸೆಗಾಗಿ ನಡೆಸದೇ ತಮ್ಮ ಜೀವನದ ತೃಪ್ತಿಯನ್ನು ಈ ರೀತಿಯಾಗಿ ನೀಗಿಸಿಕೊಳ್ಳಲು ಹಾಸ್ಟೆಲ್ ನಡೆಸುತ್ತಿದ್ದರು. ಇಲ್ಲಿರುವವರನೆಲ್ಲಾ ಮಕ್ಕಳೆಂದು ತಿಳಿಯುತ್ತಿದ್ದರು.

ಕಥೆಯಲ್ಲಿ ಎರಡು ಜನ ಪರಸ್ಪರ ವಿರುದ್ಧ ಸ್ವಭಾವದವರಾದ ಆಶಾ ಹಾಗೂ ಸುಂದರಿಯ ಚಿತ್ರಣ ಮೂಡಿ ಬಂದಿದೆ. ಸುಸಂಸ್ಕೃತರ ಮನೆಯಲ್ಲಿ ಹುಟ್ಟಿ ಬೆಳೆದ ಆಶಾ ತಾನು ಪ್ರತಿಸಿದ್ದು ಒಬ್ಬ ಬಡ ಹುಡುಗನನ್ನು. ಶ್ರೀಮಂತರ ಮಗಳಾದ ಆಶಾ ಎಲ್ಲರನ್ನು ವಿರೋಧಿಸಿ ಆ ಬಡವನೊಡನೆ

ಮದುವೆಯಾದ ಭಾವನಾಜೀವಿ. ಪ್ರೀತಿಸುವ ಗಂಡನನ್ನು ಕೊಟ್ಟ ದೇವರು ಐದು ವರ್ಷಗಳಾದರು ಮಗುವನ್ನು ಕೊಡಲಿಲ್ಲ ಹೀಗಾಗಿ ಹಿರಿಯ ಮಗನಿಗೆ ಮಕ್ಕಳಾಗದಿದ್ದರೆ ತಮ್ಮ ವಂಶ ಸರ್ವನಾಶವಾಗುವುದೆಂದು ಮರು ಮದುವೆಗೆ ತಯಾರಿ ನಡೆಸಿದಾಗ ಆಶಾ ತಾನು ಮುಂದೆ ನಿಂತು ಮದುವೆ ಮಾಡಿ ಬೆಂಗಳೂರಿನ ಈ ಹಾಸ್ಟೆಲ್ ಸೇರಿದಳು. ತತ್ವಜ್ಞಾನದಲ್ಲಿ ಎಂ.ಎ. ಓದಿರುವ ಆಶಾ ಗಂಭೀರ ಸ್ವಭಾವದವಳು ಪತಿಯ ಮರು ವಿವಾಹ ಅವಳ ಜೀವನ ಮಾರ್ಗವನ್ನೇ ಬದಲಿಸಿತ್ತು. ಗಂಡಸರೆಲ್ಲರ ಬಗ್ಗೆ ತಿರಸ್ಕಾರದ ಭಾವನೆ ಮೂಡಿತ್ತು. ಸಾಹಿತ್ಯ ಸೇವೆಯ ತನ್ನ ಜೀವನದ ಪರಮ ಜೀವನವೆಂದು ನಂಬಿ ಕಥೆ ಕಾದಂಬರಿ ಬರೆಯುವುದರಲ್ಲಿ ತಲಲಿನಳಾಗಿದ್ದಳು. ತಾನು ಸಮಾಜದ ಶಿಶು ಸಾಹಿತ್ಯ ಸೇವೆಯೇ ನನ್ನ ಗುರಿ ಅದಕ್ಕಾಗಿ ಬದುಕಿರುವ ನಾನು ಭಗವಂತನ ಕರೆ ಬರುವವರೆಗೆ ಸಾಹಿತ್ಯ ಸೇವೆ ಮಾಡುತ್ತೇನೆಂದು ಹೇಳುವಲ್ಲಿ ಅವಳ ಧ್ವನಿಯಲ್ಲಿ ಅಸಹಾಯಕತೆ, ಪ್ರತಿರೋಧ ಎದ್ದು ಕಾಣುತ್ತಿದೆ.

ಒಂದೇ ಹಾಸ್ಟೇಲನಲ್ಲಿರುವ ಆಶಾ ಮತ್ತು ಸುಂದರಿಯ ವ್ಯಕ್ತಿತ್ವ ತೀರ ಭಿನ್ನತೆಯಿಂದ ಕೂಡಿದೆ. ಗಂಡಸರ ಗೋಜಿಗೆ ಹೋಗದ ಆಶಾ ತಿರಸ್ಕಾರದ ದೃಷ್ಟಿಯಿಂದ ನೋಡುತ್ತಿದ್ದಳು. ದಿನಕೊಂದು ರೀತಿ ಅಲಂಕರಿಸಿಕೊಂಡು ಪುರಾಣದಲ್ಲಿ ಬರುವ ದೇವಕನ್ಯೆಯರನ್ನು ಯುವಕರು ನೆನೆಯುವಂತೆ ಮಾಡುತ್ತಿದ್ದರು. ಹುಡುಗರ ಮುಂದೆ ಎದೆ ಸೆವೆಸಿಕೊಂಡು ನವಿಲು ನಡೆಗೆಯಲ್ಲಿ ಹೋಗುವುದು. ಗಂಡಸರ ಸ್ನೇಹಕ್ಕಾಗಿ ಹಪಹಪಿಸುತ್ತಿದ್ದಳು. ಆನಂದಮ್ಮ, ಆಶಾ ಎಷ್ಟೇ ಹಿತವಚನ ಹೇಳಿದರು ಕೇಳುವ ಸ್ಥಿತಿಯಲ್ಲಿ ಸುಂದರಿ ಇರಲಿಲ್ಲ. ಗಂಡು ಕುಳಿತು ಕೆಟ್ಟಿತ್ತು ಹೆಣ್ಣು ಓಡಾಡಿ ಕೆಟ್ಟಿತ್ತು ಎನ್ನುವಂತೆ ಬೆಂಗಳೂರು ಸೇರಿದ ನಂತರ ತಮ್ಮ ಚಾರಿತ್ರ್ಯ ಕಳೆದುಕೊಂಡಳು.

ಸತೀಶ ಹಾಗೂ ವಿಜಕುಮಾರರ ಸಂಬಂಧ ಬೆಳೆಸಿ ತನ್ನ ಜೀವನ ಹಾಗೂ ಜೀವವನ್ನೇ ಕಳೆದುಕೊಂಡ ದಾರುಣ ಘಟನೆ ಈ ಕಥೆ ಒಳಗೊಂಡಿದೆ. ತನ್ನ ಸುಂದರವಾದ ಶರೀರ ಸತೀಶನಿಗೆ ಮೈಚಲ್ಲಿ ಅವನ ಯಾವ ಕಾರ್ಯಕ್ಕೂ ವಿರೋಧ ಮಾಡದೆ ಸಹಕರಿಸಿದಳು. ಇದು ಸಾಲದೆನ್ನುವಂತೆ ಅವನೊಂದಿಗೆ ಕುಡಿತಕ್ಕೆ ಮುಂದಾದಳು. ಸತೀಶ ವಿಜಯಕುಮಾರನ ಮನದ ಅಪೇಕ್ಷೆ ತಿರಿಸಲು ಒಪ್ಪಿಕೊಂಡನು. ಮೊದಲೆ ಯೋಜನೆ ಹಾಕಿಕೊಂಡು ಲಾಡ್ಜನಲ್ಲಿ ಕೊನೆಯ ಸಾರಿ ಸುಖ ಅನುಭವಿಸಿ ವಿಜಯಕುಮಾರನಿಗೆ ಆಹ್ವಾನಿಸಿದ. ವಿಜಯಕುಮಾರ ನಾಲ್ಕು ಜನ ಗೆಳೆಯರೊಂದಿಗೆ ಸೇರಿ ಬಂದರು. ಇಡೀ ರಾತ್ರಿ ಒಬ್ಬರ ನಂತರ ಒಬ್ಬರು ಸುಂದರಿಯ ಶರೀರದ ಸುಖ ಅನುಭವಿಸದರು. ಮಾನವೀಯತೆಯನ್ನು ಕಳೆದುಕೊಂಡ ರಾಕ್ಷಸನಂತಿರುವವರು ಕಿರುಚಿದರು, ಒದ್ದಾಡಿದರು ಯಾರಿಗು ದಯೆ ಬರಲಿಲ್ಲ. ಕಾಮದ ದಾಹ ಎಲ್ಲರಿಗೂ ಇಳಿದಾಗ ಸುಂದರಿ ಹೆಣವಾಗಿ ಬಿದ್ದಿದಳು. ವಿಷಯ ತಿಳಿದ ಕಾಮಿಗಳು ಜನ ವಸತಿ ಇಲ್ಲದ ಪ್ರದೇಶದಲ್ಲಿ ಬಿಸಾಡಿದರು. ಎಲ್ಲರಿಗೂ ಬೇಕಾಗಿದ್ದ ಸುಂದರಿ ಈಗ ಸತ್ತು ಬಿದ್ದ ಶವ ಸುಂದರಿ ಬೇಕು ಶವ ಬೇಡಾ ಈ ಸ್ಥಿತಿ ಸುಂದರಿಯದು.

ಸುಂದರಿಯ ದಾರುಣ ಘಟನೆಯ ಮೇಲೆ ಹೋದ ಕತೆಯು ಕರಳು ಕಿತ್ತು ಬರುವಂತಹ ದುಃಖಭರಿತ ನೋವಿನ ಕಥೆಯಾಗಿದೆ. ಕಾಮದ ತೀಟೆಗಾಗಿ ಬೇಕಾಗಿದ್ದ ಸುಂದರಿ ಬೇಡವಾದ ಶವವಾದಳು. ಬೇವರ್ಸಿ ಹೆಣವೆಂದು ನಗರ ಸಭೆಯವರು ಗುಂಡತೋಡಿ ಶವ ಸಂಸ್ಕಾರ ಮಾಡುವಂತಹ ದಾರುಣ ಘಟನೆ ಇದಾಗಿದೆ.

`ಯಬಸಿ` ಅಂಕಿತದಿಂದ ಸಾಹಿತ್ಯ ರಚನೆ ಮಾಡಿರುವ ಯಶೋದಮ್ಮ ಸಿದ್‌ಬಟ್ಟೆ ಕುತುಹಲ ಹುಟ್ಟಿಸುವಂತಹ ಕಥೆಗಳನ್ನು ರಚಿಸಿದ್ದಾರೆ. ಇವರ ಕಥೆಗಳು ಉತ್ತರ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ.

### ೩.೩ ಕವಿತೆಗಳು :

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಾದ ಕತೆ, ಕಾದಂಬರಿ, ನಾಟಕ , ಪ್ರಬಂಧಗಳಿಗಿಂತ ಭಿನ್ನವಾದ ವಿಶೇಷ ಗುಣವನ್ನು ಕಾವ್ಯ ಮಾಧ್ಯಮದಲ್ಲಿ ಕಾಣಬಹುದು. ಕವಿರಾಜಮಾರ್ಗಕಾರನ ಅಭಿಮತದಂತೆ `ಕುರಿತೋದದೆಯಂ ಕಾವ್ಯ ಪರಿಣಿತ ಮತಿಗಳ್` ಎಂದಿರುವಂತೆ ಈ ನಾಡಿನ ಜನ ಅಕ್ಷರ ಜ್ಞಾನ ವಿಲ್ಲದಿದ್ದರು ಕಾವ್ಯ ರಚನೆ ಮಾಡಿರುವ ಐತಿಹ್ಯಾಗಳು ಸಿಗುತ್ತವೆ. [1]ಕಟ್ಟಿಯುವೇನೋ ಪೂಸಗಾಸಿಗಂ ಮುಡಿವ ಭೋಗಿಗಳಿಲ್ಲವೆ ಅಂದರೆ ಕಾವ್ಯದ ಆಸ್ವಾದನೆಯು ಸಹ ಕಾವ್ಯರಚನೆಯಷ್ಟೆ ಮಹತ್ವಪೂರ್ಣವಾಗಿರುತ್ತದೆ. ಕಾವ್ಯ ನಿರ್ಮಿತಿಯು ಅದನ್ನು ಓದಿ ಆನಂದಿಸುವ ಸಹೃದಯದ ಸದಭಿರುಚಿಯನ್ನು ಅವಲಂಬಿಸಿದ ಸಾರ್ಥಕತೆಯಾಗಿದೆ.

ಅನಾದಿ ಕಾಲದಿಂದಲೂ ಮಾನವ ಸಮಾಜ ಜೀವಿಯಾಗಿ ಸಹಚರರೊಂದಿಗೆ ಬದುಕುತ್ತಿದ್ದಾಗ ಸೃಷ್ಟಿಯಲ್ಲಿ ಕಂಡುಂಡ ಅಪರೂಪದ ಅನುಭವಗಳನ್ನು ಕಲ್ಪನೆ ಕನಸ್ಸುಗಳನ್ನು, ಆನಂದ ಕ್ಷಣಗಳನ್ನು, ಕವಿತೆ, ಚಿಂತನೆ, ಆಲೋಚನೆಗಳನ್ನು ಅನುಸರಿಸಿ ಕಾವ್ಯ ವೈಯಕ್ತಿಕವಾಗಿ ಅವರದೇಯಾದ ವಿಶಿಷ್ಟ ಶೈಲಿಯಲ್ಲಿ ಅಭಿವ್ಯಕ್ತಗೊಂಡಿದೆ. ಕವಿತೆಯಲ್ಲಿ ಎಷ್ಟೋ ಸಲ ಕವಿಯ ಗಮನಕ್ಕು ಬಾರದೆ ಅಗೋಚರ ಸಂಗತಿಗಳು ಅದ್ಭುತ ಅರ್ಥಗಳು ತಾವಾಗಿಯೇ ಅನಿವಾರ್ಯವಾಗಿ ಬಂದು ಸೇರಿ ಕಾವ್ಯಕ್ಕೆ ಹೊಸ ಆಯಾಮವನ್ನು ದೊರಕಿಸಿಕೊಡುತ್ತವೆ.

ಸಮಾಜದಲ್ಲಿ ಮಹಿಳೆಯ ಸ್ಥಿತಿಗತಿ, ಸ್ಥಾನಮಾನ, ವಿದ್ಯೆ, ವಿಚಾರಗಳನ್ನು ಅನುಸರಿಸಿ ಕಾವ್ಯ ಸೃಷ್ಟಿಯಾಗಿದೆ. ಒಂದು ಕಾಲದಲ್ಲಿ ಮನೆಯ ನಾಲ್ಕು ಗೋಡೆಗಳ ಮಧ್ಯೆ ವಾಸಿಸಬೇಕಾದ ಹೆಣ್ಣು ಅನೇಕ ಇತಿಮಿತಿಗಳ ಮಧ್ಯೆ ನೂರಾರು ಸಮಸ್ಯೆಗಳನ್ನು ಎದುರಿಸಿ ಕಾವ್ಯ ರಚನೆ ಮಾಡುತ್ತಾ ಬಂದಿದ್ದಾಳೆ. ನಂತರ ವಿದ್ಯಾವಂತಳಾಗಿ ಉದ್ಯೋಗಸ್ಥೆಯಾಗಿ ವೈಚಾರಿಕ ಸ್ವಾತಂತ್ರ್ಯದಿಂದ ಆತ್ಮವಿಶ್ವಾಸದಿಂದ, ಸತ್ವಪೂರ್ಣವಾದ ಉತ್ತಮ ಕಾವ್ಯ ರಚನೆ ಮಾಡಿ ಪುರುಷರಿಗಿಂತ ತಾನೇನು ಕಡಿಮೆ ಎಂಬುದು ತೋರಿಸಿಕೊಟ್ಟಿದ್ದಾಳೆ.

1. ಈ ಶತಮಾನದ ಕನ್ನಡ ಕವಯಿತ್ರಿಯರು -ಕುಲಶೇಖರಿ ಪು.ಸಂ. 19

ಯಶೋದಮ್ಮ ಸಿದ್‌ಬಟ್ಟೆ ಕೂಡಾ ಒಬ್ಬ ಮಹಿಳಾ ಸಾಹಿತಿಯಾಗಿದ್ದು ಅನೇಕ ಕವನಗಳನ್ನು ಬರೆದು ಮೆರೆದಿದ್ದಾರೆ. ಇವರದೆ ಆದ ಕವನ ಸಂಕಲನ ಹೊರಬಂದಿಲ್ಲ. ಸಂಗ್ರಹಿತ ಕವನ ಸಂಕಲನಗಳಲ್ಲಿ, ಪತ್ರಿಕೆಗಳಲ್ಲಿ ಕೆಲವು ಕವನಗಳು ಪ್ರಕಟಗೊಂಡಿದ್ದು ಇನ್ನು ಕೆಲವು ಕವನಗಳು ಪ್ರಕಟಗೊಂಡಿವೆ.

**ಕೊಲೆಗಡುಕರು :**

ಈ ಕವನ ಉತ್ತರ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ಇಲ್ಲಿ ಕವಯಿತ್ರಿ ಭವ್ಯ ಭಾರತದ ಕನಸ್ಸು ಕಂಡಿದ ಗಾಂಧಿಜೀಯ ವಿಚಾರಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವ ಹೃದಯ ಹೀನರ ಕುರಿತು ವ್ಯಕ್ತಪಡಿಸಿರುವ ಆಕ್ಷೇಪವೇ ಕವನದ ವಸ್ತುವಾಗಿದೆ. ಹಣದ ಶ್ರೀಮಂತಿಕೆಯ ಜೊತೆಗೆ ಹೃದಯ ಶ್ರೀಮಂತಿಕೆಯ ಅಗತ್ಯವನ್ನು ವ್ಯಕ್ತಪಡಿಸಿದ್ದಾರೆ.

ಬರೆ ಜೀಪು ಕಾರು ಸ್ಕೂಟರಗಳು
ಬರ ಹೋಗುವವರ ಸಂಖ್ಯೆ ಹೇಳ ತೀರದು
ತಿಂದುಂಡು ಚೆಲ್ಲುವರು ಬಡವರ
ಮದುವೆಗಾಗುವಷ್ಟು ಆದರೆ
ಈನ ನೀಡಿ ತಾಯಿ ಎಂದಾಗ
ನಿನಗೇನು ಧಾಡಿ ! ಮುಂದೆ ಹೋಗೆಂಬುದು.

ಕವಿಯಿತ್ರಿ ಇಲ್ಲಿ ಬಿಕ್ಷುಕನ ಮೇಲೆ ಕೇಳದ ಈ ಶ್ರೀಮಂತರನ್ನು ಹೃದಯ ಹೀನರೆಂದು ಕರೆದಿದ್ದಾರೆ. ಶ್ರೀಮಂತರಲ್ಲಿ ಕಾಂಚಣ (ಹಣ) ಇದ್ದಾಗ ಅವರ ದೃಷ್ಟಿಕೋನ ಹೇಗಿರುತ್ತೆದೆಂಬುದು ಬೇಂದ್ರೆ ಕಾವ್ಯವು ಸೃಷ್ಟಿಪಡಿಸುತ್ತದೆ.

[1]ಕುರುಡು ಕಾಂಚಣ ಕುಣಿಯುತ್ತಲಿಲ್ಲತ್ತು
ಕಾಲಿಗೆ ಬಿದ್ದವರ ತುಳಿಯುತಲಿತ್ತು.

ಬಡವರ ಮಾತು ಹಿಡಿಸದು ಇನ್ನೊಬ್ಬರ ಭಾವನೆಗಳನ್ನು ಅರ್ಥ ಮಾಡಿಕೊಳ್ಳದವರನ್ನು ಹೃದಯ ಶೂನ್ಯರೆಂದು ಕರೆದಿದ್ದಾರೆ.

**ವರದಿಗಳು :**

ಕನ್ನಡದ ನೆಲ ಜಲ ಕುರಿತು ಕರ್ನಾಟಕ ಸರ್ಕಾರ ಹಾಗೂ ಭಾರತ ಸರ್ಕಾರ ಅನೇಕ ಆಯೋಗಗಳನ್ನು ರಚಿಸಿದೆ. ಅವುಗಳ ವರದಿಯನ್ನು ಆಧರಿಸಿ ಈ ಕವಿತೆ ಬರೆದಿದ್ದಾರೆ. ಗೋಕಾಕ ಆಯೋಗ, ಮಹಾಜನ ಆಯೋಗ ಈ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸಿವೆ.

---

1. ಅಂಬಿಕಾತನಯದತ್ತರ ಸಮಗ್ರ ಕಾವ್ಯ ಸಂ. 1 -ವಾಮನ ಬೇಂದ್ರೆ (ಸಂ.) ಪು.ಸಂ.

ಮರಾಠಿಗರಿಗೆ

ಮಹಾಜನ

ಗುಂಡುರಾಯರಿಗೆ

ಗೋಕಾಕ

ಆದಕ್ಕೆಂಡೆ ಅವುಗಳ ನೇಮಕ.

ಆಯೋಗ ತನ್ನ ವ್ಯಾಪ್ತಿಯಲ್ಲಿ ಬರುವ ಅಂಶಗಳನ್ನು ಗಮನಿಸಿ ವರದಿಯನ್ನು ನೀಡಿತ್ತು. ಈ ವರದಿ ಕನ್ನಡಿಗರು ಸ್ವಾಗತಿಸಿದರೆ ಉಳಿದವರು ವಿರೋಧಿಸಿದರು.

ಕನ್ನಡಿಗರಿಂದ ಸ್ವಾಗತ

ನಂತರ

ಮರಾಠಿಗರ ಮೊಂಡತನ

ಮಲಿಯಾಳಿಗಳ ಭಂಡತನ

ಇಲ್ಲಿ ಈ ವರದಿಯನ್ನು ವಿರೋಧಿಸಿದವರು ಕೇಂದ್ರ ಸರ್ಕಾರ ಮಧ್ಯಸ್ಥಿಕೆ ವಹಿಸದೆ ಇರೋದರಿಂದ ಆದ ಪರಿಣಾಮ ಹೀಗೆ ಸೃಷ್ಠಿಸಿದ್ದಾರೆ.

ಕೇಂದ್ರದ ನಿಷ್ಕ್ರೀಯತೆ

ಪ್ರಯುಕ್ತ

ಮಹಾಜನ ವರದಿ ಮೂಲೆಗುಂಪು

ಇದಿಗ

ಗೋಕಾಕ ವರದಿ ಮುಂದೆ ಬಂತು.

ಗೋಕಾಕ ವರದಿ ಮಹಾಜನ ವರದಿಗಳಿಂದ ಆಗಬೇಕಾಗಿದ್ದ ಸಾಧನೆಯು ಆಗಲಿಲ್ಲ ಎಂಬುದು ಕವಯಿತ್ರಿ ಮನದ ಅಳಲಾಗಿದೆ.

**ಮತಾಂತರ :**

ಈ ಕವಿತೆಯು ಕೂಡಾ ಉತ್ತರ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ಬ್ರಾಹ್ಮಣ ಕನ್ನೆಯೊಬ್ಬಳು ಪ್ರೀತಿಸಿ ಕ್ರೈಸ್ತ ಧರ್ಮಿಯನ್ನು ಮದುವೆಯಾಗುವಳು. ಇಲ್ಲಿನ ಉಡುಗೆ ತೊಡುಗೆಗಳು ಭಿನ್ನವಾಗಿದ್ದುದ್ದು ಮಿಂಚಿಹೋದ ಮಾತಿಗೆ ಚಿಂತನೆ ಫಲವೇನು ಎನ್ನುವಂತೆ ನಂತರ ಗಮನಕ್ಕೆ ಬಂತು. ಕವಯಿತ್ರಿ ಹಿಂದೂ ಧರ್ಮಿಯಳು ಎಂಬುದು ಇಲ್ಲಿ ಗೋಚರಿಸುತ್ತಿದೆ. ಕವನದ ಮುಖ್ಯ ವಸ್ತುವು ಇಲ್ಲಿದೆ. ಮದುವೆಯಾಗಿ ಎಲ್ಲಾ ಕಾರ್ಯ ಮುಗಿದು ಕೋಣೆ ಸೇರಿ ಕನ್ನಡಿ ಮುಂದೆ ನಿಂತಾಗಿನ ದೃಷ್ಟಿ

ರೂಮು ಸೇರಿದಾಗ

ದರ್ಪಣದಲಿ ತನ್ನ ಬಿಂಬರ ಕಂಡು

ಚೀರಿದಳು ಚಿಟ್ಟನೆ !

ಬೋಳಾದ ನೊಸಲು ! ಬಿಳಿದಾದ ಸೀರೆ !

ಹಿಂದೂ ಧರ್ಮದ ವಿಧವೆಯ ಸ್ಥಾನ ನನಗಿಲ್ಲಿ !

ಎಲ್ಲವು ಮುಗಿದಾದ ಮೇಲೆ ಚೀರಿದರೇನು ? ಚಿಂತಿಸರೇನು ? ಆದರೆ ವಯಸ್ಸು ಅನ್ನುವುದೇ ಹೀಗಿರುತ್ತದೆ. ಇಲ್ಲಿ ಮದುವೆಯಾದ ನಂತರ ತಿರುಗಿ ಮತಾಂತರ ಆಗುವುದು ಸುಲಭವಲ್ಲ ಸಾಧ್ಯವು ಅಲ್ಲ ಎಂಬ ಮಾತು ಕವಯಿತ್ರಿಯದಾಗಿದೆ.

**ನಾರಿ ಮುನಿದರೆ ಮಾರಿ :**

ರಸ್ತೆಯಲ್ಲಿ ಹೋಗುವಾಗ ಪಡೆಹುಡುಗರು, ಕಾಮರಿಗಳು ಹೆಣ್ಣು ಮಕ್ಕಳ ಕಂಡು ಅವರ ಬೆನ್ನು ಹತ್ತಿ ಹೋಗುವ ದುರುಗುಟ್ಟಿ ನೋಡುವ, ಅಣುಕದ ಮಾತನಾಡುವ ವರ್ತನೆ ಮಾಡುತ್ತಾರೆ. ಆಸೆ ನೆರವೇರದಿದ್ದಾಗ ಮಾನಭಂಗ, ದೌರ್ಜನ್ಯ, ಅತ್ಯಾಚಾರ್ವ ಹಿಂಸೆಗೂ ಹೇಸದೆ ಇರುವ ಇಂತಹವರ ಬಗ್ಗೆ ಹೆಣ್ಣು ದೇವರದೆ ಪ್ರತಿರೋಧಿಸುವ ಮಾತ್ರ ಕವಯತ್ರಿಯ ಕವನದ ಆಶಯವಾಗಿ ಮೂಡಿ ಬಂದಿದೆ.

ಹಲ್ಲು ಕಿರಿಯುತ್ತಾರೆ

ಕಾರಣವಿಲ್ಲದೆ ಮುಗಳ್ನಾಗುತ್ತಾರೆ

ಸಹಜ ನೋಟ ಹರಿದಾಗ

ಕೋಣನಂತೆ ದುರಗುಟ್ಟಿ ನೋಡುತ್ತಾರೆ

ಗಾಳಿಯಲ್ಲಿ ಮಾತನಾಡಿ

ತಮ್ಮ ಇಂಗಿತ ಅರಹುತ್ತಾರೆ

ಕಾಲಿಗೆ ಕೈ ಹಾಕಿದಾಗ

ರನ್ನಿಂಗ ರೇಸಿಗೆ ರೆಡಿಯಾಗುತ್ತಾರೆ.

ಕಾಮಾಂಧರ ವರ್ತನೆಗೆ ರೇಸಿದ ಹೆಣ್ಣು ಏನು ಮಾಡಬಲ್ಲಳು ಎಂಬುದು ಚಿತ್ರಿಸಿದ್ದಾರೆ. ಇಷ್ಟಕ್ಕೂ ಹೆದರದ ಆ ಕಾಮಾಂಧರು ಮಚ್ಚಿನ ಸೊಕ್ಕಿನಿಂದ ಇನ್ನು ಮುಂದೆ ಬಂದು ವಾಮ ಮಾರ್ಗ ಅನುಸರಿಸಲು ಹಿಂದೆ ನೋಡರು ಆದರೆ ಹೆಣ್ಣು ಈಗ ಬದಲಾಗಿದ್ದು ಅದನ್ನು ಸಹಿಸಳು ಎಂಬುವ ಮನದ ಇಂಗಿತ ಹೀಗೆ ವ್ಯಕ್ತಪಡಿಸಿದ್ದಾರೆ.

ಬಾವಿಗೆ ಹಾರಲು, ನೇಣಿಗೆ ಕತ್ತು ಒಡ್ಡಲು

ವಿಷ ಸೇವಿಸಿ, ಇಲ್ಲವೆ ಸುಟ್ಟೊಂದು ಸಾಯಲು

ನಾವೀಗ ಸಿದ್ಧರಲ್ಲ.

ನಾವೇನು ಸೂತ್ರದ ಗೊಂಬೆಗಳಿಲ್ಲ

ಸಾಕು ನಾಯಿಗಳೂ ನಾವಲ್ಲ ? ಎಂದು ಕವಯಿತ್ರಿ ಖಾರವಾಗಿ ಪ್ರತಿಕ್ರಿಯಿಸಿದರೆ. ಸಮಾಜದಲ್ಲಿನ ವಾಸ್ತವದ ಸತ್ಯಾಂಶ ಕವಿತೆಯ ಆಶಯವಾಗಿದೆ.

**ವಿಶ್ವವೇ ನಮ್ಮ ಮನೆ :**

ದೇಶದಲ್ಲಿ ಜಾತಿ, ಮತ, ಪಂಥದ ಹೆಸರಿನಲ್ಲಿ ದೇಶವನ್ನು ಒಡೆಯುವ ಹುನ್ನಾರ ನಡೆಯುತ್ತಿದೆ. ಜಾತಿಯ ಹೆಸರಿನಲ್ಲಿ ಜನತೆಯಲ್ಲಿ ಭಿನ್ನಾಭಿಪ್ರಾಯ ಹುಟ್ಟಿಸುತ್ತೀರುವುದು ಈ ಕವಿತೆಯಲ್ಲಿ ಚಿತ್ರಿಸಲಾಗಿದೆ. ಎಲ್ಲಾ ಧರ್ಮದ ತಿರುಳು ಒಂದೇ ಆಗಿದ್ದು, ಈ ತಿಳುವಳಿಕೆ ಎಲ್ಲರಿಗೂ ಅಗತ್ಯವಾಗಿ ಬೇಕು.

ಹೆಸರು ಭಿನ್ನವೆ ಹೊರತು

ತಿರುಳೆಲ್ಲ ಒಂದೆ.

ಇಲ್ಲಿ ಅರ್ಥಪೂರ್ಣವಾಗಿರುವುದನ್ನೇ ಅನಾರ್ಥವಾಗಿ ಭಾವಿಸುತ್ತಿರುವದು ನಮ್ಮ ಮೌಢ್ಯತೆಗೆ ಸಾಕ್ಷಿಯಾಗಿದೆ.

ಮುಸ್ಲೀಮರ ಇಬಾದತ್

ಹಿಂದೂವಿಗದು ಪೂಜಾ

ಹಿಂದೂಗಳ ಉಪವಾಸ

ಮುಸ್ಲೀಮರ ರೋಜಾ

ಕವಿಯಿತ್ರಿ ೧೨ನೇ ಶತಮಾನದ ಶರಣರ ಪ್ರಭಾವಕ್ಕೆ ಒಳಗಾಗಿರುವುದು ಕವನದಲ್ಲಿ ಗೋಚರಿಸುತ್ತದೆ.

ಸತ್ತ ಮೇಲೆ ಸಿಗುವ ಆ ಸ್ವರ್ಗ

ಯಾರಿಗೆ ಬೇಕು ?

ಬದುಕಿನಲ್ಲಿ ಅದರ ನಿರ್ಮಾಣ

ನಾವೇ ಮಾಡಬೇಕು.

ವಚನಕಾರರು ಕವಿಯಿತ್ರಿಯ ಮೇಲೆ ದಟ್ಟವಾದ ಪ್ರಭಾವ ಬೀರಿದ್ದಾರೆ.

ಸ್ವರ್ಗ ಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿರೋ

ಸತ್ಯ ನುಡಿದಿದೇ ಸ್ವರ್ಗ ನಿತ್ಯ ನುಡಿದಿದೇ ನರಳ

ಮಾನವಿಯತೆಯೊಂದಿದ್ದೆರ ಯಾವ ಜಾತಿ, ಮತ, ಪಂಥ, ಗಳಿಲ್ಲ ಮನುಕುಲದ ಉದ್ಧಾರಕ್ಕೆ ನಾವೆಲ್ಲ ಒಂದಾಗಬೇಕಾಗಿದೆ ಎಂಬುದು ಇವರ ಆಶಯವಾಗಿದೆ.

ವಿಶ್ವವೇ ನಮ್ಮ ಮನೆ ಎಂದಾಗ

ಭಾವೈಕ್ಯದ ಮಾತೇಕೆ ?

ಎನ್ನುವಲ್ಲಿ ಜಾಗತ್ತು ಒಂದು ಕುಟುಂಬ. ನಾವೆಲ್ಲರು ಕುಟುಂಬದ ಸದಸ್ಯರು. ನಾವೆಲ್ಲ ವಿಶ್ವ ಮಾನವ ರಾಬೇಕೆಂಬ ಕುವೆಂಪುರವರ ಕವನದ ಪ್ರಭಾವ ಕಂಡು ಬರುತ್ತದೆ.

ಓ ನನ್ನ ಚೇತನ

ಆಗು ನೀ ಅನಿಕೇತನ.

ವ್ಯಕ್ತಿ ಸಂಕುಚಿತ ಮನೋಭಾವದಿಂದ ದೂರ ಸರಿದು ವಿಶಾಲ ಹೃದಯಿಯಾಗಿ ವಿಶ್ವವು ನಮ್ಮ ಮನೆಯನ್ನುವಂತಹ ವಿಶಾಲ ಹೃದಯ ನಮ್ಮದಾಗಬೇಕೆಂಬುದು ಇವರ ಹಂಬಲವಾಗಿದೆ.

**ಬೆಲೆ ಕಟ್ಟುವವರಾರು ?**

ಅನ್ಯಾಯದ ವಿರುದ್ಧ, ಮಹಿಳೆಯರ ಮಾನ ರಕ್ಷಣೆ, ರೈತ ಕೂಲಿಗಳ ಸೇವೆಗಾಗಿ ಸಿಡಿದೆದ್ದು, ಪೋಲಿಸರ ಲಾಟಿ, ಬೂಟುಗಳ ರುಚಿಕಂಡಿದರು. ಶೋಷಿತರ ಧ್ವನಿಯಾಗಿ ಬಡವರ ಬೆನ್ನೆಲುಬಾಗಿ ಶ್ರೀಮಂತರಿಗೆ ಕಂಠಕವಾಗಿ ಹೇಗೆ ಪ್ರತಿಭಟಿಸುತ್ತಾನೆ ತನ್ನವರಿಗಾಗಿ ಹೇಗೆ ನೋವಿಗೆ ಸ್ಪಂಧಿಸುತ್ತಾನೆ ಎನ್ನುವ ಅಂಶ ಕವನ ಶೀರ್ಷಿಕೆಯಾಗಿದೆ.

ಶೋಷಿತರ ಧ್ವನಿಯಾಗಿ

ಅಬಲೆಯರ ಬಾಯಾಗಿ

ಬಡವರ ಬೆನ್ನೆಲುಬಾಗಿ

ಸಿರಿವಂತರಿಗೆ ಕಂಟಕನಾಗಿ

ಕೂಲಿಗಳ ಕೈಯಾಗಿ

ಚಿತ್ರಿಸಿದ್ದಾರೆ. ಇಲ್ಲಿ ಅವನ ಪದವಿಗೆ ಅವನ ಸಾಧನೆಗೆ ಬೆಲೆಯೇ ಇಲ್ಲ ಎಂಬುದು ಕವಯಿತ್ರಿಯ ಆಶಯವಾಗಿದೆ.

**ನೋವು :**

ಇದು ಕೂಡಾ ಅಪ್ರಕಟಿತ ಕವನ. ಸಮಾಜದಲ್ಲಿ ಮಹಿಳೆಯರು ಶೋಷಣೆಗೆ ಕೊನೆ ಇಲ್ಲ. ಹೆಣ್ಣು ಮಕ್ಕಳನ್ನು ಕಾಮಿಸುವ ಛಲ ಹೊಂದಿರುವ ಶ್ರೀಮಂತಿಕೆಯ ಮಕ್ಕಳ ವರ್ತನೆ ಕುರಿತು ಬಡವರಿಗಾದ, ಹೆಣ್ಣಿಗಾದ ನೋವು ತೊಡಿಕೊಂಡಿದ್ದಾರೆ

ರಕ್ಷಣೆಗೆಂದು ಠಾಣೆ ಹೋದ

ಗರ್ಭಿಣಿಯ ಗರ್ಭವದೆ ಬಗೆದುಂಟೆ

ಪತಿಯೆದುರೇ ಮಾನಕಳೆದು

ಪರಿತ್ಯಕ್ತೆಯನ್ನಾಗಿಸಿದೆ

ಇಂದು ನೋಡಲು ಕಾಣುತ್ತಿರುವ ವಾಸ್ತವ ಬದುಕಿನ ಚಿತ್ರಣ ಅಸಾಹಯಕ ಹೆಣ್ಣಿನ ಸ್ಥಿತಿ ಬಡ ಪುರುಷನ ಅಸಹಾಯಕತೆ ಕಣ್ಣಿಗೆ ಕಟ್ಟುತ್ತಿದೆ

ತಮ್ಮನಿಗೆ ಚಾಕು ಇರಿದು

ಅಕ್ಕನನ್ನು ಕೂಡಿಕೊಂಡು

ಅರಿಯದ ಬಾಲೆಗೆ ಬಾಲಿನಂತೆ ಬಗೆದುಂಡೆ

ಕಿಶೋರಿಯರ ಕಾಮಯಕವನೆ ಕೆಣಕಿದೆ

ಹೀಗೆ ಅತ್ಯಾಚಾರಿಯ ವ್ಯಕ್ತಿತ್ವ ಚಿತ್ರಣ ಕಾವ್ಯದುದಕ್ಕೆ ಕಂಡು ಬಂದಿದೆ.

ಕಾಲುಗಳು ಕಂಪಿಸುತ್ತಿವೆ

ಕಣ್ಣುಗಳು ರಕ್ತ ಕಾರುತ್ತಿವೆ

ಲೇಖನ ಮಾತಾಡತೊಡಗಿವೆ

ಮೈಯೊಳಗೆ ಭೀಮ ಬಲ ಬಂದಂತಿದೆ

ಇಲ್ಲಿ ಪ್ರತಿರೋಧನ ಸ್ಥಿತಿಯು ಕಂಡು ಬಂದಿದೆ. ಅಂದರೆ ಇಷ್ಟೇಲ್ಲ ಮಾಡಬಾರದಾದ ಕೆಲಸ ಮಾಡಿದರಿಂದ ನೊಂದ ಜೀವ ಅನುಭವಿಸಿದ ಜೀವಿಯಲ್ಲಿನ ಬದಲಾವಣೆ ಚಿತ್ರಿಸಲಾಗಿದೆ.

ನಮ್ಮ ಹಾಲುಂಡು ವಿಷ ಕಕ್ಕುವ ಮೃಗವ

ಹುಡುಕಿ ಗುಂಡಿಕ್ಕಲೆಂದು

ಈ ನಾಡಿನಲ್ಲಿ ಪ್ರತಿರೋಧವ ವಸ್ತು ಸ್ಥಿತಿ ಕಂಡುಬಂದಿದೆ. ಯಾವ ಕ್ರೂರಿ ವಿಕೃತ ಕಾಮ ಕೊಲೆಗಟುಕನು ಒಬ್ಬ ತಾಯಿಯ ಮಗನೆ. ತಾಯಿ ಹಾಲು ಕುಡಿದ ಆ ಮೃಗದ ಮಗನಿದ್ದರು ಗುಂಡಿಕ್ಕಲು ತಾಯಿ ಹಿಂದೆ ಸರಿಯ ಬಾರದೆಂಬ ಆಶಯ ಹೊಂದಿದೆ.

**ಆತ್ಮಹತ್ಯೆ :**

ರೈತರ ನೋವಿನ ಜೀವನದ ಪ್ರತಿಬಿಂಬ ಕಾವ್ಯ ವಸ್ತುವಾಗಿದೆ. ಪ್ರಕೃತಿಯ ಅಟ್ಟಹಾಸ ವಿಚಿತ್ರವಿದ್ದು, ಮನುಷ್ಯರಿಗೆ ಅಸಹಾಯಕನಾಗಿ ಮಾಡಿದೆ. ಒಂದೇಡೆ ಪ್ರವಾಹ ಇನ್ನೊಂದೆಡೆ ಬರಗಾಲ ಇದುವೇ ಪ್ರಕೃತಿಯ ಅಟ್ಟಹಾಸ ಇದರ ನಷ್ಟ ಹೇಗಿದ್ದರೂ ರೈತನಿಗೆ ತಪ್ಪಿದಲ್ಲ.

ಸಾವು ಬದುಕಿನ ಹೋರಾಟ

ಎಂಥ ವಿಚಿತ್ರ ಈ ಲೋಕ

ಬರಗಾಲ ಒಂದು ಕಡೆ

ಅಳಿವು ಉಳಿವು ಇನ್ನೊಂದೆಡೆ

ಪ್ರಕೃತಿಯ ವಿಕೋಪದಿಂದಾಗಿ ನಾವು ಅನುಭವಿಸದ ರೈತನಿಗೆ ಆಸರೆ ಕಾಣದೇ ಇದ್ದಾಗ ಅಸಹಾಯಕನಾದ ರೈತ ನೇಣಿಗೆ ಶರಣನಾಗುತ್ತಾನೆ. ರೈತನ ಅನ್ನದಾತ ಎಂದು ನಂಬಿರುವ ನಮಗೆ

ಅವನ ಬಗ್ಗೆ ಅನುಕಂಪ ಇಲ್ಲದೆ ಇರುವದು ಅವನ ಆತ್ಮಹತ್ಯೆಗೆ ಔಷಧಿಯೇ ಇಲ್ಲದಂತಾಗಿರುವ ಅಂಶ ಮುಖ್ಯವಾಗಿದೆ.

**ಅಕ್ಕಳ ವೈರಾಗ್ಯ :**

ಈ ಕವನ ಯಶೋದಮ್ಮ ಸಿದ್‌ಬಟ್ಟೆಯವರ ಕೊನೆಯ ಕವನವಾಗಿದೆ. ಇದು ಡಾ. ಜಯಶ್ರೀ ದಂಡೆ ಅವರು ಸಂಪಾದಿಸಿರುವ `ಬಸವ ಪಥ` ಕೃತಿಯಲ್ಲಿ ಪ್ರಕಟಗೊಂಡಿದೆ.

ಅಕ್ಕಮಹಾದೇವಿಯ ತಂದೆ ತಾಯಿ, ಹುಟ್ಟಿದ್ದೂರು, ವಿಚಾರ ರಸಮಯವಾಗಿ ಚಿತ್ರಿಸಿದ್ದಾರೆ.

ಅಕ್ಕನ ತಂದೆ ತಾಯಿ
ಸುಮತಿ ನಿರ್ಮಲರೆಂದು
ನುಡಿದಿಹನು ಚಾಮರಾಸ
ಅವರು ಪರಮ ಶಿವಭಕ್ತರೆಂದು
ಹೇಳಿದನು ಹರಿಹರ
ಹುಟ್ಟಿದು ಉಡತಡಿ.

ಅಕ್ಕಳ ಸೌಂದದ ವರ್ಣನೆ ಮಾಡಿರುವ ಕವಯಿತ್ರಿ ಆಕೆಯ ವೈರಾಗ್ಯಕ್ಕೆ ಕಾರಣ ನೀಡಿದ್ದಾರೆ.

ಸೌಂದರ್ಯದ ಗಣಿ
ಲತೆಯಂತಿರ್ದ ಮೈಮಾಟ
ಅಕ್ಕನ ರೂಪಲಾವಣ್ಯ
ಕಡೆಗೂ ಕಂಟಕವಾಗಿ !

ಅವಳ ಸೌಂದರ್ಯ, ರೂಪ ಲಾವಣ್ಯವೆ ಈಕೆಯ ವೈರಾಗ್ಯಕ್ಕೆ ಕಾರಣವಾಯಿತು. ತನ್ನ ಸಂಸಾರವನ್ನು ತೇಜಿಸಿ ಹೊರಬಂದು ಕೂಟದತ್ತ ನಡೆದಳು

ವೈರಾಗ್ಯ ನಿಧಿಯಾಗಿ
ಹೊರ ಬಿದ್ದಳು ಅಕ್ಕ
ನಡೆದಳು ಕಲ್ಯಾಣ ಅಭಿಮುಖವಾಗಿ

ಕಲ್ಯಾಣಕ್ಕೆ ಬಂದಾಗ ಬಸವಾದಿ ಶರಣರ ದಿವ್ಯ ದರ್ಶನ ಪಡೆದರು ಅಲ್ಲಿ ಮಾನ ಪರೀಕ್ಷೆಗೆ ಒಳಗಾಗಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಅನುಭವ ಮಂಟಪದ ಸದಸ್ಯೆಯಾಗಲು ಅರ್ಹತೆ ಪಡೆದಳು.

`ಅಕ್ಕ` ಈ ಕವನ ಯಶೋದಮ್ಮ ಸಿದ್‌ಬಟ್ಟೆಯವರ ಸಂಪಾದಿತ ಕವನ ಸಂಕಲನ. `ಚೈತನ್ಯಶ್ರೀ` ಯಲ್ಲಿ ಪ್ರಕಾಟಗೊಂಡಿದೆ. ಕನ್ನಡದ ಮೊದಲ ಕವಿಯಿತ್ರಿ ಅಕ್ಕಮಹಾದೇವಿಯ ವೈರಾಗ್ಯ ಜೀವನದ ಮೇಲೆ ಬೆಳಕು ಚೆಲ್ಲುತ್ತದೆ. ಒತ್ತಾಯದಿಂದ ಮದುವೆಯಾದ ಕೌಶಿಕನಿಗೆ ಷರತ್ತಿನ ಮೇರೆಗೆ ಮದುವೆಯಾಗುತ್ತಾಳೆ. ಮಾತಗೆ ಮೀರಿದಾಗ ಎಲ್ಲವನ್ನು ಧಿಕ್ಕರಿಸಿ ಅಕ್ಕ ವೈರಾಗ್ಯ ವಿರಾಗಿಣಿಯಾಗುತ್ತಾಳೆ. ಈ ಲೋಕದ ಆಶೆ ತೊರೆದು ಚೆನ್ನ ಮಲ್ಲಿಕಾರ್ಜುನೆ ನನ್ನ ಪತಿಯೆಂದು ಅರೆಸುತ್ತಾ ಮುನ್ನಡೆಯುತ್ತಾಳೆ.

ಕವಯಿತ್ರಿ ಅಕ್ಕಮಹಾದೇವಿಯನ್ನು ಸಾಮರಸ್ಯ ಮುಕ್ತಳನ್ನಾಗಿ ಮಾಡಿದ್ದಾರೆ. ಅಂದು ಇಂದುಗಳ ನಡುವೆ ಅಕ್ಕಳನ್ನು ವಿಶ್ವದ ಪ್ರಜೆಯಾಗಿ ಕಂಡಿದ್ದಾರೆ.

ಸಪ್ತ ಸಾಗರ ದಾಟಿ
ಅಮೇರಿಕನ್ನರ ನಾಡಿನೊಳ್
ಕನ್ನಡ ಪತಾಕೆ ಹಾರಿಸಿದಳ್

ಇಲ್ಲಿ ಅಮೆರಿಕಾದಲ್ಲಿ ಜರುಗುವ `ಅಕ್ಕ` ವಿಶ್ವ ಕನ್ನಡ ಸಮ್ಮೇಳವನ್ನು ಆಧರಿಸಿ ಹೇಳಿದ್ದಾರೆ. ಅಕ್ಕಳನ್ನು ಸೀಮಿತವಾದ ದೃಷ್ಟಿಕೋನದಿಂದ ನೋಡದೆ ವಿಶಾಲರ್ಥದಲ್ಲಿ ನೋಡಿದ್ದಾರೆ. ಮಾನವ ಜನಾಂಗವೇ ನನ್ನ ಕುಟುಂಬ ಹೀಗೆ ಅಕ್ಕಳನ್ನು ವಿಶ್ವಮಾನವಳಾಗಿ ಕೊಡುವ ಪ್ರಯತ್ನ ಇದಾಗಿದೆ.

ವಿಶ್ವವೇ ನನ್ನ ಮನೆ
ಮಾನವ ಜನಾಂಗವೇ ನನ್ನ ಕುಟುಂಬ
ಅಣ್ಣನ ನುಡಿಯಂ
ಸಾಧಿಸಿ ತೋರಿಸಿದಳ್

ಹಾಗೆಯೇ ಶರಣ ಸತಿ ಲಿಂಗಪತಿ ಎನ್ನುತ್ತಿದ್ದವಳಿಗೆ ಸತ್ವ ಪರೀಕ್ಷೆಯು ನಡೆಯಿತು. ಅಲ್ಲಮ ಹಾಗೂ ಅಕ್ಕಳ ನಡುವೆ ಸಂವಾದವು ಜರುಗುತ್ತದೆ. ಈ ಕವನದಲ್ಲಿ ಅಕ್ಕಮಹಾದೇವಿಯನ್ನು ಬಂಡಾಯಗಾರ್ತಿಯಾಗಿ ಉಲ್ಲೇಖಿಸಲಾಗಿದೆ.

ಪ್ರಥಮ ಕವಿಯಿತ್ರಿ
ಮೊದಲ ಬಂಡಾಯ ಗಾರ್ತಿಯಾದಳ್

ಹೀಗೆ ವೈವಿಧ್ಯಮಯವಾಗಿ ಅಕ್ಕಳನ್ನು ಚಿತ್ರಿಸಲಾಗಿದೆ. ಈ ಕವನ ಯಶೋದಮ್ಮ ಸಿದ್‌ಬಟ್ಟೆಯವರು ಫ್ಲೋರಿಡಾದಲ್ಲಿ ಜರುಗಿದ 4ನೇ ಅಕ್ಕ ವಿಶ್ವ ಸಮ್ಮೇಳನದ ಕವಿಗೋಷ್ಠಿಯಲ್ಲಿ ವಚನ ಮಾಡಿದ್ದಾರೆ.

ಶಿವಲೀಲೆ :

ಇದೊಂದು ಅದ್ಭುತ ಕವನ ದೇವರ ಇರುವಿಕೆಯನ್ನು ಕಂಡುಕೊಳ್ಳುವ ಪ್ರಯತ್ನ ಇದಾಗಿದೆ. ಬದುಕಿನ ಸೂತ್ರ ಹೆಣೆದಿರುವ ಈ ಕವನದಲ್ಲಿ ಹೌದು ಅಲ್ಲಗಳ ನಡುವೆ ಸಂವಾದ ಎಂಬಂತೆ ಚಿತ್ರಿಸಲಾಗಿದೆ.

ಬಾಳು ಯಾರದು ಅಲ್ಲ, ಭವ್ಯತೆಯೂ ಇಲ್ಲ
ನಾನು ನೀನು ಅಲ್ಲ ನೀನು ನಾನು ಅಲ್ಲ
ಅಲ್ಲ ಹೌದುಗಳ ಮಧ್ಯೆ ನಿಂತಾಗ
ಗೋಚರಿಸುವುದೇ ಕಾಣದ ಶಿವಲೀಲೆ

ಎಂಬಲ್ಲಿ ಶಿವಲೀಲೆಯ ಕಾಣುವಂತಹದು ಮಾತಿನಲ್ಲಿ ಮೌನದಲ್ಲಿ ಗಂಭೀರತೆಯಲ್ಲಿ ಕಣುತದೆಂದು ಕವಿಯಿತ್ರಿ ಹೇಳುತ್ತಾಳೆ.

ಶರಣ ಸಮೂಹ ಅಕ್ಕಳನ್ನು ಪರೀಕ್ಷೆಗೆ ಒಡ್ಡಿ ವಿಧ ವಿಧವಾಗಿ ಸೂಕ್ಷ್ಮವಾಗಿ ಗಮನಿಸಿ ಜಯವಾಗಲಿ ಜಗನ್ಮಾತೆಗೆ ಎಂದು ಘೋಷಿಸುವರು.

ಪ್ರಕೃತಿಯೆ ಪ್ರತಿಧ್ವನಿಸಿ
ಕಲ್ಯಾಣವು ಭೂ ಕೈಲಾಸವಾಗಿ
ಆಧ್ಯಾತ್ಮಿಕತೆಯ ತುಟ್ಟ ತುದಿಗೇರಿ
ಹೊಸ ಪರಿವರ್ತನೆಗೆ
ಹಾಡಿತು ನಾಂದಿ !

ಕಲ್ಯಾಣವನ್ನು ಭೂಕೈಲಾಸವಾಗಿ ನೋಡುವ ಶರಣರ ದೃಷ್ಠಿ ವೈಚಾರಿಕತೆಯಿಂದ ಕೂಡಿದುದಾಗಿದೆ.

ಸ್ವರ್ಗ ನರಕ ಬೇರಿಲ್ಲ ಕಾಣಿರೋ
ಸತ್ಯ ನುಡಿವುದೆ ಸ್ವರ್ಗ ವಿತ್ಯ ನುಡಿವುದೆ ನರಕ

ಎನ್ನುವಂತೆ ಕಲ್ಯಾಣ ಭೂ ಕೈಲಾಸವಾಗಿ ಕಂಡ ವಚನಕಾರರ ದೃಷ್ಠಿ ಸೃಜನಶೀಲವಾದುದಾಗಿದೆ.

ತನ್ನಿಷ್ಟದೇವ ಚೆನ್ನಮಲ್ಲಿಕಾರ್ಜುನೆಂದು ಹೇಳುತ್ತಾ ಬಂದಿರುವ ಅಕ್ಕ ಶ್ರೀಶೈಕ್ಕೆ ಬಂದು ಪಾತಾಳ ಗಂಗೆಯಲ್ಲಿ ಮಿಂದು ಕದಳಿ ಬನದಲ್ಲಿ ಶಿವನೊಂದಿಗೆ ಬೆರೆತು ಬಟ್ಟೆ ಬಯಲಾಗುತ್ತಾಳೆ. ಜಗಕ್ಕೆ ಜ್ಯೋತಿಯಾಗಿ ಬೆಳಗುತ್ತಾಳೆ.

ಕಬಳಿ ಬನದಲ್ಲಿ ಶಿವನೊಂದಿಗೆ ಬೆರೆತು
ಬಟ್ಟ ಬಯಲಾದಳು ಅಕ್ಕ
ಜಗಕೆ ಜ್ಯೋತಿಯಾಗಿ ಬೆಳಗಿದಳು

ಪುರಾಣಕ್ಕೆ ವಸ್ತುವಾಗಿ

ದಂತ ಕತೆಗಳಿಗೆ ಕಥಾ ನಾಯಕಿಯಾಗಿ

ಪವಾಡ ಸದೃಶ್ಯಳೆಂಬ

ಖ್ಯಾತಿಗೂ ಒಳಗಾಗಿ

ಮೆರೆದಿಹು ಅಕ್ಕ ಲೋಕದಲಿ

ಕವಯಿತ್ರಿ ಕಲ್ಪನೆ ವಾಸ್ತವಿಕತೆಯಿಂದ ಕೂಡಿದುದಾಗಿದೆ. ಅಕ್ಕಳನ್ನು ಭಿನ್ನ ರೀತಿಯಲ್ಲಿ ಪುರಾಣ, ದಂತ ಕತೆಗಳಲ್ಲಿಯೂ ಉಲ್ಲೇಖಿಸಲಾಗಿದೆ.

ಯಶೋದಮ್ಮನವರು ಹೀಗೆ ಅನೇಕ ಕವನಗಳನ್ನು ಬರೆದಿದ್ದಾರೆ. ಇವರ ಕೆಲವು ಕವನಗಳು ಪ್ರಬುದ್ಧತೆಯಿಂದ ಕೂಡಿವೆ. ಸಮಾಜದ ವ್ಯವಸ್ಥೆಯನ್ನು ತಿದ್ದುವ ಪ್ರತಿಭಟಿಸುವ ಹಾಗೂ ಸ್ತ್ರೀ ಜಾಗೃತಿ ಮೂಡಿಸುವ ಕವನಗಳೊಂದಿಗೆ ಬಸವಾದಿ ಶರಣರಿಗೆ ಸಂಬಂಧಿಸಿದ ಕವಿತೆಗಳನ್ನು ಕೂಡಾ ಬರೆದು ಮೆರೆದಿದ್ದಾರೆ.

### ೩.೪ ಸಂಪಾದನೆ :

ಸಂಪಾಂದನೆಯು ಒಬ್ಬ ಲೇಖಕ ಬರೆದ ಸಾಹಿತ್ಯಕ್ಕಿಂತ ಭಿನ್ನವಾಗಿರುತ್ತದೆ. ಒಬ್ಬ ಲೇಖಕನಿಂದ ರಚನೆಗೊಂಡ ಸಾಹಿತ್ಯ ಕೃತಿಯಲ್ಲಿ ಅವನ ಜಾಣ್ಮೆ ಅವನು ದುಡಿಸಿಕೊಂಡ ಭಾಷೆ, ಶೈಲಿ ಅವನೊಬ್ಬನ ಸೃಜನಶೀಲಿತೆ ಮಾತ್ರ ಕಂಡುಬಂದರೆ, ಸಂಪಾದನೆಯಲ್ಲಿ ಅನೇಕ ಸಾಹಿತಿಗಳ ಸೃಜನಶೀಲತೆ, ಅವರ ಜಾಣ್ಮೆ, ವಸ್ತು ವಿಷಯ ನಿರೂಪಣೆ ಅವರವರು ದುಡಿಸಿಕೊಂಡ ಭಾಷೆಯು ಭಿನ್ನತೆಯಿಂದ ಕೂಡಿರುತ್ತದೆ.

ಸಂಪಾದನೆಯು ಬಹಳ ಹಿಂದಿನಿಂದ ಬಂದಿರುವಂತಹ ಸಾಹಿತ್ಯ ಪರಂಪರೆಯಾಗಿದೆ. ಗ್ರಂಥ ಸಂಪಾದನೆ ಮಾಡುತ್ತಿದ್ದವರು ಒಂದು ಕೃತಿಯ ಕುರಿತು ವಿವಿಧ ಮೂಲಗಳಿಂದ ಮಾಹಿತಿ, ವಿವರಗಳ ಸಂಗ್ರಹಣೆ ನಡೆಯುತ್ತದೆ. ಸಂಪಾದನೆಯಲ್ಲಿ ಅವರ ಸೃಜನಾತ್ಮಕತೆಯನ್ನು ಒಂದೆಡೆ ತಂದು ನಿಲ್ಲಿಸುವ ಎಲ್ಲರನ್ನು ಒಂದೆಡೆ ಸೇರಿಸುವ ಪ್ರಯತ್ನ ನಡೆಯುತ್ತದೆ. ಇಲ್ಲಿ ವೈವಿಧ್ಯಮಯ ಸಾಹಿತ್ಯ ಪ್ರಕಾರ ನೋಡಲು ಸಾಧ್ಯ.

ಯಶೋದಮ್ಮ ಸಿದ್‌ಬಟ್ಟೆಯವರು ಕವಿತೆ ಹಾಗೂ ಗದ್ಯ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಎರಡು ಸಂಪಾದಿತ ಕೃತಿಗಳನ್ನು ಹೊರತಂದಿದ್ದಾರೆ.

1. ಚೈತನ್ಯ ಶ್ರೀ
2. ಸಾಹಿತ್ಯ ಸೌರಭ

## ಚೈತನ್ಯ ಶ್ರೀ :

ಕರ್ನಾಟಕ ಲೇಖಕಿಯರ ಸಂಘ ಇವರಿಂದ ೨೦೦೫ ರಲ್ಲಿ ಪ್ರಕಟಗೊಂಡಿರುವ ಈ ಸಾಹಿತ್ಯ ಕೃತಿ ವಿವಿಧ ಕವಯಿತ್ರಿಯರು ಬರೆದಿರುವ ಕವನಗಳ ಸಂಕಲನವಾಗಿದ್ದು, ಜಿಲ್ಲೆಯ ಮಹಿಳಾ ಸಾಹಿತಿಗಳಲ್ಲಿ ತಮ್ಮ ಅದ್ಭುತ ಪ್ರತಿಭಾಶಕ್ತಿ ಹಾಗೂ ಸಂಘಟನಾ ಶಕ್ತಿಗಳನ್ನು ಕ್ರೋಢಿಕರಿಸಿ ಜಿಲ್ಲೆಯಲ್ಲಿ ಮಹಿಳಾ ಲೇಖಕಿಯರ ಸಂಘ ಸ್ಥಾಪಿಸಿ ಇದರ ಮೂಲಕ ಎಲೆ ಮರೆ ಕಾಯಿಯಂತಿರುವ ಜಿಲ್ಲೆಯ ಮಹಿಳಾ ಪ್ರತಿಭೆಗಳನ್ನು ಗುರುತಿಸಿ ಅವರನ್ನು ಬೆಳಕಿಗೆ ತರುವ ಪ್ರಯತ್ನವೇ ಇವರದಾಗಿದೆ. ಅದರ ಮೊದಲ ಪ್ರಯೋಗವೇ ಚೈತನ್ಯಶ್ರೀ ಎಂಬ ಕೃತಿ ಪ್ರಕಟಣೆಗೊಂಡಿರುವುದು.

ಚೈತನ್ಯದ ಗಣಿ, ಸ್ಫೂರ್ತಿಯ ಸೆಲೆಯಾಗಿರುವ ಸಂಪಾದಕಿ ಯಶೋದಮ್ಮ ಸಿದ್‌ಬಟ್ಟೆ ಚೈತನ್ಯಶ್ರೀ ಎಂಬ ಕಿರು ಹೊತ್ತಿಗೆಯಲ್ಲಿ ಜಿಲ್ಲೆಯ ಸುಮಾರು ೩೧ ಜನ ಮಹಿಳಾ ಸಾಹಿತಿಗಳಿಂದ ಎರಡೆರಡು ಕವನಗಳನ್ನು ಬರೆಯಿಸಿ ಪ್ರಕಟಿಸುವ ಕಾರ್ಯ ಮಾಡಿದ್ದಾರೆ. ಇದೊಂದು ಮಹತ್ವದ ಕೃತಿ ಎನ್ನದಿದ್ದರು ಮಹತ್ವದ ಸಾಧನೆ ಎನ್ನಬಹುದಾಗಿದೆ. ಸಾಹಿತಿಕವಾಗಿ ಹಿಂದುಳಿದಿರುವ ಬೀದರ ಜಿಲ್ಲೆಯಲ್ಲಿ ಮಹಿಳಾ ಸಾಹಿತಿಗಳ ಸ್ಥಿತಿ ಚಿಂತಾಜನಕದ ಮಟ್ಟದಲ್ಲಿದೆ. ಆದ್ದರಿಂದ ಸಂಘಟನಾ ಶಕ್ತಿಯ ಮೂಲಕ ಬರೆಯಲು ಹಿಂಜರಿಯುವವರನ್ನು ಮುಂದೆತಂದು ನಿಲ್ಲಿಸಿದ್ದಾರೆ. ಅವರ ಬರಹಕ್ಕೆ ಜೀವ ತುಂಬುವ ಕಾರ್ಯ ಮಾಡಿದ್ದಾರೆ.

ಚೈತನ್ಯಶ್ರೀ ಕೃತಿಗೆ ಮುನ್ನುಡಿ ಬರೆದಿರುವ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷರಾಗಿರುವ ಶ್ರೀಮತಿ ಸಂಧ್ಯಾರೆಡ್ಡಿ ಹಿಂದುಳಿದ ಜಿಲ್ಲೆ ಎನಿಸಿಕೊಂಡಿರುವ ಬೀದರ ಜಿಲ್ಲೆಯ ೩೧ ಹಿರಿಯ ಮತ್ತು ಕಿರಿಯ ಕವಯಿತ್ರಿಯರು ಕವನಗಳನ್ನು ಒಗ್ಗುಡಿಸಿ ಪ್ರಕಟಿಸಿರುವ ಬೀದರ ಜಿಲ್ಲಾ ಮಹಿಳಾ ಲೇಖಕಿಯರ ಸಂಘದ ಅಧ್ಯಕ್ಷರಾದ ಯಶೋದಮ್ಮ ಸಿದ್‌ಬಟ್ಟೆಯವರ ಈ ಕಾರ್ಯವನ್ನು ಶ್ಲಾಘಿಸಿದ್ದಾರೆ.

ಸಂಪಾದಕಿ ಯಶೋದಮ್ಮ ಸಿದ್‌ಬಟ್ಟೆ ಈ ಕೃತಿಯ ಕುರಿತು ಒಂದು ಮಾತು ಎಂಬ ಶೀರ್ಷಿಕೆಯಲ್ಲಿ ಕೃತಿಯ ಮಹತ್ವ ಎತ್ತಿ ತೋರಿಸಿದ್ದಾರೆ. ಕರ್ನಾಟಕ ಲೇಖಕಿಯರ ಸಂಘ ಬೀದರನಲ್ಲಿ ಪ್ರಾರಂಭವಾಗಿ ಒಂದು ವರ್ಷ ಪೂರೈಸಿದ ಶುಭ ಸಂದರ್ಭದಲ್ಲಿ ಈ ಕೃತಿ ಹೊರತರಲಾಗಿದೆ. ಹತ್ತು ಹಲವು ಆಶೆ ಮತ್ತು ನಿರೀಕ್ಷೆಯನ್ನು ಹೊತ್ತ ಸಂಘವು ಎಲ್ಲಾ ಕ್ಷೇತ್ರಗಳಲ್ಲಿ ಹಿಂದುಳಿದಿರುವ ನಮ್ಮ ಜಿಲ್ಲೆಯಲ್ಲಿ ಕಲಿತ ಮಹಿಳೆಯರ ಸಂಖ್ಯೆ ವೃದ್ಧಿಸುತ್ತಿರುವದು. ಪೋಷಕರು ಹೆಣ್ಣು ಮಕ್ಕಳ ಶಿಕ್ಷಣ ಅರ್ಧಕ್ಕೆ ನಿಲ್ಲುಸುವುದು ಜಾಸ್ತಿಯೇ ಆಗಿದೆ. ಪದವಿ, ಸ್ನಾತಕೋತ್ತರ, ಎಂ.ಫಿಲ್, ಪಿಎಚ್.ಡಿ. ಅಧ್ಯಯನ ಮಾಡಿದವರ ಸಂಖ್ಯೆ ಕಡಿಮೆಯಾಗಿದೆ. ಬರಹಕ್ಕೆ ಪ್ರೇರಣೆ ಪ್ರೋತ್ಸಾಹವಿಲ್ಲದೆ ಮಹಿಳಾ ಸಾಹಿತಿಗಳು ವೇದನೆಯನ್ನು ಅನುಭವಿಸುವುದು ಖೇದಕರ ಸಂಗತಿಯಾಗಿದೆ.

ಬರೆಯುವ ಮಹಿಳಾ ಸಾಹತ್ಯಾಸಕ್ತರಿಗೆ ಒಂದು ವೇದಿಕೆಯನೋದಗಿಸಿ ಪ್ರತಿಭೆಗಳನ್ನು ಹೊರತರುವ ಚಿಕ್ಕ ಪ್ರಯತ್ನ ಇದಾಗಿದೆ. ಕಲೆ , ಸಾಹಿತ್ಯ ಸಂಸ್ಕೃತಿ ವಿಕಾಸಕ್ಕೆ ಸಂಕಲ್ಪ ತೊಟ್ಟಿರುವ ಕರ್ನಾಟಕ ಲೇಖಕಿಯರ ಸಂಘ ಜಿಲ್ಲೆಯ ಮಹಿಳೆಯರಲ್ಲಿ ಜಾಗೃತಿಯನ್ನುಂಟು ಮಾಡಿ ಕನ್ನಡ ಸೇವೆಗೆ ಅವರನ್ನು ಅಣಿಗೊಳಿಸಲು ಎಲ್ಲಾ ವಿಧವಾದ ಪ್ರಯತ್ನ ಮಾಡುವ ಭರವಸೆ ಹೊಂದುವುದು ಅಗತ್ಯವಾಗಿ ಗುರುತಿಸಲಾಗಿದೆ.

ಬೆನ್ನುಡಿಯಲ್ಲಿ ಸಾಹಿತಿ ಜಾಣಗೆರೆ ವೆಂಕಟರಾಮಯ್ಯ ಯಶೋದಮ್ಮ ನವರ ಈ ಸಾಧನೆಯನ್ನು ಕೊಂಡಿದ್ದಾರೆ ಬಸವಾದಿ ಶರಣರ ಪ್ರಭಾವದಿಂದಾಗಿ ಈ ನೆಲದಲ್ಲಿ ಮಹಿಳಾ ಪ್ರತಿಭೆಗಳನ್ನು ಗುರುತಿಸಿ ತಮ್ಮ ಅದ್ಭುತ ಪ್ರತಿಭಾಶಕ್ತಿ ಮತ್ತು ಸಂಘಟನಾ ಶಕ್ತಿಗಳನ್ನು ಕ್ರೋಢೀಕರಿಸಿ ಜಿಲ್ಲೆಯ ಮಹಿಳಾ ಪ್ರತಿಭೆಗಳನ್ನು ಗುರುತಿಸಿ ಅವರಿಗೆ ಬೆಳಕಿಗೆ ತರುವ ಕಾಯಕ ಮಾಡುತಿರುವುದನ್ನು ಶ್ಲಾಘಿಸಿದ್ದಾರೆ.

ಬೀದರ ಜಿಲ್ಲೆಯ ಮಹಿಳಾ ಕವಯಿತ್ರಿಯರು ಬರೆದಿರುವ ಕವನಸಂಕಲನವು ಒಟ್ಟು ೩೧ ಜನ ಕವಯಿತ್ರಿಯರಿಂದ ಬರೆದಿರುವ ಎರಡೆರಡು ಕವನಗಳನ್ನು ಒಳಗೊಂಡಿದೆ.

೧. ಸುನೀತಾ ಕೂಡ್ಲಿಕರ್ - ಹೊಸ ಕವನಗಳು, ಹೀಗೇಕೆ ಮಾಡಿದೆ
೨. ಪದ್ಮಾವತಿ ಕೇಶವರಾವ - ಚಿರ ನಿದ್ರೆ, ಏಳು ಎದ್ದೇಳು
೩. ಇಂದುಮತಿ ಬಂಡಿ - ಪ್ರಕೋಪ, ಪರಿಸರ
೪. ಶೋಭಾವತಿ ಸೋಮರೆ - ಹಾರೈಕೆ, ನೊಂದಮನ
೫. ಪ್ರೊ. ಅನನ್ಯ - ಏಕಾಂಗಿ, ಇಳೆ
೬. ಪ್ರೊ. ವಜ್ರಾ ಪಾಟೀಲ - ಕರ್ನಾಟಕ ಮಾತೆ, ದಾಂಪತ್ಯ
೭. ಪ್ರೊ. ಮಲ್ಲಮ್ಮ ಪಾಟೀಲ - ಕುಂಕುಮ , ನೋವುಂಡವನ ಬದುಕು
೮. ಜಯಶ್ರೀ ಘಾಟೆ - ಅರಿ, ಹೃದಯ
೯. ಸುನೀತಾ ಮಡಿವಾಳ - ಪಯಣ, ಪರೋಪಕಾರ
೧೦. ಜಯಶ್ರೀ ಟೋಕರೆ - ಮುಪ್ಪು, ಬಸ್ಸಿನ ಕೊರತೆ
೧೧. ಕಸ್ತೂರಿಬಾಯಿ ಎಸ್. ಜಲ್ದೆ - ಹೂವು, ರೊಟ್ಟಿ ಹೊಟ್ಟೆ
೧೨. ಪ್ರಯಾಗಬಾಯಿ ಎರೋಳ್‌ಕರ್- ಭ್ರಾತೃ ಪ್ರೇಮ, ಯುಗ ಪುರುಷ
೧೩. ಪ್ರೊ. ಶಶಿರೇಖಾ ಸಾಲೋಮನ್- ಚೈತನ್ಯ, ಅಮ್ಮ ಕೇಳಮ್ಮ
೧೪. ಶ್ರೀದೇವಿ ಉಮಾಕಂತ - ಕನಸು ನನಸು, ನೀರೀಕ್ಷೆ
೧೫. ಮಹಾದೇವಿ ಬಿ. ಹೆಬ್ಬಾಳೆ - ಬೀದರ ನಗರ, ಯುದ್ಧ
೧೬. ಶ್ರೀಮತಿ ಪ್ರಿಸ್ಕಿರಾ - ಪ್ರಕೃತಿ, ಪರಿಸರ

೧೭. ಎಸ್. ಸಮಾಧಾನ - ಪ್ರೀತಿಯ ಚಿಲುಮೆ, ಪ್ರಗತಿ ಪಥ

೧೮. ಲೀಲಾ ಪಾಟೀಲ - ಸವಕಲು ನಾಣ್ಯ, ಧೂಷಂಡ

೧೯. ಸವಿತಾ ಹೆಚ್.ಖಂಡೆ - ಬಡವರ ಗೋಳು, ಎಂದೋ ಬರೆದ ಕವನ

೨೦. ರಾಜೇಂದ್ರಿ ಡೇವಿಡ್ - ಕನ್ನಡ ನಾಡು, ರೈಲು ಗಾಡಿ

೨೧. ಸುವರ್ಣಮಾಲಾ ದೀಕ್ಷಿತ್ - ಯಾರು ದೊಡ್ಡವರು, ಸಮ್ಮಿಲನ

೨೨. ದಯಾಮಣಿ ರಾಜಪ್ಪ - ಸುನಾಮಿ, ಸ್ತ್ರೀಶಕ್ತಿ

೨೩. ಶೋಭಾ ವಿ. ಅಲಿಗಾವಿ - ಅವಿರ್ಭಾವ, ಬಯಕೆ

೨೪. ಮಹಾತಾಯಿ ಆರ್. ಹೂಗಾರ್ - ಎಚ್ಚರಾಗಿರಿ, ಗಡಿನಾಡು

೨೫. ಮಂಗಲಾ ವಿ. ಕಪರೆ - ನನ್ನ ನಾಡು, ಕುಂಭಕೋಣಂ

೨೬. ಜಗದೇವಿ ವಲ್ಲಿಪುರೆ - ಈ ಶತಮಾನ, ಸಾರ್ಥಕ ಫಲ

೨೭. ಡಾ. ಪ್ರೇಮಾ ಸಿರ್ಸೆ - ಮುಡಿಪಾದ ಹೂ, ಚುಕ್ಕಿಗಳು

೨೮. ಕು. ಅಮೆರಮ್ಮ - ಗುರು, ನಿನ್ನಾಸರೆ

೨೯. ಡಾ. ಹೇಮಲತಾ ವಡ್ಡೆ - ದುಶ್ಚಟ, ಹಕ್ಕಿಯ ಮೊರೆ

೩೦. ಯಶೋದಮ್ಮ ಸಿದ್‌ಬಟ್ಟೆ - ಅಕ್ಕ , ಶಿವಲೀಲೆ

೩೧. ಸವಿತಾ ವಿಜಯಕುಮಾರ - ಹೆಣ್ಣು ಗಂಡಿನ ಮನ

ಈ ಮುಂತಾದ ಕವಯಿತ್ರಿಯರು ಪ್ರೀತಿ ಪ್ರೇಮ, ವಿರಹ, ಅನ್ಯಾಯ, ವಂಚನೆ, ಅತ್ಯಾಚಾರ, ದಬ್ಬಾಳಿಕೆಗಳ ಜೊತೆಗೆ ಕನ್ನಡ ನಾಡು, ನುಡಿ, ದೇಶಭಕ್ತಿ, ಭ್ರಷ್ಟಾಚಾರದ ವಿರುದ್ಧ ಆಕ್ರೋಶ, ಪರಿಸರದ ಕಾಳಜಿ, ದುಶ್ಚಟಗಳಿಂದ ಆಗುವ ಹಾನಿಯ ಕುರಿತು ಧ್ವನಿಯೆತ್ತಿದ್ದಾರೆ.

ಸಂಪಾದಕಿ ಯಶೋದಮ್ಮ ಸಿದ್‌ಬಟ್ಟೆಯವರು ಈ ಕವನ ಸಂಕಲನದಲ್ಲಿ ಅಮೇರಿಕಾದ ಫ್ಲೋರಿಡಾದಲ್ಲಿ ನಡೆದ ಆನೇ `ಅಕ್ಕ` ವಿಶ್ವ ಸಮ್ಮೇಳನದಲ್ಲಿ ಕವಿಗೋಷ್ಠಿಯಲ್ಲಿ ವಾಚನ ಮಾಡಿರುವ ಅಕ್ಕ ಕವನ ಪ್ರಕಟಿಸಿದ್ದಾರೆ.

`ಅಕ್ಕ` ಕವನ ಕನ್ನಡದ ಮೊದಲ ಕವಯಿತ್ರಿಯಾಗಿರುವ ಅಕ್ಕ ಮಹಾದೇವಿಯ ಜೀವನ ವೃತ್ತಾಂತದ ಮೇಲೆ ಬೆಳಕು ಚೆಲ್ಲುತ್ತದೆ. ಬಲವಂತದಿಂದ ಮದುವೆಯಾಗಲು ಬಯಸಿದ ಕೌಶಿಕನಿಗೆ ಅಕ್ಕ ಅವನಿಗೆ ಪಂಥಕ್ಕೆ ಒಡ್ಡುತ್ತಾಳೆ. ಈ ಷರತ್ತುಗಳಿಗೆ ಒಪ್ಪಿಯು ಕಾಮಾತುರತೆಯಲ್ಲಿ ಷರತ್ತು ಮುರಿಯುತ್ತಾನೆ. ಕೊಟ್ಟ ವಚನ ಮೀರಿ ವಚನ ಭ್ರಷ್ಟನಾದಾಗ ಎಲ್ಲವನ್ನು ಧಿಕರಿಸಿ ಈ ಮಹಿಳೆ ವೈರಾಗ್ಯ ವಿರಾಗಿಣಿಯಾಗುತ್ತಾಳೆ.

ಪ್ರಥಮ ಕವಯಿತ್ರಿ

ಮೊದಲ ಬಂಡಾಯಗಾರ್ತಿಯಾದಳ್ ಈ ಲೋಕದ ಆಶೆ ತೊರೆದು ಚೆನ್ನ ಮಲ್ಲಿಕಾರ್ಜುನನ ನೆನೆಯುತ್ತಾ ನಡೆದ ಅಕ್ಕ ಶರಣ ಸತಿ ಲಿಂಗಪತಿ ಎನ್ನುತ್ತಿದ್ದಳು ಅಲ್ಲಂ ಮೊದಲಾದವರಿಂದ ಸತ್ವಪರೀಕ್ಷೆಗೆ ಗುರಿಯಾಗಿ ಜಯಶಾಲಿಯಾಗುತ್ತಾಳೆ.

ಕವಯಿತ್ರಿ ಅಂದು, ಇಂದು ಗಳ ನಡುವೆ ಅಕ್ಕಳ ಸಾಮರಸ್ಯ ಮುಕ್ತವಾಗಿಸಿದ್ದಾಳೆ ಅಕ್ಕಳನ್ನು ವಿಶ್ವದ ಪ್ರಜೆಯಾಗಿ ಮಾಡಿದ್ದಾಳೆ.

ಸಪ್ತ ಸಾಗರಂ ದಾಟಿ

ಅಮೆರಿಕನ್ನರ ನಾಡಿನೇಳ್

ಕನ್ನಡ ಪತಾಕೆ ಹಾರಿಸಿದಳ.

ಅಕ್ಕಮಹಾದೇವಿ ಕನ್ನಡ ನಾಡಿಗೆ ಸೀಮಿತವಾಗದೆ ದೇಶದುದ್ದಕ್ಕ ಪಸರಿಸಿ ಮುಂದೆ ವಿಶ್ವಮಾನವಳಾಗಿಸಿದ್ದಾಳೆ ಕವಯಿತ್ರಿ ವಿಶ್ವವೇ ನನ್ನ ಮನೆ ಮಾನವ ಜನಾಂಗವೇ ನನ್ನ ಕುಟುಂಬ ಹೀಗೆ ಅಕ್ಕಳನ್ನು ವಿಶ್ವಮಾನವಳಾಗಿ ನೋಡುವ ಪ್ರಯತ್ನ ಕವನದಲ್ಲಿ ಕಂಡುಬಂದಿದೆ.

`ಶಿವಲೀಲೆ`ಎಂಬ ಇನ್ನೊಂದು ಅದ್ಭುತ ಕವನದಲ್ಲಿ ದೇವರ ಇರುವಿಕೆಯನ್ನು ಕಂಡುಕೊಳ್ಳುವ ಪ್ರಯತ್ನವಾಗಿದೆ. ಬದುಕಿನ ಸುತ್ತ ಹೆಣೆದ ಈ ಕವನದಲ್ಲಿ ಹೌದು ಅಲ್ಲಗಳ ನಡುವಿನ ಸಂವಾದ ಎಂಬಂತೆ ಚಿತ್ರೀಸಿದ್ದಾರೆ.

ಬಾಳು ಯಾರದು ಅಲ್ಲ, ಭವ್ಯತೆಯು ಇಲ್ಲಿ

ನಾನು ನೀನೂ ಅಲ್ಲ, ನೀನು ನಾನು ಅಲ್ಲ

ಅಲ್ಲ ಹೌದುಗಳ ಮಧ್ಯೆ ನಿಂತಾಗ

ಗೋಚರಿಸುವುದೇ ಕಾಣದ ಶಿವಲೀಲೆ

ಶಿವಲೀಲೆ ಎಂಬುದು ಎಲ್ಲೆಲ್ಲಿಯು ಕಾಣುವಂತಹದು ಮಾತಿನಲ್ಲಿ ಮೌನದಲ್ಲಿ, ಗಂಭಿರತೆಯಲ್ಲಿಯ ಕಾಣುತದೆಂದು ಹೇಳುತ್ತಾರೆ ಕವಯಿತ್ರಿ.

ಮಾತು ಮೌನ ನೋಟ ಶೂನ್ಯ

ಚೇತನ ಅಚೇತನಾ, ನಿದ್ರೆ ಚಿರನಿದ್ರೆ

ಕಾಣದಾ ಬಲೆ ಹಾಕಿದೆ ಮಾಲೆ

ಗಂಭೀರ ಮೌನದಲಿ ಹಾಡುವರು ಶಿವಲೀಲೆ.

ಹೀಗೆ ಶಿವಲೀಲೆ ಎಲ್ಲೆಲ್ಲಿಯೂ ಕಂಡುಬರುವಂತಹದೆಂದು ಸಾರಿ ಹೇಳಿದ್ದಾರೆ.

`ಬೀದರ ನಗರ` ಕವನದಲ್ಲಿ ಇಲ್ಲಿನ ನೆಲಜನದ ವರ್ಣನೆ ಅಪೂರ್ವವಾಗಿದೆ. ನದಿ ಬೆಳೆಯುವ ಬೆಳೆ ಹಬ್ಬಗಳು ಐತಿಹಾಸಿಕ ಸ್ಥಳಗಳು ಶರಣರ ಕವಿಗಳನ್ನು ಹೆಸರಿಸಿದ್ದಾರೆ. ಕನ್ನಡ ನಾಡು ಕವನದಲ್ಲಿ ಕನ್ನಡ ನಾಡನ್ನು ವೈಭವಿಕರಿಸಲಾಗಿದೆ. ಚಾಲುಕ್ಯ ಹೊಯ್ಸರಾಳಿದ, ನಾಡೊಂದು

ಝಾನ್ಸಿರಾಣಿ ಚೆನ್ನಮ್ಮ ಹೋರಾಡಿದ ನಾಡೆಂದು ಬಣ್ಣಿಸಿದ್ದಾರೆ. `ಗಡಿನಾಡು` ಕವನದಲ್ಲಿ ಜಿಲ್ಲೆಯ ಭಾಷೆಯ ಸ್ಥಿತಿಗತಿ, ಕಲೆ , ಭಕ್ತಿ ಚಿಂತನೆಗಳ ಜೊತೆಗೆ ಶತಾಯುಷಿ ಚನ್ನಬಸವ ಪಟ್ಟದೇವರ ನೆಲೆಸಿದ ಬೀಡೆಂದು ವರ್ಣಿಸಿದ್ದಾರೆ. `ನನ್ನ ನಾಡು` ಕವನ ಧಾರ್ಮಿಕ ಪುರುಷರಾದ ಬುದ್ಧ, ಬಸವ, ಅಕ್ಕಮಹಾದೇವಿರನ್ನು ಸ್ಮರಿಸಿ ರಾಷ್ಟ್ರ ನಾಯಕರಾದ ಗಾಂಧಿ, ನೆಹರು, ವಲ್ಲಭಾಯಿ, ಅಂಬೇಡ್ಕರರನ್ನು, ಚಿತ್ರಿಸಲಾಗಿದ್ದು ಅಬ್ದುಲ ಕಲಾಮರನ್ನು ಪರಮಾಣು ಜನಕರೆಂದು ಬಣ್ಣಿಸಿದ್ದಾರೆ. ಟ್ಯಾಗೋರರ ರಾಷ್ಟ್ರೀಗೀತೆ ಕೊಂಡಾಡಿದ್ದಾರೆ.

ಚೈತನ್ಯಶ್ರೀಯು ಅಲ್ಲಲ್ಲಿ ಪ್ರತಿಭಟನೆಯ ಧ್ವನಿ, ಸ್ತ್ರೀಶಕ್ತಿಯ ಕುರಿತಾದ ಕವನಗಳು ಮೂಡಿ ಬಂದಿವೆ. ಶಾಲೆಯಲ್ಲಿ ಬಿಸಿ ಊಟಕ್ಕಾಗಿ ಅಡಿಗೆ ಮಾಡುವ ಕಾರ್ಯ ಕೆಲವು ಶಾಲೆಗಳಲ್ಲಿ ಮಕ್ಕಳು ಮಾಡಬೇಕಾಗಿತ್ತು. ಗುರು ಆಜ್ಞೆ ಪಾಲಿಸಲು ಹೋದಳು ನಿಂತಲ್ಲಿಂದ ಕದಲ ಬೇಡಿ ಗುರುಗಳ ಕಟ್ಟಪ್ಪಗೆ ಇಂದಾಗಿ ಬೆಂಕಿಯ ಜ್ವಾಲೆಯಿಂದಾಗಿ ಬೆಂದು ಕರಕಲಾದ ಮಕ್ಕಳ ಕುರಿತಾದ ಆಕ್ರೋಶ ಕವನದಲ್ಲಿ ವ್ಯಕ್ತವಾಗಿದೆ. ಸ್ತ್ರೀಶಕ್ತಿ, ಸ್ತ್ರೀಯರಿಗೆ ಶಿಕ್ಷಣ ಕೊಡುವುದರ ಮಹತ್ವ `ಬಡವರ ಗೋಳು` ಇಲ್ಲಿ ಬಡರೈತನ ಕುಟುಂಬದ ವರ್ಣನೆ ಮೂಡಿಬಂದಿದೆ. ಬಸ್ಸಿನ ಕೊರತೆಯಲ್ಲಿ ಸರ್ಕಾರದ ಧೋರಣೆಯನ್ನು ವಿರೋಧಿಸಿದ್ದಾರೆ. ಏಳು ಎದ್ದೇಳು ಕೂಲಿ ನಾಲಿ ಕೆಲಸ ಮಾಡಿ ತಂದ ಹಣ ಕಸಿದುಕೊಂಡು ಕುಡಿದು ಬರುವ ಗಂಡನ ವಿರುದ್ಧದ ಆಕ್ರೋಶದ ಧ್ವನಿ ಕವನದಲ್ಲಿ ಮೂಡಿಬಂದಿದೆ.

ಚೈತನ್ಯಶ್ರೀ ಹಲವು ಕವಯಿತ್ರಿಯಿಂದ ಕೂಡಿದ ಕವನಸಂಕಲನವಾಗಿದ್ದು, ವಸ್ತು, ವಿಷಯ, ಭಾಷೆ, ಭಾವನೆ, ಆಶಯ, ಶೈಲಿಗಳ ದೃಷ್ಟಿಯಿಂದ ಕವನ ಸಂಕಲನ ಭಿನ್ನತೆಯಿಂದ ಕೂಡಿದ್ದು ವೈವಿಧ್ಯಮಯವಾಗಿದೆ. ಪ್ರಕೃತಿ, ಪ್ರೀತಿ, ಪ್ರೇಮ, ನಾಡು ನುಡಿ, ದಾಂಪತ್ಯ, ಗಂಡ, ಹೆಂಡತಿ, ಹುಟ್ಟು, ಸಾವು, ತಂದೆ, ತಾಯಿ, ಹೆಣ್ಣು, ಗಂಡುಗಳ ಆಕರ್ಷಣೆ, ಪ್ರಣಯ, ಕನಸ್ಸು ನನಸ್ಸು, ಬಯಕೆ, ನಿರಾಶೆ, ಯುದ್ಧ ಈ ಮೊದಲಾದ ಅಂಶಗಳನ್ನು ಒಳಗೊಂಡಿರುವ ಕವನ ಸಂಕಲನ ಜೊತೆಗೆ ಸ್ತ್ರೀಶಕ್ತಿ, ಸುನಾಮಿ, ಗಡಿನಾಡಿನ ಸಮಸ್ಯೆ, ಹಕ್ಕಿ, ಹೂವು, ಮೊದಲಾದ ವರ್ಣನೆ ಬಂದಿದೆ. ಇದರ ಜೊತೆಗೆ ಧಾರ್ಮಿಕ ಯುಗ ಪುರುಷರ ಸಾರ್ಥಕ ಬದುಕು ಅವರ ಆದರ್ಶಗಳ ಚಿಂತನೆ ಕವನಗಳಲ್ಲಿ ಮೂಡಿ ಬಂದಿದೆ. ಕನ್ನಡ ನಾಡು ನುಡಿಯ ಬಗ್ಗೆ ಚಿಂತನೆ ಭ್ರಷ್ಟಚಾರ, ಪರಸರ ದುಶ್ಚಟಗಳಿಂದ ಹಾನಿ ಆಗುತ್ತಿರುವ ಬಗ್ಗೆ ಕಾಳಜಿಯು ಕವಿತೆಗಳಲ್ಲಿ ಕಂಡುಬಂದಿದೆ. ಹೀಗೆ ವೈವಿಧ್ಯಮಯತೆಯಿಂದ ಕೂಡಿರುವ ಕವನಗಳಲ್ಲಿ ಧ್ವನಿ ಪೂರ್ಣತೆ, ವ್ಯಕ್ತಿ ವಿಶಿಷ್ಟತೆ, ಲವಲವಿಕೆ, ವ್ಯಂಗ ಕವಿತೆಗಳಲ್ಲಿ ಮೇಳೈಸಿದೆ. ಹಾಗೆಯೇ ಹೆಚ್ಚಿನ ಕವಿತೆಗಳು ವ್ಯಾಜದ ನೆಲೆಯಲ್ಲಿಯೇ ಇದ್ದು, ಪ್ರಾಸ ಲಯಗಳನ್ನು ಕಾಪಾಡಿಕೊಂಡಿವೆ.

ಕನ್ನಡ ನಾಡು ನುಡಿ ಕುರಿತಾದ ಚಿಂತನೆಗಳು ಕವನದಲ್ಲಿ ಮೊಳಗಿವೆ ಕರ್ನಾಟಕ ಮಾತೆ ಕವನದಲ್ಲಿ ಕಾವೇರಿ, ಮಲಪ್ರಭ, ತುಂಗೆ, ಘಟಪ್ರಭೆ ನದಿಗಳ ಹೆಸರು ನಾಡಿನಲ್ಲಿ ಬೆಳೆಯುವ ಕಥೆ,

ಬಾಳೆ, ಶ್ರೀಗಂಧ, ಕುರಿತು ಹೇಳಿ ಕುವೆಂಪು, ಬೇಂದ್ರೆ ಕಾರಂತ ಮೊದಲಾದ ಕವಿಗಳನ್ನು ಹೆಸರಿಸಿದ್ದಾರೆ. ಕಿತ್ತೂರು ಚೆನ್ನಮ್ಮ ಒನಕೆ ಓಬವ್ವ, ಬೆಳಡಿ ಮಲ್ಲಮ್ಮರನ್ನು ಉಲ್ಲೇಖಿಸಿ ಬೇಲೂರು ಹಳೆಬೀಡು, ಹಂಪಿ, ಶ್ರವಣ ಬೆಳಗೊಳ, ಬ್ರಂದಾವನ, ಜೋಗದ ವಿಸ್ಮಯ ಚಿತ್ರಿಸಿದ್ದಾರೆ.

ಚೈತನ್ಯಶ್ರೀ ಸಂಪಾದಿತ ಕವನ ಸಂಕಲನ ಸಾಮಾಜಿಕವಾಗಿ ಬೀದರ ಜಿಲ್ಲೆಯ ಮಹಿಳಾ ಸಾಹಿತಿಗಳು ವೈವಿಧ್ಯಮಯ ಕವನಗಳಿಂದ ಕೂಡಿರುವ ಕವನ ಸಂಕಲನ ಇದು. ಕಿರಿಯ ಹಾಗೂ ಮುಂಬರುವ ಮಹಿಳಾ ಸಾಹಿತಿಗಳಿಗೆ, ಬರಹಗಾರರಿಗೆ ಪ್ರೇರಣೆ ಒದಗಿಸಲಿದೆ. `ತಾವೇಕೆ ಬರೆಯಬಾರದು` ಎಂಬ ಪ್ರಶ್ನೆ ಒಡ್ಡುವ ಈ ಪ್ರಯತ್ನ ಜಿಲ್ಲೆಯ ಮಹಿಳಾ ಸಾಹಿತ್ಯವು ಕನ್ನಡ ಸಾಹಿತ್ಯ ಲೋಕಕ್ಕೆ ಕೊಟ್ಟ ದೊಡ್ಡ ಕೊಡುಗೆಯಾಗಿದೆ. ಕರ್ನಾಟಕ ಲೇಖಕಿಯರ ಸಂಘದ ಈ ಚಿಕ್ಕ ಪ್ರಯತ್ನ ಭಾವಿ ಕವಯಿತ್ರಿಯರಿಗೆ ನೆಲೆಯನ್ನು ಒದಗಿಸುವುದರ ಜೊತೆಗೆ ಪ್ರೇರಣಾ ಶಕ್ತಿ ನೀಡಬಲ್ಲ ಕೃತಿಯಿಂದ ಪ್ರೇರಿತ ಮಹಿಳೆಯರು ಸಾಹಿತ್ಯರಚನೆಗೆ ತೊಡಗುವಲ್ಲಿ ಆಶ್ಚರ್ಯಪಡಬೇಕಾಗಿಲ್ಲ.

**ಸಾಹಿತ್ಯ ಸೌರಭ :**

ಯಶೋದಮ್ಮ ಸಿದ್‌ಬಟ್ಟೆರವರ ಈ ಕೃತಿಯು ಸಂಪಾದನೆ ಸಾಹಿತ್ಯ ಪ್ರಕಾರವಾಗಿದೆ. `ಚೈತನ್ಯಶ್ರೀ` ಎಂಬ ಸಂಪಾದಿತ ಕವನ ಸಂಕಲನ ಹೊರ ತಂದಿದ ಇವರು ಸಾಹಿತ್ಯ ಸೌರಭ ಎಂಬ ಬೀದರ ಜಿಲ್ಲೆಯ ಏಳು ಜನ ಪ್ರಮುಖ ಮಹಿಳಾ ಸಾಹಿತಿಗಳಿಂದ ಎರಡೆರಡು ಗಂಭೀರ ಚಿಂತನಾ ವಸ್ತು ವೈವಿದ್ಯತೆಯನ್ನು ಒಳಗೊಂಡ ಕೃತಿ ಹೊರತಂದಿದ್ದಾರೆ. ಸ್ವತಃ ಸಾಹಿತಿಗಳಾಗಿರುವ ಯಶೋದಮ್ಮ ಸಿದ್‌ಬಟ್ಟೆರವರು ಜಿಲ್ಲೆಯಲ್ಲಿ, ರಾಜ್ಯದಲ್ಲಿ ಹೆಸರು ಮಾಡಿರುವ ಸಾಹಿತಿಗಳಾಗಿದ್ದಾರೆ. ಬೀದರ ಜಿಲ್ಲೆಯಲ್ಲಿ ಕರ್ನಾಟಕ ಮಹಿಳಾ ಲೇಖಕಿಯರ ಸಂಘ ಸ್ಥಾಪಿಸಿ ಇದರ ಮೂಲಕ ಅನೇಕ ಕವಯತ್ರಿ ಹಾಗೂ ಲೇಖಕಿಯರಿಗೆ ಪ್ರೇರಣೆ ನೀಡಿ ಅವರಲ್ಲಿನ ಬರವಣಿಗೆಯ ಸಾಮರ್ಥ್ಯಕ್ಕೆ ನೀರು ಗೊಬ್ಬರ ಹಾಕಿದ್ದಾರೆ.

ಜಿಲ್ಲೆಯ ಮಹಿಳೆಯರ ಬಗ್ಗೆ ಅಪಾರ ಗೌರವ ಹೊಂದಿರುವ ಲೇಖಕಿ, ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ವಿಚಾರ, ಚಿಂತನೆಗೆ ಪ್ರೋತ್ಸಾಹ ಪ್ರೇರಣೆ, ಹಾಗೂ ಚೈತನ್ಯ ತುಂಬುವ ಕೆಲಸ ಮಾಡುತ್ತಾ ಬಂದಿದ್ದಾರೆ. ಸ್ತ್ರೀಯರು ನಾವು ಬರೆಯ ಬಲ್ಲೇವು ಎಂಬುದರ ಹಂಬಲ, ತುಡಿತ ಸಂಪಾದಕಿಯಲ್ಲಿ ಕಂಡುಬರುತ್ತಿದೆ. ವೇದಕಾಲದಲ್ಲಿ ಮಹಿಳೆ ಸಭೆ, ಸಮಾರಂಭಗಳಲ್ಲಿ ಭಾಗವಹಿಸುವ, ವಿದ್ವತ್‌ಪೂರ್ಣ ಗೋಷ್ಠಿಗಳನ್ನು ನಡೆಸುವ, ಚರ್ಚಿಸುವ, ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಸ್ವಾತಂತ್ರ್ಯತೆ, ಸಮಾನತೆಯನ್ನು ಪಡೆದಿದಳು. ಅನೇಕ ಶತಮಾನಗಳ ನಂತರ ಮತ್ತೇ ಮಹಿಳೆ ಮಾತನಾಡುವ, ಬರೆಯುವ ಅವಕಾಶ ಪಡೆದ್ದು ಹನ್ನೆರಡನೆಯ ಶತಮಾನದಲ್ಲಿ ಜಿಲ್ಲೆಯ ಸಾಹಿತಿಕ ಬೆಳವಣಿಗೆ ತೃಪ್ತಿಯುತವಾಗಿಲ್ಲ ಎನ್ನುವಲ್ಲಿ ಮಹಿಳಾ ಸಾಹಿತ್ಯದ ಕೊರತೆ ಮತ್ತಷ್ಟು ಹೆಚ್ಚಾಗಿ ಕಂಡುಬರುತ್ತದೆ.

ಸಾಹಿತ್ಯ ಸೌರಭ ಎಂಬ ಈ ಸಂಪಾದನಾ ಕೃತಿಯು ಗಾತ್ರದಲ್ಲಿ ಚಿಕ್ಕದಾಗಿದ್ದರು ಇದೊಂದು ಮಹತ್ವಪೂರ್ಣ ಕೃತಿಯಾಗಿ ಕಂಡುಬರುತ್ತದೆ. ಒಟ್ಟು ಏಳು ಜನ ಲೇಖಕಿಯರಿಂದ ಬರೆಯಲ್ಪಟ್ಟಿರುವ. ಒಟ್ಟು ಹನ್ನೆರಡು ಲೇಖನಗಳಿಂದ ಕೂಡಿದೆ. ಇದು ಜಾಣಗೆರೆ ವೆಂಕಟರಾಮಯ್ಯ ನವರ ಬೆನ್ನುಡಿಯಿಂದ ಕೂಡಿದ್ದು, ಕರ್ನಾಟಕ ಲೇಖಕಿಯರ ಸಂಘ (ರಿ) ಬೀದರ ಇವರಿಂದ ಪ್ರಕಟವಾದ ಈ ಕೃತಿಯು ಇದರ ಅಧ್ಯಕ್ಷರಾದ ಶ್ರೀಮತಿ ಯಶೋದಮ್ಮ ಸಿದ್‌ಬಟ್ಟೆರವರ ಅಧ್ಯಕ್ಷರ ನುಡಿಯು ಒಳಗೊಂಡಿದೆ. ಹಾಗೆಯೇ ಸಾಹಿತ್ಯ ಸೌರಭದಲ್ಲಿ ಲೇಖನಗಳನ್ನು ಬರೆದಿರುವ ಏಳು ಜನ ಮಹಿಳಾ ಸಾಹಿತಿಗಳ ವ್ಯಕ್ತಿ ಪರಿಚಯ ಭಾವಚಿತ್ರದೊಂದಿಗೆ ನೀಡಲಾಗಿದೆ.

ಶ್ರೀಮತಿ ಅರುಣ ಎಸ್. ರವರು ಎರಡು ವೈವಿಧ್ಯಮಯ ಲೇಖನ ಮಂಡಿಸಿದ್ದಾರೆ, ಅಕ್ಕಮಹಾದೇವಿಯ ವಚನಗಳಲ್ಲಿ ಶರಣಸತಿ ಲಿಂಗಪತಿ ಭಾವ ಲೇಖನದಲ್ಲಿ ಹನ್ನೆರಡನೆ ಶತಮಾನದಲ್ಲಿ ವಚನಕಾರರ ದೃಷ್ಟಿಯಲ್ಲಿ ಗಂಡು ಹೆಣ್ಣಿನ ಪರಿಕಲ್ಪನೆ ಕುರಿತು ಅಕ್ಕಮಹಾದೇವಿಯ ವಚನಗಳನ್ನು ಆಧಾರವಾಗಿಟ್ಟುಕೊಂಡು ನೋಡಲಾಗಿದೆ. ಶರಣರ ದೃಷ್ಟಿಯಲ್ಲಿ ಸತಿ ಪತಿಯ ಭಾವದ ವೈಚಾರಿಕ ಚಿಂತನೆ ಇಲ್ಲಿ ನಡೆದಿದೆ. ಇನ್ನೊಂದು ಲೇಖನದಲ್ಲಿ ಜಾನಪದ ಸಾಹಿತಿ ಸಿಂಪಿ ಲಿಂಗಣ್ಣನವರ ಗರತಿಯ ಹಾಡು, ಜನಾಂಗದ ಜೀವಾಳ, ಹೆಡಿಗೆಯ ಜಾತ್ರೆ ಗಾದೆಗಳ ಗಾರುಡಿ ಜೊತೆಗೆ ಸಿಂಪಿಲಿಂಗಣ್ಣನವರ ಹೆಣ್ಣು ಮಕ್ಕಳಿಗೆ ಸಂಭಂದಿಸಿದ, ಕೃಷಿ , ಅನುಭವ ನೀತಿ, ಅನೀತಿಗೆ ಸಂಭಂಧಿಸಿದ ಕೃತಿ ಗಾದೆಗಳು ಸಂಗ್ರಹಿಸಲಾಗಿದೆ.

ಮಹಿಳಾ ಸಬಲೀಕರಣ ಎಂಬ ಲೇಖನವು ಬುನಾದಿ ಕಾಲದಿಂದಲೂ ಸ್ತ್ರೀಯು ಹೇಗೆ ಕಾಲದ ತುಳಿತಕ್ಕೆ ಒಳಗಾಗುತ್ತಿದ್ದಾಳೆ ಮನು, ಯಜ್ಞವಲ್ಕ ಮಹಾಭಾರತದ ವೇದಗಳ ಕಾಲದಲ್ಲಿ ಮಧ್ಯಕಾಲಿನ ಭಾರತದಲ್ಲಿ ಮಹಿಳೆಯ ಬಗೆಗೆ ಇವರುಗಳ ವಕ್ರದೃಷ್ಟಿಯ ಉಲ್ಲೇಖ ಇಲ್ಲಿದೆ. ಕ್ರಿ. ಶ. ೨೦೦೧ ನೇ ವರ್ಷವನ್ನು ಮಹಿಳಾ ಶಸಕ್ತೀಕರಣ ವರ್ಷವೆಂದು ತೀರ್ಮಾನಿಸಿರುವ ವಿಷಯ ಭಾರತದಲ್ಲಿ ಹೆಣ್ಣಿನ ಶೋಷಣೆ, ಕಿರುಕುಳ, ಹೆಣ್ಣು ಭ್ರೂಣ ಹತ್ಯೆ ವಿರೋಧಿಸುವ ಮನೋಭಾವ ಹೊಂದಿರುವ ಲೇಖನದಲ್ಲಿ ಶಶಿರೇಖಾ ಸಲಲೋಮನ ವ್ಯಕ್ತಪಡಿಸಿದ್ದಾರೆ.

ಪ್ರೋ. ಭಾಗಿರಥಿ ಕೊಂಡ ವೈಚಾರಿಕತೆ ಹಾಗೂ ವಚನ ಸಾಹತ್ಯವೆಂಬ ಲೇಖನದಲ್ಲಿ ವಚನಕಾರರಲ್ಲಿ ಕಂಡು ಬಂದ ವೈಚಾರಿಕತೆಯನ್ನು ಮೇಲೆತ್ತುವ ಕಾರ್ಯ ಮಾಡಿದ್ದಾರೆ. ಪರಂಪರೆಯ ಪ್ರತಿರೋಧ ಇವರ ಕೃತಿಯುದ್ದಕ್ಕೂ ಕಂಡುಬಂದಿದೆ. ವಚನಕಾರರ ವಚನಗಳ ಆಶಯವಾದ ಜೀವನದ ಶೋಧನೆ, ವೃಷ್ಠಿ ಜೀವನದಂತೆ ಸಮಷ್ಠಿ ಜೀವನದ ಒಳಿತನ್ನು ಸಾಧಿಸುವ ಗುರಿ ಕುರಿತು ಚರ್ಚಿಸಿದ್ದಾರೆ. ಇನ್ನೊಂದು ಲೇಖನ ರಾಘವಾಂಕನ ಹರಿಶ್ಚಂದ್ರ ಕಾವ್ಯ ವೈಶಿಷ್ಟತೆ ಕುರಿತು ಚರ್ಚಿಸಿದ್ದಾರೆ. ಅರಸ ವಿಶ್ವಾಮಿತ್ರರ ಸಂಭಾಷಣೆ ಅಲ್ಲಲ್ಲಿ ಚಿತ್ರಿಸಿದ್ದಾರೆ.

ಪ್ರೊ. ಲೀಲಾವತಿ ನಿಂಬೂರೆ ಡಾ. ಶೈಲಜಾ ಉಡಚಣ ಬದುಕು ಬರಹ ಕುರಿತು ಬರೆದ ಲೇಖನದಲ್ಲಿ ಹೈದ್ರಾಬಾದ ಕರ್ನಾಟಕ ಪ್ರದೇಶದ ಹೆಮ್ಮೆಯ ಕವಿಚೇತನ ಡಾ. ಶೈಲಜಾ ಉಡಚಣರ ಸಾಹಿತ್ಯ ಸೇವೆಯನ್ನು ಸ್ಮರಿಸುವ ಲೇಖನ ಇದಾಗಿದೆ.

ಡಾ. ಹೇಮಲತಾ ವಡ್ಡೆ ತಮ್ಮ ಎರಡು ಲೇಖನಗಳಲ್ಲಿ ಸ್ತ್ರೀಯನ್ನು ವಚನಕಾರರು ಹಾಗೂ ಜನಪದಿಯರು ಹೇಗೆ ಬಳಸಿಕೊಂಡಿದ್ದಾರೆ ಎಂಬುವ ಅಂಶದ ಬಗ್ಗೆ ವಿಚಾರ ಪ್ರಸ್ತಾಪಿಸಿದ್ದಾರೆ. ಬಸವ ಯುಗ ಮಹಿಳೆಗೆ ಧಾರ್ಮಿಕ , ಸಮಾಜಿಕ , ರಾಜಕೀಯ ಮತ್ತು ಆರ್ಥಿಕ ದೃಷ್ಟಿಕೋನಗಳಿಂದ ಭಾರತೀಯ ನಾರಿಗೆ ಮೇಲಸ್ತರಕ್ಕೆ ತಂದಿರುವ ಉಲ್ಲೇಖವಿದೆ. ಸಿಂಹಾಸನಾಧಿಪತಿ ಅಲ್ಲಮ ಪ್ರಭುಗಳು ಹೇಳುವಂತೆ ``ಹೆಣ್ಣು ಮಾಯೆಯಲ್ಲ, ಹೊನ್ನು ಮಾಯೆಯಲ್ಲಾ` ಮಣ್ಣು ಮಾಯೆಯಲ್ಲ ಮನದ ಮುಂದಣ ಆಸೆಯೇ ಮಾಯೆ ಎಂದಿದ್ದಾರೆ``[1] ಅಕ್ಕಮಹಾದೇವಿ ಲೋಕದ ಗಂಡರನೊಯ್ದು ಒಲೆಯೊಳಗಿಕ್ಕ ಎಂಬುವಲ್ಲಿ ಸ್ತ್ರೀಪರ ಕಾಳಜಿ ಎದ್ದು ಕಾಣುತ್ತವೆ. ಸಿದ್ಧರಾಮ ಹೆಣ್ಣು ಸಾಕ್ಷಾತ ಕಪಿಲಸಿದ್ದು ಮಲ್ಲಿಕಾರ್ಜುನ ಎಂದಿದ್ದಾರೆ. ಹೀಗೆ ಅನೇಕ ವಚನಕಾರರು ಸ್ತ್ರೀಯರ ಬಗ್ಗೆ ಹೊಂದಿರುವ ಅಭಿಪ್ರಾಯ ವ್ಯಕ್ತಪಡಿಸಿದಂತೆ ಇನೊಂದು ಲೇಖನ ಜಾನಪದ ಹಾಡಿನಲ್ಲಿ ಸ್ತ್ರೀ ಜೀವನ ವೈವಿಧ್ಯತೆಯಲ್ಲಿ ಜಾನಪದ ಸ್ತ್ರೀಯ ಪರಿಕಲ್ಪನೆ ಮಾಡಿದೆ. ಜಾನಪದ ಗೀತೆಗಳು, ಲಾವಣಿಗಳು, ಸೋಬಾನಪದ, ಜೋಗುಳಹಾಡುಗಳು ತ್ರಿಪದಿಗಳ ರೂಪದಲ್ಲಿ ಹಾಡಲ್ಪಟ್ಟ ಹಾಡುಗಳು ಹಳ್ಳಿಯ ಜನರ ಬಾಳಿನ ತೆರೆದಿಟ್ಟ ಪುಸ್ತಕದಂತಿರುವ ಹಾಡುಗಳು ಒಂದು ಜನಾಂಗದ ಮನಸೆ ಮಾತಾಡುತ್ತದೆ. ಅಕ್ಕ -ತಂಗಿ, ತಾಯಿ -ಮಗಳು, ಅತ್ತೆ-ಸೊಸೆ, ಸತಿ-ಪತಿ ಹೀಗೆ ಜಾನಪದದಲ್ಲಿಯ ಹೆಣ್ಣಿನ ಪಾತ್ರ ಚಿತ್ತಾರ ಕಂಡುಬರುತ್ತದೆ.

ಮಹಿಳೆಯನ್ನು ವೈವಿದ್ಯೆಮಯವಾಗಿ ಚಿತ್ರಿಸಲಾಗಿರುವ ವಿವಿಧ ಲೇಖನಗಳಲ್ಲಿ ಶ್ರೀಮತಿ ಕಸ್ತೂರಿ ಎಸ್ ಪಟಹಳ್ಳಿ ಜಾಹಿರಾತಿನಲ್ಲಿ ಮಹಿಳೆ ಎಂಬ ಲೇಖನದಲ್ಲಿ ಪ್ರಚಾರ ಮಾಧ್ಯಮಗಳಾದ ದೂರದರ್ಶನ, ರೇಡಿಯೋ, ಪತ್ರಿಕೆ, ಭಿತ್ತಿ ಪತ್ರಗಳಲ್ಲಿ. ಆಧುನಿಕ ಜಗತ್ತಿನಲ್ಲಿ ಪ್ರತಿಯೊಂದು ವಸ್ತುವಿನ ಮಾರಾಟವು ಜಾಹಿರಾತುಮಯವಾಗಿದೆ. ಈ ಜಾಹಿರಾತುಗಳು ಪೆಣ್ಣುಗಳನ್ನು ಜಾಹಿರಾತುಗಳ ಪ್ರಚಾರ ಮಾಧ್ಯಮವನ್ನಾಗಿಸಿವೆ. ಕಾರಣ ಹೆಣ್ಣಿನ ದೈಹಿಕ ಆಕರ್ಷಣೆ, ಚೆಲುವು, ಮಾದಕನೋಟ, ಸೌಂದರ್ಯದ ಖಣಿ, ಶೃಂಗಾರ ವಾಹಿನಿಯಾಗಿರುವುದು. ಹಾಗೆಯೇ ಬೇಂದ್ರೆ ಸಾಹಿತ್ಯದಲ್ಲಿ ಸ್ತ್ರೀ ಲೇಖನದಲ್ಲಿ ಜಾನಪದವನ್ನು ಸಾರಸತ್ವಯುತವಾಗಿ ಬಳಸಿಕೊಂಡಿರುವ ಕವಿ ಅಂಬಿಕಾತನಯದತ್ತ ಕಾವ್ಯ ನಾಮದ ದ.ರಾ.ಬೇಂದ್ರೆ ತಮ್ಮ ಸಾಹಿತ್ಯದುದ್ದಕ್ಕೂ ಸ್ತ್ರೀಯನ್ನು ವೈವಿದ್ಯಮಯವಾಗಿ ಚಿತ್ರಿಸಿದ್ದಾರೆ. ಹೆಣ್ಣು ಎಂದರೆ ತಾಯಿ ತಾಯಿಯ ವಿವಿಧ ರೂಪವೇ ಹೆಣ್ಣಾಗಿ ಅಕ್ಕ , ತಂಗಿ, ಹೆಂಡತಿ, ಮಗಳು, ಇನ್ನೂ ಅನೇಕ ಮುಖಗಳನ್ನು ಪರಿಚಯಿಸಿದ್ದಾರೆ.

---

1. ವೈಚಾರಿಕ ಲೇಖನಗಳು -ಡಾ. ಶಾಂತಿನಾಥ ದಿಬ್ಬದ ಪು.ಸಂ.

[1]ಭೂಮಿ ತಾಯಿಯಂತೆ ನಿನಗೆ

ತಾಳ್ಮೆಯೊಂದೆ ಬಾಳ್ಮೆಯಹುದು.

ಹೆಣ್ಣಿನ ತಾಳ್ಮೆಗೆ ಗರಿಕಟುವ ಬೇಂದ್ರೆಯವರು ನಿಸ್ವಾರ್ಥ ಜೀವಿಯಾಗಿದ್ದಾರೆ. ಹೀಗೆ ಬೇಂದ್ರೆ ತಮ್ಮ ಕಾವ್ಯದಲ್ಲಿ ಮತ್ತು ಸಾಹಿತ್ಯದಲ್ಲಿ ಸ್ತ್ರೀಯನ್ನು ವೈವಿಧ್ಯಮಯವಾಗಿ ಬಳಸಿಕೊಂಡಿದ್ದಾರೆ. [1]ಕವನಗಳಲ್ಲಿ ಮಾನವನ ಪಂಚೇಂದ್ರಿಯಗಳನ್ನು ತೃಪ್ತಿಪಡಿಸುವ ಶಕ್ತಿ ಇದೆ. ಬೇಂದ್ರೆ ತಮ್ಮ ಸಾಹಿತ್ಯದಲ್ಲಿ ಸ್ತ್ರೀಯನ್ನು ವಿವಿಧ ರೂಪದಲ್ಲಿ ಚಿತ್ರಿಸಿದ್ದಾರೆ.

ಸಾಹಿತ್ಯ ಸೌರಭ ಕೃತಿಯ ಸಂಪಾದಕಿಯಾಗಿರುವ ಯಶೋದಮ್ಮ ಸಿದ್‌ಬಟ್ಟೆರವರು ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯ ಬರಹಗಳು ಲೇಖನ ಸೃಜನಶೀಲತೆಗೆ ಪ್ರೋತ್ಸಾಹಿಸುವ ಗುಣ ಹೊಂದಿದೆ.

**ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರ ಬರಹಗಳು :**

ಮಹಿಳೆಯು ಒಬ್ಬ ಸಂಘ ಜೀವಿ, ಸಮಾಜದ ಸದಸ್ಯೆ. ಸಮಾಜ ಜೀವಿಯಾದ ಮನುಷ್ಯರ ಮೇಲೆ ಸಮಾಜ ವ್ಯವಸ್ಥೆಯ ಪರಿಣಾಮ ಬೀರುವುದು ನಿಶ್ಚಿತ. ಭಾರತೀಯ ಮಹಿಳೆಯ ಮೇಲೆ ಆತಂಕ , ಭಯ, ಕೊಲೆ , ಸುಲಿಗೆ, ಅವಮಾನ, ಅತ್ಯಾಚಾರ ಇವೆಲ್ಲವುಗಳ ಜೊತೆಗೆ ಬಾಲ್ಯವಿವಾಹ, ವಿಧವಾ ಮರುವಿವಾಹದ ನಿರ್ಭಂಧ, ಸ್ತ್ರೀ ಶೋಷಣೆ, ಕುಡುಕ ಗಂಡ, ಶ್ರೀಮಂತ ಕಾಮಿಗಳು, ರಾಜಕಾರಣಿಗಳ ಅಟ್ಟಹಾಸ, ಹಿಂಸೆ, ಆತ್ಮಹತ್ಯೆ ಈ ಮೊದಲಾದ ಅಂಶ ಪ್ರಭಾವ ಬೀರಿವೆ. ಈ ಸಾಮಾಜಿಕ ವ್ಯವಸ್ಥೆಯು ಮಹಿಳೆಯರ ಬರಹಗಳಿಗೂ ಇತಿ ಮಿತಿಗಳನ್ನು ಹಾಕಿದೆ. ನಮ್ಮ ದೇಶದ ಸ್ತ್ರೀಪರವಾದ ಹೋರಾಟ, ಚಿಂತನೆ, ಚಳುವಳಿ, ಸಂವಿಧಾನಾತ್ಮಕ ಪರಿಹಾರ ಮುಂತಾದವು ಮಾನವತಾವಾದಿ ಪುರುಷರಿಂದಲೇ ಆರಂಭಗೊಂಡಿವೆ. ಇವೆಲ್ಲವು ಚಿಂತನೆಗಳ ಹಿಂದೆ ಆಂಗ್ಲ ಶಿಕ್ಷಣದ ಪ್ರಭಾವ ಲೇಖಕಿ ಎತ್ತಿ ಹಿಡಿದಿದ್ದಾರೆ. ಭಾರತೀಯ ಸಮಾಜ ಮಹಿಳೆಯನ್ನು ಶಿಕ್ಷಣದಿಂದ ದೂರ ಮಾಡಿದೆ. ನಂತರ ಮಹಿಳೆಯರಿಗೆ ಆಂಗ್ಲರ ಪ್ರೋತ್ಸಾಹ ಮುಕ್ತ ಕಂಠದಿಂದ ಹೊಗಳಿದ್ದಾರೆ. ಪುರುಷ ವರ್ಗ ಮಹಿಳೆಗೆ ಬರೆಯಲು ಅವಕಾಶ ನೀಡಿದ್ದಾಗ ಪುರಾಣ, ಇತಿಹಾಸ, ಧರ್ಮಗಳಿಗೆ ಸಂಭಂಧಿಸಿದಂತೆ ಬರಹಗಳು ಮೂಡಿಬಂದವು.

ಲೇಖಕಿ ಸಾರ್ವಜನಿಕ ಸತ್ಯ ಹೇಳವಲ್ಲಿ ಎತ್ತಿದ ಕೈಯಾಗಿರುವುದು ತೋರಿಸಿಕೊಟ್ಟಿದ್ದಾರೆ. ಸ್ತ್ರೀಯರ ಬರಹ ಪುರುಷರ ಬರಹದ ನಡುವಿನ ಅಂತರ ಗುರುತಿಸುವ ಕಾರ್ಯ ಮಾಡಿದ್ದಾರೆ. ಪುರುಷರ ಬರಹದಲ್ಲಿ ಸ್ಥಿರತೆ, ಖಚಿತತೆ, ನಿರ್ದೇಶನ, ಅಧಿಕಾರಕ ಪದಗಳು ಗೋಚರಿಸಿದರೆ ಮಹಿಳೆಯರ ಬರಹಗಳು ಅಸ್ಪಷ್ಟತೆ, ವಿಧೇಯತೆ, ನಿರೀಕ್ಷೆ, ಅನುಮೋದನೆ ಮೊದಲಾದವುಗಳ ಸುಳಿವು ಕಾಣುತ್ತೇವೆ. ಮಹಿಳೆ ತನ್ನ ನಿಲುವನ್ನು ಸಮರ್ಥಿಸಿಕೊಳ್ಳಲು ಕೇಳದೆ ಹೇಳುವ ತವಕ

1. ಬೇಂದ್ರೆ ಸಾಹಿತ್ಯ ಸಮಾಲೋಚನೆ ಸಂ. -ಡಾ. ರಾ.ಗೌ.

ವ್ಯವಸ್ಥೆಯಲ್ಲಿ ಅವಳಿಗೆ ಅನಿವಾರ್ಯತೆ ಇರುವ ಅಂಶ ವ್ಯಕ್ತಪಡಿಸಿದ್ದಾರೆ. ಸ್ವಾತಂತ್ರ್ಯದ ನಂತರ ಮಹಿಳೆಗೆ ಶಿಕ್ಷಣದಲ್ಲಿನ ಮುಕ್ತ ಅವಕಾಶ ಮಹಿಳೆಯರು ಪಡೆಯಲು ಮುಂದೆ ಬಂದು ಸಾಹಿತ್ಯ ರಚನೆ, ಸಂಶೋಧನೆಗೆ ತಳಹದಿ ಎಂಬ ಅಂಶದ ಸತ್ಯಾಂಶ ಸ್ಪಷ್ಟಪಡಿಸಿದ್ದಾರೆ. ಹಾಗೆಯೇ ಇಂದು ಮಹಿಳೆ ಶಾಸ್ತ್ರ ಸಂಬಂಧ ವೈದ್ಯಕೀಯ, ವಿಜ್ಞಾನ, ಕಾನೂನು , ವಾಸ್ತು, ತಂತ್ರಜ್ಞಾನ ಅರಕ್ಷಕ, ವೈಮಾನಿಕ ಮುಂತಾದ ಕ್ಷೇತ್ರದಲ್ಲಿನ ಕೊಡುಗೆ ಕಂಠಪೂರ್ಣವಾಗಿ ಹೊಗಳಿದ್ದಾರೆ.

ನಮ್ಮ ದೇಶದ ಸತ್ಯ-ಧರ್ಮ ದಿವ್ಯಮಂತ್ರ ಸಾರುವ ಮಹಾಭಾರತದಲ್ಲಿ ಹೆಣ್ಣೆಂದರೆ ಕೆಡುಕಿನ ಮೂಲ ಎಂದು ಕರೆಯಲಾಗಿದೆ. ಭಗವದ್ಗೀತೆ ಹೆಣ್ಣು ಪಾಪಿ, ಗುಲಾಮಳು ಎಂದಿದೆ. ಮನು ಸ್ಮೃತಿಕಾರ ಹೆಣ್ಣನ್ನು ಅನುಮಾನದ ದೃಷ್ಟಿಯಿಂದ ನೋಡಿದ್ದಾನೆ. ಇದರ ಮಧ್ಯೆ ಕುಂಟುತ್ತಾ ನೆರಳುತ್ತಾ ಆಂಗ್ಲರ ಪ್ರೋತ್ಸಾಹ, ಸ್ವಾತಂತ್ರ್ಯ ನಂತರದ ಅವಕಾಶದ ಸದುಪಯೋಗ ಪಡೆದು ಮುಂದೆಬಂದಂತೆ ಎಂಬತ್ತರ ದಶಕದಲ್ಲಿ ಸ್ತ್ರೀವಾದಿ ಚಿಂತನೆಯ ಗಾಳಿ ಬೀಸಿ ನಂತರ ಪ್ರಬುದ್ಧವಾಗಿ ಸ್ತ್ರೀವಾದಿ ವಿಮರ್ಶೆ ವಿಶ್ಲೇಷಣೆಗಳು ವ್ಯಾಪಿಸಿದವು. ಈ ಹಿಂದೆ ನೆಲೆಯೂರಿದ ಅನಿಷ್ಠ ಹಾಗೂ ಕ್ರೂರ ಸಾಮಾಜಿಕ ಪದ್ಧತಿ ವಿರುದ್ಧ ಚರ್ಚೆ, ಹೋರಾಟ, ನಡೆಯಲು ಸಾಧ್ಯವಾಯಿತು. ಮಹಿಳಾ ಅಭಿವ್ಯಕ್ತಿಯ ಮೇಲೆ ಸಾಮಾಜಿಕ ವ್ಯವಸ್ಥೆಯ ಭದ್ರಮುಷ್ಠಿಯ ಬಲವನ್ನು ವ್ಯಾಖ್ಯಾನಿಸಲು ಮತ್ತು ವಿಶ್ಲೇಷಿಸಲು ಸಾಧ್ಯವಾಯಿತು.

ಅನೇಕ ವ್ಯವಸ್ಥೆಯ ಮಧ್ಯೆ ಸಿಲುಕಿದ ಮಹಿಳೆಯರ ಬರಹಗಳು [1]ವಾಸ್ತವ ಬದುಕು ಸಂಕೀರ್ಣಗಳಿಂದ ತುಂಬಿರುವಾಗ ಸಮಕಾಲಿನ ಸಂಗತಿಗಳು ಅಂತರಂಗಕ್ಕಿಳಿದು ಪಾಕಗೊಂಡು ಅಭಿವ್ಯಕ್ತಗೊಂಡಾಗ ಸಾರ್ಥಕ ಸಾಹಿತ್ಯ ಮೈದಳಿಯುತ್ತದೆ. ವಾಸ್ತವದ ಅನುಭವಗಳು ಸೃಜನಶೀಲ ಮನಸ್ಸಿನಲ್ಲಿ ಪ್ರತಿಮೆಗಳ ಮೂಲಕ ವ್ಯಕ್ತವಾಗುತ್ತದೆ. ವ್ಯಕ್ತಿಗೆ ಆರ್ಥಿಕ ಭದ್ರತೆ ಅವಶ್ಯಕವಾಗಿ ಬೇಕು. ಈ ಸ್ವಾತಂತ್ರ್ಯ ಸಿಕ್ಕಾಗ, ಮಹಿಳೆಯ ಸಂವಾದ, ಆದಾಯ ಹೆಚ್ಚಾಗಿ ಮಹಿಳೆ ಕುಟುಂಬದ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದ್ದಾಗ ದೇಶದ ಆದಾಯ ಹೆಚ್ಚಿಸುವಲ್ಲಿ ಮಹಿಳೆ ಪ್ರಮುಖ ಪಾತ್ರಧಾರಿಯಾಗಬೇಕೆಂಬ ನಿಲುವು ಈ ಲೇಖನದಲ್ಲಿ ಯಶೋದಮ್ಮ ಸಿದ್‌ಬಟ್ಟೆ ವ್ಯಕ್ತಪಡಿಸಿದ್ದಾರೆ.

ಹೀಗೆ ಭಾರತೀಯ ಸುಶಿಕ್ಷಿತ ಮಹಿಳೆ ಪುರಾಣ, ಇತಿಹಾಸ, ಧರ್ಮಕ್ಕೆ ಸಂಬಂಧಿಸಿದ ಬರವಣಿಗೆಗೆ, ಸೀಮಿತವಾಗಿರಿಸಿಕೊಂಡವಳು ಇಂದು ಚಿಂತನೆ, ವಿಮರ್ಶೆ, ಸಂಶೋಧನೆ, ವೈಚಾರಿಕತೆಯ ಕುರಿತು ವ್ಯವಸ್ಥೆಯ ವಿರುದ್ಧ ಬರೆಯಲು ಮುಂದಾಗಿದ್ದಾಳೆ. ಮಹಿಳೆಯರು ತಾವು ಮುಂದೆ ಬರಬೇಕೆಂಬ ಸಂದೇಶ ಇವರ ಲೇಖನದಲ್ಲಿ ಕಂಡುಬಂದಿದೆ.

---

1. ಸಾಹಿತ್ಯ ಸಂಪದ -ಜಯದೇವಪ್ಪ ಜೈನಕೇರಿ

## ಬಿಲ್ಹಣನ ವಿಕ್ರಮಾಂಕದೇವ ಚರಿತಂ :

ಸಾಹಿತ್ಯ ಸೌರಭ ಕೃತಿಯಲ್ಲಿ ಪ್ರಕಟಗೊಂಡ ಮತ್ತೊಂದು ಲೇಖನ ಇದಾಗಿದೆ. ಸಂಸ್ಕೃತಿ ಸಾಹಿತ್ಯ ಕಥಾತ್ಮಕ ಪರಂಪರೆಯಲ್ಲಿ ನಾಲ್ಕು ಮಹತ್ವಪೂರ್ಣ ಮಹಾಕಾವ್ಯಗಳೆನಿಸಿರುವ ಬಾಣಭಟ್ಟನ `ಹರ್ಷಚರಿತಂ` `ಪದ್ಮಗುಪ್ತನ` ನವಸಾಹಸಾಂಕ ಚರತಂ ಬಿಲ್ಹಣನ ವಿಕ್ರಮಾಂಕ ದೇವ ಚರಿತಂ ಕಲ್ಯಾಣನ ಚಾಲುಕ್ಯತರಂಗೀಣಿ, ಈ ನಾಲ್ಕು ಮಹಾಕಾವ್ಯಗಳಲ್ಲಿ ಚಾಲುಕ್ಯ ವಂಶದ ಶ್ರೇಷ್ಠ ಅರಸನಾದ ಆರನೆಯ ವಿಕ್ರಮಾದಿತ್ಯನ ಐತಿಹಾಸಿದ ವರ್ಣನೆಯ ಚರಿತ್ರೆಯ ವಿಕ್ರಮಾಂಕ ದೇವ ಚರಿತಂ [1]ಹನ್ನೆರಡನೆಯ ಶತಮಾನದ ಅವಧಿಯಲ್ಲಿ ಅತ್ಯುತ್ತಮ ರಚನೆಗಳೇ ಇಲ್ಲದಕಾಲ. ಈ ಕಾಲ ಒಣ ಪಾಂಡಿತ್ಯದ ಯುಗ ಸಾಹಿತ್ಯ ಮೀಮಾಂಸೆ ಕುರಿತು ಪ್ರಚಂಡವಾದ ವಿವಾದ ಸಿದ್ಧಾಂತಗಳ ಮೂಲಕ ನೆರವೇರುತ್ತಿದ್ದ ಸಮಯ ಬಸವಾದಿ ಶರಣರ ಬೀಡಾದ ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಕ್ರಾಂತಿಯ ಕೇಂದ್ರವಾಗಿ ವಿಶ್ವವಿಖ್ಯಾತಿ ಗಳಿಸಿದ ಇಂದಿನ ಬಸವ ಕಲ್ಯಾಣವೇ ವಿಕ್ರಮಾಂಕ ದೇವನ ರಾಜಧಾನಿಯಾಗಿತ್ತು. ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಆಳ್ವಿಕೆ ಸರ್ವವಿಧದಲ್ಲೂ ಚಿರಸ್ಮರಣೀಯವಾಗಿದೆ. ಶೂರನು, ಧೀರನೂ ಆಗಿರುವ ಇವನು ಅತ್ಯಂತ ಕುಶಲ ವ್ಯವಹಾರ ಜ್ಞಾನವುಳ್ಳವನೆಂದು ಖ್ಯಾತಿಗೂ ಪಾತ್ರನಾಗಿದ್ದಾನೆ.

ಮಹಾಕಾವ್ಯವನ್ನು ರೀತಿಯ ದೃಷ್ಟಿಯಿಂದ ಅವಲೋಕಿಸಿದಾಗ ರಚನೆಯ ವೈದರ್ಭಿ ಶೈಲಿಯ ಪ್ರಾಧನ್ಯತೆ ಸ್ಪಷ್ಟವಾಗಿ ಗೋಚರಿಸುತ್ತದೆ. ಶೈಲಿಯ ತತ್ವದೃಷ್ಟಿಯಿಂದ ಈ ಕಾವ್ಯ ಮಹಾಕವಿ ಕಾಳಿದಾಸ ಮತ್ತು ಅಶ್ವಘೋಷರ ಕಾವ್ಯಗಳೊಂದಿಗೆ ಹೋಲಿಸಿ ನೋಡಿದಾಗ ಅನೇಕ ವಿಷಯದಲ್ಲಿ ಸಮಗ್ರತೆ ಕಾಣುತ್ತೇವೆ. ಮಹಾಕಾವ್ಯದ ಮಹೋದ್ದೇಶ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷದ ಪ್ರಾಪ್ತಿ ಇಲ್ಲಿ ಕಥಾ ನಾಯಕನಿಗೆ ಪ್ರಾಪ್ತಿಯಾಗಿರುವುದು ಕಂಡುಬರುತ್ತದೆ. ಕವಿಗಿರುವ ಕಾವ್ಯತ್ವದ ವ್ಯಾಮೋಹವೇ ಮಹಾಕಾವ್ಯದ ಐತಿಹಾಸಿಕತೆಗೆ ಧಕ್ಕೆಉಂಟುಮಾಡುವುದನ್ನು ಇಲ್ಲಿ ಗುರುತಿಸಲಾಗಿದೆ. ಭಾವನೆಗೆ ತಕ್ಕ ಅಭಿವ್ಯಕ್ತಿಯ ಸಮನ್ವಯ ರೂಪ ಎಲ್ಲಾ ಕಡೆ ಸ್ಪಷ್ಟವಾಗಿ ಗೋಚರಿಸುತ್ತದೆ. ಸರಳತೆ, ಸದಸತೆ, ಉದಾರಕತೆ, ವ್ಯಾಪಕತೆ, ಮಾನವಿಯತೆ ಮುಂತಾದ ಸದ್ಗುಣಗಳ ರಕ್ಷಣೆಗಾಗಿ ಕವಿ ಸದಾ ಜಾಗೃತನಾಗಿರುವದು ನಾವಿಲ್ಲಿ ಕಾಣಬಹುದು.

ಲೇಖಕಿ ಇಲ್ಲಿ ಚಾಲುಕ್ಯ ಮನತೆನ ಅಧಿಕಾರದ ಚುಕ್ಕಾಣಿ ಹಿಡಿದದ್ದು, ಆರನೇ ವಿಕ್ರಮಾಧಿತ್ಯ ಪಟ್ಟಕೆ ಬಂದದ್ದು ಅವನಿಗಿದ್ದ ಸಾಹಿತ್ಯ ಆಸಕ್ತಿಗಳ ಜೊತೆಗೆ ಬಿಲ್ಹಣನ ಕಾವ್ಯವೈಶಿಷ್ಟ್ಯ ಹಾಗು ಅವನ ಕೃತಿ ವಿವರಣೆ ಚರ್ಚಿಸಿದ್ದಾರೆ. ತನ್ನ ಕವಿತ್ವದ ವರ್ಣನೆಗಳು ಕೇವಲ ಕಾಲ್ಪನಿಕವಾದುದಲ್ಲದೆ ಅವು ವಾಸ್ತವಿಕತೆಯಿಂದ ಕೂಡಿರಬೇಕೆಂಬ ಉದ್ದೇಶಕ್ಕಾಗಿ ದೇಶದಾದ್ಯಂತ ದೀರ್ಘವಾದ ಪ್ರವಾಸ ಕೈಗೊಂಡನು. ತನಗೆ ಆಶ್ರಯ ನೀಡುವ ಅರಸನು ಕೂಡಾ ಅಷ್ಟೇ ಸಮರ್ಥನಾಗಿರಬೇಕೆಂದು

---

1. ತಿಳಿವ ತೇಜದ ಮುಂದೆ -ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಪು.ಸಂ. 160

ಅರಸುತ್ತಾ ದಕ್ಷಿಣ ಭಾರತಕ್ಕೆ ಬಂದು ಇಲ್ಲಿ ಅತ್ಯಂತ ಗುಣಗ್ರಾಹಿಯೂ, ಸ್ವಾಭಿಮಾನಿಯೂ ಸಮಸ್ತ ಪ್ರಜಾಕೋಟಿಗೆ ಪ್ರಿಯನಾಗಿರುವ ಕಲ್ಯಾಣ ನಗರದ ಚಾಲುಕ್ಯವಂಶದ ಆರನೆಯ ವಿಕ್ರಮಾದಿತ್ಯನ ಕೀರ್ತಿಗೆ ಮಾರು ಹೋಗಿ ಬಿಲ್ಹಣ ಆರಿಸಿ ಬಂದಾಗ ವಿದ್ಯಾಪತಿ ಬಿರುದು ನೀಡಿ ತನ್ನ ಆಸ್ಥಾನದ ಕವಿಯಾಗಿ ಸ್ವೀಕರಿಸಿದ ಅರಸನ ಪ್ರೀತಿಗೆ ವಿಸ್ಮಿತನಾಗಿ ಬಿಲ್ಹಣ ವಿಕ್ರಮಾಂಕ ದೇವ ಚರಿತಂ ಎಂಬ ಮಹಾಕಾವ್ಯವನ್ನು ಹಾಗೂ ಕಾವ್ಯ ಸುಂದರರ ಎಂಬ ನಾದರ ಜಾರಪಂಚಶಿಕಾ ಎಂಬ ಗೀತಕಾವ್ಯ ರಚಿಸಿದ ಅಂಶ ಸ್ಪಷ್ಟತೆ ನೀಡಿದೆ. ಐತಿಹಾಸಿಕ ಮಹಾಕಾವ್ಯ ಅದು ಚಾರಿತ್ರಿಕ ಮಹಾ ಪುರುಷನ ವ್ಯಕ್ತಿತ್ವ ಹಾಗೂ ಅವನು ತನ್ನ ಜೀವಿಕ ಕಾಲದಲ್ಲಿ ಕೈಗೊಂಡ ಕೆಲಸ ಕಾರ್ಯಗಳ ಕಾವ್ಯಾತ್ಮಕ ಚಿತ್ರಣವೆಂದು ಹೇಳಬಹುದು.

ಯಶೋದಮ್ಮ ಸಿದ್‌ಬಟ್ಟೆಯವರು ಸಂಪಾದನೆ ಕಾರ್ಯಕ್ಕೆ ಮುಂದಾಗಿ ಅನೇಕ ಮಹಿಳೆಯರನ್ನು ಒಂದು ಗೂಡಿಸಿ ಅವರಿಂದ ಕವಿತೆ, ಲೇಖನಗಳನ್ನು ಬರೆಯಿಸಿ ಅವರಲ್ಲಿ ಸ್ಫೂರ್ತಿ ತುಂಬಿ ಸಾಹಿತ್ಯ ಸೇವೆ ಮಾಡಿದ್ದಾರೆ. ಈ ಸಾಧನೆಯು ಯುವ ಬರಹಗಾರ ಮಹಿಳೆಯರಲ್ಲಿ ಪ್ರೋತ್ಸಾಹ ಚಿಲುಮೆ ಯಾಗುವುದರಲ್ಲಿ ಎರಡು ಮಾತುಗಳಿಲ್ಲ.

**೩.೫ ಸೃಜನ ಸಾಹಿತ್ಯ :**

ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಸಾಹಿತಿಗಳ ಸಾಲಿನಲ್ಲಿ ಒಬ್ಬರಾದ ಯಶೋದಮ್ಮ ಸಿದ್‌ಬಟ್ಟೆ ಕಥೆ, ಕವನ, ಕಾದಂಬರಿ, ಸಂಪಾದನೆ ಜೊತೆಗೆ ಗದ್ಯ ಸಾಹಿತ್ಯಕ್ಕೆ ಸಂಬಂಧಿಸಿದಂತಹ ಅನೇಕ ಸೃಜನಾತ್ಮಕ ಲೇಖನ ಬರೆದಿದ್ದಾರೆ. ಒಬ್ಬ ಸೃಜನಶೀಲ ಲೇಖಕಿಯ ಸೃಜನಶೀಲ ಸಾಹಿತ್ಯ ಇದಾಗಿದೆ. ಒಂದು ವಿಷಯವನ್ನು ಹತ್ತು ಹಲವು ದೃಷ್ಠಕೋನಗಳಿಂದ ಸಾಹಿತಿ ಹೇಗೆ ನೋಡುತ್ತಾನೆ, ಅದನ್ನು ಹೇಗೆ ವಿಶ್ಲೇಷಿಸುತ್ತಾನೆ, ಎಂಬುದು ಇಲ್ಲಿ ಗಮನಿಸಬಹುದಾಗಿದೆ.

ಇವರ ಸೃಜನ ಸಾಹಿತ್ಯಗಳು :

1. ಪ್ರಗತಿಯ ಪಥದಲ್ಲಿ ಭಾರತೀಯ ನಾರಿ
2. ಬೀದರ ಜಿಲ್ಲಾ ಮಹಿಳಾ ಸಾಹಿತಿಗಳು

**ಪ್ರಗತಿಯ ಪಥದಲ್ಲಿ ಭಾರತೀಯ ನಾರಿ :**

ಯಶೋದಮ್ಮ ಸಿದ್‌ಬಟ್ಟೆಯವರ ಮತ್ತೊಂದು ಅತ್ಯಮೂಲ್ಯ ಕೃತಿ ಇದಾಗಿದೆ. ಬೀದರನಲ್ಲಿ ಜರುಗಿದ ೭೨ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸವಿನೆನಪಿಗಾಗಿ ಪ್ರಕಟಿಸಲಾದ ೭೨ ಕೃತಿಗಳಲ್ಲಿ ಒಂದಾಗಿರುವ ಬೀದರ ಜಿಲ್ಲೆಯ ಮಹಿಳಾ ಸಾಹಿತಿಗಳು ಎಂಬ ಕೃತಿಯನ್ನು ಸುಕ್ಷೇತ್ರ ಹಾರಕೂಡದಲ್ಲಿ ನಡೆಸಲಾಗಿರುವ ಬೀದರ ಜಿಲ್ಲಾ ೭ನೇಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆಯ್ಕೆ ಮಾಡಿದ್ದಾಗ ಪ್ರಗತಿಯ ಪಥದಲ್ಲಿ ಭಾರತೀಯ ನಾರಿ ಎಂಬ ಕೃತಿ ನಮ್ಮ ಕೈಗೆತ್ತಿದ್ದಾರೆ.

ಪ್ರಗತಿಯ ಪಥದಲ್ಲಿ ಭಾರತೀಯ ನಾರಿ ಇದು ಯಶೋದಮ್ಮ ಸಿದ್‌ಬಟ್ಟೆಯವರ ಪ್ರಕಟಿತ ಕೆಲವು ಲೇಖನಗಳ ಪುಟ್ಟ ಸಂಗ್ರಹವಾಗಿದ್ದು, ಭಾರತೀಯ ಗಣತಂತ್ರದ ಐವತ್ತನೆ ವರ್ಷ ಆಚರಿಸುತ್ತಿರುವಾಗ ಈ ಐವತ್ತು ವರ್ಷಗಳಲ್ಲಿ ಭಾರತೀಯ ನಾರಿಯು ನಡೆದು ಬಂದ ದಾರಿ, ಅವಳ ಸಾಧನೆ, ಹಾಗೂ ಮಹಿಳೆಯರಿಗೆ ಸಂಬಂಧಿಸಿದ ಹಲವಾರು ವಿಚಾರಗಳನ್ನು ಇಲ್ಲಿ ಹಂಚಿಕೊಂಡಿದ್ದಾರೆ. ಒಟ್ಟು ಏಳು ಬಿಡಿ ಲೇಖನಗಳನ್ನು ಒಳಗೊಂಡಿರುವ ಪುಟ್ಟ ಕೃತಿ ಇದಾಗಿದೆ.

**1. ಸಂಗೀತ ಮತ್ತು ಭಕ್ತಿ :**

ಪ್ರಗತಿಯ ಪಥದಲ್ಲಿ ಭಾರತೀಯ ನಾರಿ ಕೃತಿಯಲ್ಲಿ ಬರುವ ಮೊದಲ ಲೇಖನ ಇದಾಗಿದೆ. ಮನುಷ್ಯನ ಬದುಕಿನಲ್ಲಿ ಸಂಗೀತವು ಬಹಳ ಮಹತ್ವದಾಗಿದೆ. ದೇವರಿಗೆ ಆರಾಧಿಸುವಾಗ ಸಂಗೀತ ಹಾಡುವುದರ ಮೂಲಕವು ಭಕ್ತಿ ತೋರಿಸುವುದು ಒಂದು ಪ್ರಕಾರವಾಗಿದೆ. ಸಂಗೀತವನ್ನು ದೇವರು ಇಷ್ಟ ಪಡುತ್ತಾನೆ. ಎಂಬುದು ಇದರ ಅರ್ಥವಾಗಿದೆ. ಸಂಗೀತದ ಪ್ರಭಾವ ಪ್ರಾಣಿಗಳಿಗೂ, ಮನುಷ್ಯರಿಗೂ ಸಸ್ಯಗಳಿಗೂ ಕೂಡಾ ಸಂಗೀತ ಇಷ್ಟ ಎಂಬುದು ವಿಜ್ಞಾನದ ಇತ್ತಿಚಿನ ಸಂಶೋಧನೆಯಾಗಿದೆ. ಮಾನವನ ಶರೀರ ಸುಂದರವಿರಲಿ ಇಲ್ಲದಿರಲಿ, ಅವನಿಗೆ ಶಾಸ್ತ್ರಗೊತ್ತಿಲ್ಲದಿದ್ದರೂ, ಅನಕ್ಷರಸ್ಥನಾಗಿದ್ದರು, ಹುಚ್ಚನಾಗಿದ್ದರೂ ಸಹ ಒಂದಲಾ ಒಂದು ಸಲ ಸಂಗೀತವನ್ನು ಇಷ್ಟಪಡುತ್ತಾನೆ. ಹಾಡಿಗೆ ಧ್ವನಿಗೂಡಿಸುತ್ತಾನೆ. ಇಲ್ಲವೆ ತಲೆ ಹಾಕುತ್ತಾನೆ. ಒಟ್ಟಿನಲ್ಲಿ ಈ ಸಂಗೀತದ ಸ್ವಾರಸ್ಯವನ್ನು ಸವಿಯುತ್ತಾನೆ.

[1]ಒಂದು ಅರ್ಥದಲ್ಲಿ ಕಲೆಗಳಲ್ಲೆಲ್ಲಾ ಸಂಗೀತವೇ ಅತ್ಯಂತ ಪ್ರಾಚೀನವಾದುದು ಮತ್ತು ಪ್ರಭಾವಶಾಲಿಯಾದುದು. ಹಿಂದೂ ಸಂಸ್ಕೃತಿಯಲ್ಲಿ ಸೂಚಿಸಿರುವ ಹದಿನಾರು ವಿದ್ಯೆಗಳು ಅರವತ್ನಾಲ್ಕು ಕಲೆ ಎಂದರೆ ನೃತ್ಯ, ಸಂಗೀತ, ಶಿಲ್ಪಿ ಮೊದಲಾದವುಗಳು ಬರುತ್ತವೆ. ಹೀಗಾಗಿ ಸಂಗೀತವು ವಿದ್ಯೆಯು ಹೌದು, ಕಲೆಯು ಹೌದು ಆದ್ದರಿಂದಲೇ ಸಂಗೀತಕ್ಕೆ ಗಂಧರ್ವ ವಿದ್ಯೆ ಎಂದೂ, ಸಂಗೀತ ಕಲೆ ಎಂದು ಕರೆಯುವುದುಂಟು. ಭರತ ಖಂಡದಲ್ಲಿ ಈ ಸಂಗೀತವು ಆದೊಂದು ಅಲೌಕಿಕ ವಿದ್ಯೆಯೆಂದು ದೈವಿಕವಾದ ಹಿನ್ನಲೆಯಲ್ಲಿ ಬೆಳೆಸಿಕೊಂಡು ಬಂದಿದೆ. ಸಂಗೀತ ಸೂಕ್ಷ್ಮಾತಿಸೂಕ್ಷ್ಮವಾದ ಭಾವನೆಗಳ ಸಂವೇದನೆಗಳ ಅಭಿವ್ಯಕ್ತಿಗೆ ಸಮರ್ಥವಾದ ಮಾಧ್ಯಮವಾಗಿ ಮಾಡಲಾಗಿದೆ.

ಗೀತಂ ವಾದ್ಯಂಚ ನೃತ್ಯಂಚ ತ್ರಯಂ ಸಂಗೀತಮುಚ್ಯತೆ ನಾದ ವಿನ್ಯಾಸದ ವ್ಯವಸ್ಥೆಯೇ ಸಂಗೀತಕ್ಕೆ ತಳಹದಿಯಾಗಿದೆ. ಮನುಷ್ಯನ ಭಾವನೆಗಳು ಆತನ ದೈಹಿಕವಾದ ಪ್ರತಿಕ್ರಿಯೆಗೆ ಪ್ರಚೋದಕವಾಗಿ ಪರಿಣಮಿಸುತ್ತದೆ. ನಿತ್ಯ ಜೀವನದಲ್ಲಿ ಕಂಡುಬರುವ ಸತ್ಯ ಸಂತೋಷವಾದಾಗ ಮುಖ ಅರಳುತ್ತದೆ. ಧ್ವನಿ ಏರುತ್ತದೆ. ದೇಹ ಕಂಪಿಸುತ್ತದೆ. ದುಃಖವಾದಾಗ ನರಳುವಿಕೆಯಲ್ಲಿ ಅವು

1. ಕರ್ನಾಟಕ ಸಂಸ್ಕೃತಿ ಸಮೀಕ್ಷೆ -ಡಾ. ಹೆಚ್. ತಿಪ್ಪೆರುದ್ರ ಸ್ವಾಮಿ ಪು.ಸಂ. 643

ಕುಗ್ಗುತ್ತವೆ ಕೋಪ ಬಂದಾಗ ಮುಖ ಕೆಂಪಾಗುತ್ತದೆ. ಹೀಗೆ ಆತನ ಅನೇಕ ಭಾವಗಳಿಗೆ ಅನುಗುಣವಾಗಿ ಆಂಶಿಕವಾದ ಚಲನೆ ಹಾಗೂ ನಾದವಿನ್ಯಾಸಗಳು ಉಂಟಾಗುತ್ತವೆ. ಸಂಗೀತವು ಮೇಲೆ ಹೇಳಿರುವಂತೆ ಬಾಯಿ ಸಂಗೀತ, ವಾದ್ಯ ಸಂಗೀತ ಮತ್ತು ನೃತ್ಯ ಈ ಮೂರು ರೀತಿಯ ಸಂಗೀತವನ್ನು ಒಳಗೊಂಡಿದೆ.

ಸಂಗೀತದ ಗುರಿ ಒಂದು ಪರಮಾನಂದವಾಗಿದ್ದರೆ, ಇನ್ನೊಂದು ಆಧ್ಯಾತ್ಮವಾಗಿದೆ. ಸಂಗೀತ ಹಾಗೂ ಆಧ್ಯಾತ್ಮದಿಂದ ಸಿದ್ಧಿಸುವಂತಹದು ಆನಂದ. ಇದು ಉನ್ನತಾವಸ್ಥೆಗೆ ತಲುಪಿದಾಗ ಬ್ರಹ್ಮಾನಂದ !! ಈ ಬ್ರಹ್ಮಾನಂದವೇ ಸಂಗೀತದ ಚಮರ ಲಕ್ಷ! ಇಂತಹ ಆನಂದವನ್ನು ಆಸ್ವಾಧಿಸಲು ಭಗವಂತನ ಸಾಕ್ಷಾತ್ಕಾರವನ್ನೇ ಗುರಿಯಾಗಿಟ್ಟುಕೊಂಡು ಹಾಡಬೇಕಾಗುತ್ತದೆ.

ಪುರಾತನ ಕಾಲದಿಂದಲೂ ಸಂಗೀತ ಜನರ ಸಾಮಾಜಿಕ ಹಾಗೂ ಆಧ್ಯಾತ್ಮಿಕ ಜೀವನದ ಒಂದು ಅಂಗವಾಗಿಯೆ ಬೆಳೆದು ಬಂದಿದೆ. ರಾಜ ಮಹಾರಾಜರು ಸಂಗೀತಗಾರರಿಗೆ ಆಶ್ರಯ ನೀಡಿದರು. ಶಿಕ್ಷಣದಲ್ಲಿ ಸಂಗೀತಕ್ಕೆ ಪ್ರಮುಖ ಸ್ಥಾನ ನೀಡಲಾಗಿದೆ. ಹದಿಮೂರನೆ ಶತಮಾನದಲ್ಲಿ ದೆಹಲಿಯ ಬಾದಷಹ ಅಲ್ಲಾವುದ್ದಿನ ಖಿಲ್ಜಿಯ ಆಸ್ಥಾನದ ಕವಿ `ಅಮೀರ ಖುಸ್ರೋ` ಎಂಬುವವನು ಭಾರತೀಯ ಸಂಗೀತದ ಮೇಲೆ ಪರ್ಷಿಯನ್, ಇರಾನಿ ಸಂಸ್ಕೃತಿಯ ಪ್ರಭಾವವಿರುವ ಹಿಂದೂಸ್ತಾನಿ ಪದ್ಧತಿಯನ್ನು ರೂಪಿಸಿದನು. ಇದು ಉತ್ತರ ಭಾರತದ ಸಂಗೀತ ಸಂಸತ್ಕೃತಿ. ದಕ್ಷಿಣಾತ್ಯ ಸಂಗೀತ ಪದ್ಧತಿಗೆ ಕರ್ನಾಟಕ ವೆಂದು ಕರೆಯಲಾಗಿದೆ. ಸಂಗೀತ ಹಾಗೂ ನೃತ್ಯಕಲೆಗಳು ವಿಜಯನಗರ ಸಾಮ್ರಾಜ್ಯದಲ್ಲಿ ಪರಿಷ್ಕೃತವಾಗಿ ಬಳಕೆಗೆ ಬಂದಿದವು. ವಿಜಯನಗರ ಸಾಮ್ರಾಜ್ಯದ ಪತನದ ನಂತರವು ಈ ಸಂಸ್ಕೃತಿ ತಂಜಾವೂರು ಹಾಗೂ ಮೈಸೂರಿನಲ್ಲಿ ನೆಲೆಸಿ ಪರಿಷ್ಕರಿಸಲ್ಪಿಟ್ಟು ಬೆಳೆಯಿತು. ಆದರು ಇದರ ಮೂಲ ರೂಪ ಕರ್ನಾಟಕ ಸಾಮ್ರಾಜ್ಯವಾದ ವಿಜಯನಗರ ಸಾಮ್ರಾಜ್ಯವೆ ಆದ್ದರಿಂದಲೇ `ಕರ್ನಾಟಕ ಸಂಗೀತ` ವೆಂಬ ಹೆಸರು ಬಂದಿದೆ. ಇಲ್ಲಿ ಲೇಖಕಿ ಹಿಂದೂಸ್ತಾನಿ ಸಂಗೀತ ಹಾಗೂ ಕರ್ನಾಟಕ ಸಂಗೀತ ಬೆಳೆದು ಬಂದ ಬಗೆಯನ್ನು ಚರ್ಚಿಸಿದ್ದಾರೆ. ಕರ್ನಾಟಕ ಸಂಗೀತದ ಪರಂಪರೆಯನ್ನು ಮುಂದುವರಿಸಿಕೊಂಡು ಬಂದ ಅಣ್ಣ ಮಾಚಾರ್ಯರು, ತ್ಯಾಗರಾಜರು ಮತ್ತು ಸ್ವಾಮಿ ದಿಕ್ಷಿತರು ಶಾಸ್ತ್ರೀಯ ಹಾಗೂ ಕರ್ನಾಟಕ ಸಂಗೀತದ ಪಿತಾಮಹರೆನಿಸಿದ ಪುರಂದರದಾಸರ ಹೆಸರು ಸೂಚಿಸಿದ್ದಾರೆ.

ಸಂಗೀತದಲ್ಲಿ ಸಾಹಿತ್ಯದ ಅಳವಡಿಕೆ ಒಂದು ಸಂಶೋಧನೆಯಾಗಿದೆ. ಸಂಗೀತಗಾರರು ಸಾಹಿತ್ಯಕ್ಕೆ ಮಹತ್ವ ನೀಡಿದ್ದಾರೆ. ಸಂಗೀತದ ಆಂತರಿಕ ಮುಖ ಮನುಷ್ಯರಿಗಾಗಿ, ದೇವರಿಗಾಗಿ ಹಾಡುವುದು ಭಿನ್ನ ವೆಂದು ಸಾರಿರುವ ಲೇಖಕಿಯ ನಿಲುವು ಆಧ್ಯಾತ್ಮೀಕತೆಯಿಂದ ಕೂಡಿದೆ. ಭಕ್ತಿಗಾಗಿ ತೋರಿಕೆಗಾಗಿ ಹಾಡುವ ಸಂಗೀತದಲ್ಲಿನ ಸೂಕ್ಷ್ಮ ಭಿನ್ನತೆ ಚಿತ್ರಿಸಿದ್ದಾರೆ.

**ಶಿಕ್ಷಕ ಹಾಗೂ ಸಂಘಟನೆ :**

ಮನುಷ್ಯ ಬಿಡಿಸಲಾರದ ಒಂದು ಸಂಕೀರ್ಣ ಪ್ರಾಣಿ. ಇತರ ಪ್ರಾಣಿಗಳಿಗಿಂತ ಶ್ರೇಷ್ಠನೆನಿಸಿದ್ದಾನೆ. ವಾಕ್‌ಶಕ್ತಿ, ವಿಚಾರಶಕ್ತಿ ಹಾಗೂ ಬುದ್ಧಿಶಕ್ತಿ ಇರುವುದರಿಂದಲೇ ಉನ್ನತ ಸ್ಥಾನಕ್ಕೆ ಬಂದಿದ್ದಾನೆ. ಸಮಾಜದ ಪ್ರತಿನಿಧಿ ತರಗತಿಯ ನಾಯಕನೆನೆಸಿಕೊಳ್ಳುವ ಶಿಕ್ಷಕ ಮಗುವಿನಲ್ಲಿ ಅನೇಕ ಸೂಪ್ತ ಶಕ್ತಿಗಳು ಅಂತರ್ಗತವಾಗಿರುತ್ತವೆ. ಆ ಸುಪ್ತ ಶಕ್ತಿಗಳನ್ನು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಂಡು ಜೀವನಾನುಭವಗಳನ್ನು ಪಡೆಯಲು ಉತ್ತಮ ವಾತಾವರಣ ಕಲ್ಪಿಸಿಕೊಡುವವನೆ ಶಿಕ್ಷಕ. ಶಿಕ್ಷಕ ಎಲ್ಲವನ್ನು ತಿಳಿದಿರಬೇಕು ಎನ್ನುವಲ್ಲಿ ಒಬ್ಬ ಶಿಕ್ಷಕ ಹೊಂದಿರಬೇಕಾಗುವ ಅರ್ಹತೆಯನ್ನು ತಿಳಿಸುತ್ತದೆ.

ಸಮಾಜದ ಮಾರ್ಗದರ್ಶಿ ದೇಶದ ಹಿತಚಿಂತಕ ಮಗುವನ್ನು ಮಾನವನಾಗಿ, ನಾಗರೀಕನಾಗಿ, ಪರಿವರ್ತಿಸುವ ಯೋಗ್ಯತೆ ಹೊಂದಿರುವ ಶಿಕ್ಷಕ ಶಿಕ್ಷಣದ ಮೂಲ ಉದ್ದೇಶವಾಗಿರುವ ಸ್ವಾವಲಂಬನೆಯನ್ನುಂಟು ಮಾಡುವುದು ಶಿಕ್ಷಕನ ಆದ್ಯ ಕರ್ತವ್ಯವೆಂದು ಭಾವಿಸಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಾನೆ. ಒಂದು ದೇಶ ಬಹಳಷ್ಟು ಪ್ರಗತಿ ಸಾಧಿಸಿದರೆ ಅಲ್ಲಿನ ಶಿಕ್ಷಣ ಪದ್ಧತಿಯೇ ಮುಖ್ಯ ಎನ್ನುವಂತೆ ಸಮಾಜದ ಶಿಶು, ದೇಶದ ಭವಿಷ್ಯವಾಗಿರುವ ಮಗುವಿನಲ್ಲಿ ಮಾನವಿಯತೆಯನ್ನುಂಟು ಮಾಡುವ ಕಾರ್ಯ ಶಿಕ್ಷಕನದ್ದು. ಶಿಕ್ಷಕ ವೃತ್ತಿಯು ಉಳಿದೆಲ್ಲ ವೃತ್ತಿಗಳಿಗಿಂತ ಶಿಷ್ಟತೆ ಹೊಂದಿರುವಂತಹದಾಗಿದೆ. ಕಲಿಕೆಗೆ ಸಂಭಂಧಿಸಿದಂತೆ ಶಿಕ್ಷಕ ಮಗುವಿನ ಮಾನಸಿಕ ಸ್ಥಿತಿಗತಿ ಹಾಗೂ ಧೋರಣೆಗಳನ್ನು ಅರಿತುಕೊಂಡು, ಮಗುವಿನ ಪ್ರಗತಿ ಹಾಗೂ ಭವಿಷ್ಯದ ಬಗ್ಗೆ ಅವನು ಊಹಿಸಿದ ನಿರ್ಧಿಷ್ಟವಾದ ಕಲ್ಪನೆಗೆ ಸಾಕಾರ ರೂಪ ಕೊಡುತ್ತಾನೆ.

ಶಿಸ್ತು, ಕ್ಷಮತೆ, ಕಲಿಸು ಎಂಬ ಮೂರು ಪ್ರಮುಖ ಗುಣಗಳಿಂದ ಭೂಷಿತನಾಗಿರುವ ಶಿಕ್ಷಕ ವೈದ್ಯ, ವಕೀಲ, ಇಂಜಿನಿಯರಗಳ ಸಾಲಿಗೆ ಸೇರಲಾರನು. ಕಾರಣ ಶಿಕ್ಷಕ ವೈದ್ಯ, ವಕೀಲ, ಇಂಜಿನಿಯರಗಳನ್ನು ರೂಪಿಸಬಲ್ಲನು. ಆದರೆ ಇವು ಶಿಕ್ಷಕನನ್ನು ರೂಪಿಸಲಾರರು. ಒಬ್ಬ ವೈದ್ಯ ಮನಸ್ಸು ಮಾಡದೆ ಇದ್ದಾಗ ಒಬ್ಬ ರೋಗಿ ಸಾವನಪ್ಪಬಹುದು. ಒಬ್ಬ ಇಂಜಿನಿಯರ ಮನಸ್ಸು ಮಾಡದೆ ಇದ್ದಾಗ ಒಂದು ಕಟ್ಟಡ ಹಾಳಾಗಬಹುದು. ಆದರೆ ಒಬ್ಬ ಶಿಕ್ಷಕ ಕಲಿಸಲು ಮನಸ್ಸು ಮಾಡದೆ ಇದ್ದಾಗ ಇಡೀ ಸಮಾಜ, ದೇಶವೇ ಅಧೋಗತಿಗೆ ಹೋಗುವ ಸಾಧ್ಯತೆಗಳುಂಟು ಎಂಬ ಅಂಶ ಯಾರು ಅಲ್ಲಗಳೆಯಲಾರರು. ಆದರೆ ರಾಷ್ಟ್ರವನ್ನು ಕಟ್ಟುವ, ಸಮಾಜವನ್ನು ತಿದ್ದುವ ಮಕ್ಕಳನ್ನು ದೇಶದ ಭವಿಷ್ಯವನ್ನಾಗಿ ಮಾಡುವ ಈ ಶಿಲ್ಪಿಗೆ ಅವನ ಅನುಪಮವಾದ ಅಭಿಪ್ರಾಯಗಳಿಗೆ ಸಮಾಜದ ಮನ್ನಣೆ ಇಲ್ಲವೆಂದರೆ ಅವನೊಬ್ಬ ನತದೃಷ್ಟನಿದ್ದಂತೆ. ಸರ್ಕಾರ ಈ ವಿಷಯದಲ್ಲಿ ಕಣ್ಣು ಮುಚ್ಚಿಕೊಂಡಿದ್ದು ಶಿಕ್ಷಕರೆಲ್ಲರು ಒಂದಾಗಬೇಕು. ಮುಂದಾಗಬೇಕು ಎಂದು

ಹೇಳುವಲ್ಲಿ ಲೇಖಕಿ ಒಬ್ಬ ಶಿಕ್ಷಕಿ ವೃತ್ತಿಯನ್ನು ಅನುಭವಿಸಿ ಬಂದವರು. ಅಲ್ಲಿ ಕೆಲವೊಮ್ಮೆ ಕಂಡುಬರುವ ನೆಲವು ದುಃಖದ ಭಾವನೆ ವ್ಯಕ್ತವಾಗುತ್ತಿದೆ.

ಶಿಕ್ಷಕರ ಸಂಘ, ರಾಜ್ಯ ಸರ್ಕಾರಿ ನೌಕರರ ಸಂಘ ಮತ್ತು ಇಲಾಖಾವಾರು ರಾಜ್ಯ ಕರ್ಮಚಾರಿಗಳ ಸಂಘಗಳಿಗಿಂತ ತೀರಾ ಭಿನ್ನವಾದ ಸಂಘಟನೆ ಎಂದೆನಿಸಿಕೊಳ್ಳುತ್ತದೆ. ಇತರ ಸಂಘಗಳು ಕೇವಲ ತಮ್ಮ ಸಂಬಳ, ಸಾರಿಗೆ, ಆರ್ಥಿಕ ಸೌಲಭ್ಯಗಳಿಗಾಗಿ ಹೋರಾಟ ನಡೆಸಿದರೆ ಶಿಕ್ಷಕರ ಸಂಘ ಇನ್ನಿತರ ಸಂಘದವರು ನಡೆಸುವ ಹೋರಾಟದೊಂದಿಗೆ ಶಿಕ್ಷಕ ಸೇವೆಯ ಸ್ವಭಾವ ಸ್ಥಾನಮಾನ ಹಾಗೂ ವೃತ್ತಿಗೆ ಸಂಬಂಧಿಸಿದಂತಹ ಸಮಸ್ಯೆಗಳ ಪರಿಹಾರಕ್ಕೆ ವಿಶ್ರಾಂತಿ ಇಲ್ಲದೆ ದುಡಿಯಬೇಕಾಗುತ್ತದೆ.

ಲೇಖಕಿ ಸಂಘಟನೆಯ ಕುರಿತು ಹೇಳುವಾಗ ಶಿಕ್ಷಕರ ಸಂಘ ಇದು ಉಳಿದ ಸಂಘಗಳಿಗಿಂತ ಭಿನ್ನವಾಗಿಯು ಮಾದರಿಯಾಗಿಯು ಇರಬೇಕು. ಶಿಕ್ಷಕರ ಸಂಘ ಕೇವಲ ಆರ್ಥಿಕ ಸೌಲಭ್ಯ, ಸಂಬಳ, ಸಾರಿಗೆ, ಸೇವಾ ವಿಧಿಗಾಗಿ ಮಾತ್ರ ಹೋರಾಡದೆ ಇದರ ಜೊತೆಗೆ ವೃತ್ತಿ ನೈಪುಣ್ಯತೆಗಾಗಿಯೂ ಹೋರಾಡಬೇಕೆಂದು ಕರೆಕೊಡುವ ಉದ್ದೇಶ ಹೊಂದಿದ್ದಾರೆ. ಕಾರಣ ಇತ್ತೀಚಿನ ದಿನಗಳಲ್ಲಿ ಶಿಕ್ಷಕರಿಗೆ ಸಾರಿಗೆ, ಸಂಬಳ ಮತ್ತು ಆರ್ಥಿಕ ಲಾಭದ ಸೂಚನೆಗಳನ್ನು ಕಂಡುಬರುತ್ತದೆ. ದಿಢೀರನೆ ಸಂಘ ಕಟ್ಟಿ ಉದ್ದೇಶಪೂರ್ತಿಯಾದ ನಂತರ ಸಂಘದತ್ತ ಕಣ್ಣೆತ್ತಿ ಕೂಡಾ ನೋಡುವುದಿಲ್ಲ. ಇದು ಬೆಳವಣಿಗೆಯ ಲಕ್ಷಣವಲ್ಲ. ಶಿಕ್ಷಣ ಕ್ಷೇತ್ರಕ್ಕೆ ನ್ಯಾಯ ಒದಗಿಸಿಕೊಡುವ ಬದಲಾಗಿ ಅನ್ಯಾಯವೆಸಗಿದಂತಾಗುತ್ತದೆ. ಸರ್ಕಾರ ಹಾಗೂ ಸಮಾಜ ಶಿಕ್ಷಕರನ್ನು ಮಾದರಿಯಾಗಿ ಕಾಣುತಿಲ್ಲ. ಶಿಕ್ಷಕರಿಗೆ ಸಿಗಬೇಕಾದ ಪ್ರೋತ್ಸಾಹ ಇಲ್ಲದಂತಿರುವುದನ್ನು ವಿರೋಧಿಸುವುದರ ಬದಲಿಗೆ ಪ್ರತಿರೋಧದ ಧ್ವನಿಯು ಕಂಡುಬರುತ್ತಿದೆ. ಈ ಕ್ಷೇತ್ರದಲ್ಲಿ ಸೇವೆ ಮಾಡಿ ಸಾಧನೆ ಗೈದವರನ್ನು ಕಡೆಗಣಿಸುವುದು ಹಾಗೂ ಶಿಕ್ಷಕರು ವೃತ್ತಿಯ ಮೇಲೆ ಹಿಡಿತ ಸಾಧಿಸಲು ಮೇಲಿಂದ ಮೇಲೆ ತರಬೇತಿಗಳನ್ನು ಉಪನ್ಯಾಸ ಕಾರ್ಯಗಾರಗಳ ಲಾಭ ಪಡೆಯುವ ಅವಶ್ಯಕತೆ ಎತ್ತಿ ತೋರಿಸಿದ್ದಾರೆ. ಒಂದೆಡೆ ವೃತ್ತಿಯ ಬಗ್ಗೆ ಗೌರವ ಇನ್ನೊಂದೆಡೆಗೆ ಸಂಘಟನೆಯಲ್ಲಿ ಬಲವಿದೆ. ಎನ್ನುವುದರ ಮೂಲಕ ಹೋರಾಟ ಮಾಡಬೇಕೆಂಬ ಹಂಬಲದ ಬೆನಲ್ಲೆ ಶಿಕ್ಷಕರ ಹೋರಾಟ ವೃತ್ತಿಗೆ ಚ್ಯುತಿ ತರುವಂತಾಗಬಾರದೆಂಬ ಅಭಿಪ್ರಾಯ ಇಲ್ಲಿ ವ್ಯಕ್ತವಾಗಿದೆ.

**ಬೀದರ ಜಿಲ್ಲೆಯ ಬುಲಾಯಿ ಹಾಡುಗಳು :**

ಕನ್ನಡ ಜಾನಪದ ಲೋಕ ಕನ್ನಡ ಸಾಹಿತ್ಯಕ್ಕೆ ಬಹಳಷ್ಟು ಕಾಣಿಕೆನೀಡಿ ಶ್ರೀಮಂತ ಸಾಹಿತ್ಯವನ್ನಾಗಿ ಮಾಡಿದೆ. ಕರುನಾಡಿನ ಕಿರಿಟ ಮತ್ತು ಗಡಿ ಭಾಗ ಎನಿಸಿರುವ ಬೀದರ ಜಿಲ್ಲೆ ಜನಪದ ಸಾಹಿತ್ಯಕ್ಕೆ ತಲೆ ಹಾಗೂ ತವರೂರು. ಈ ಜಿಲ್ಲೆ ಜನಪದ ಸಾಹಿತ್ಯಕ್ಕೆ ನೆಲೆ ಸೆಲೆ ಎಲ್ಲವು ಆಗಿದೆ. ನಾರಿಯರ ಹಬ್ಬವೇ ನಾಗರಪಂಚಮಿ ಈ ಹಬ್ಬದ ಸಂದರ್ಭದಲ್ಲಿ ನಾರಿಯರು ಹಾಡುವ ಹಾಡುಗಳೆ

ಭುಲಾಯಿ ಹಾಡುಗಳು. [1]ಭುಲಾಯಿ ಪದ ಉರ್ದುವಿನ ಬಹಲಾವ್ ಶಬ್ದದಿಂದ ಬಂದಿದೆ. ಅಂದರೆ `ಮನರಂಜನೆ` ಎಂದರ್ಥ.

ಲೇಖಕಿ ಯಶೋದಮ್ಮ ಸಿದ್‌ಬಟ್ಟೆ ರವರ ರಚನೆಯಾದ ಬೀದರ ಜಿಲ್ಲೆಯ ಭೂಲಾಯಿ ಹಾಡುಗಳು ಈ ಲೇಖನ ೧೯೯೩ರಲ್ಲಿ ಭಾಲ್ಕಿಯಲ್ಲಿ ನಡೆದ ನಾಲ್ಕನೇ ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ನೆನಪಿನ ಸಂಚಿಕೆಯು `ಚೆಂಬೆಳಕು` ನಲ್ಲಿ ಪ್ರಕಟಗೊಂಡಿದೆ. ಪ್ರಾರಂಭದಲ್ಲಿ ಭಾರತದಲ್ಲಿ ಜಾನಪದ ಸಾಹತ್ಯದ ಅಧ್ಯಯನ ಸಂಶೋಧನೆ ಹೇಗೆ ನಡೆದಿದೆ ಎಂಬುವ ವಿಷಯದ ಬಗ್ಗೆ ಚರ್ಚಿಸಿದ್ದಾರೆ. ಜಾನ್ ಲೇಡನ್ ಚಾರಲ್ಸ್ ಇ. ಗೋವರ, ಫ್ಲೀಟ, ಹಲಸಂಗಿ ಸಹೋದರರು, ಕಾಪಸೆ ರೇವಪ್ಪ, ಸಿಂಪಿ ಲಿಂಗಣ್ಣ, ಪಿ. ಧೂಲಾಸಾಬ, ಅರ್ಚಕರಂಗ ಸ್ವಾಮಿ, ಗೋರೂರು ರಾಮಸ್ವಾಮಿ ಅಯ್ಯಂಗಾರರ ಅವರುಗಳ ಹೆಸರುಗಳನ್ನು ಸೂಚಿಸಿದ್ದಾರೆ.

ಜಾನಪದ ಬೆಳೆದು ಬಂದ ಬಗ್ಗೆ ಜನಪದ ಕಲೆಗಳ ಪ್ರಕಾರ ಜಾನಪದ ಸೇವೆಗೈದವರು ಜಾನಪದದ ಬಗೆಗಿನ ಅಧ್ಯಯನಗಳ ಕುರಿತು ಮೈಸೂರು ವಿ.ವಿ.ಯ, ಎಂ.ಎ. ಸ್ನಾತಕೋತ್ತರದಲ್ಲಿ ಜಾನಪದ ಅಧ್ಯಯನ ಪ್ರಾರಂಬಿಸಿದ ದಿಟ್ಟ ನಿಲುವು ಕುರಿತು ಹೇಳಿದ್ದಾರೆ. ಹಾಗೆಯೇ ಜಾನಪದ ರತ್ನತ್ರಯರಾದ ದೇಜಗೌ, ಹಾಮಾನಾ ಮತ್ತು ಜಿಶಪಂ ಅವರ ಸಾಧನೆಯನ್ನು ಕೊಂಡಾಡಿದ್ದಾರೆ.

ಬೂಲಾಯಿ ಹಾಡುಗಳು ನಮ್ಮ ಬೀದರ ಜಿಲ್ಲೆಗೆ ಮಾತ್ರ ಮೀಸಲಾಗಿವೆ. ನಾಗರಪಂಚಮಿ ಹಬ್ಬದ ಸಂದರ್ಭದಲ್ಲಿ, ಹೆಣ್ಣು ಮಕ್ಕಳು ಹಾಡುವ ವಿಶಿಷ್ಟವಾದ ಹಾಡುಗಳೇ ಬುಲಾಯಿ ಹಾಡುಗಳು. [2]ಹಬ್ಬಕ್ಕಿಂತ ಮೊದಲು ಮತ್ತು ಹಬ್ಬದ ದಿನ ಈ ಹಾಡುಗಳನ್ನು ಹಾಡುತ್ತಾರೆ. ದೊಡ್ಡದಾದ ಮನೆಯ ಮುಂದೆ ಹೆಣ್ಣು ಮಕ್ಕಳು ಕೈಕೈಹಿಡಿದು ಗೋಲಾಕಾರವಾಗಿ ನಿಲ್ಲುತ್ತಾರೆ. ಇಬ್ಬರು ಮೊದಲು ನಿಂತುಕೊಂಡು ಕೈ ಕೈ ಹಿಡಿದು ಸ್ವಲ್ಪ ಬಾಗಿ ಹಾಡು ಹೇಳುತ್ತಾರೆ. ಹಾಡು ನುಡಿದೊಡನೆ ಸುತ್ತಾಟ ಪ್ರಾರಂಭವಾಗುತ್ತದೆ. ಹಾಡಿನ ಪ್ರತಿ ಮಡಿಯ ಕೊನೆಗೆ ಕೋಲೆನ್ನ ಕೋಲೆ ಹೂವಿನ ಕೋಲೆನ್ನ ಕೋಲೆ , ರನ್ನದಾ ಕೋಲೆನ್ನ ಕೋಲೆ ಎಂದು ಜೊತೆ ಹಾಡುತ್ತಾರೆ. ಮೊದಲು ಕೋಲು ಹಾಕುತ್ತಾ ಹಾಡುತ್ತಿದ್ದವರು ಈಗ ಕೋಲು ಹಾಕುವುದಿಲ್ಲ. ಬುಲಾಯಿ ಹಾಡುಗಳು ಬಹಳ ದೀರ್ಘವಾಗಿರುತ್ತದೆ. ಛಂದಸ್ಸಿನ ದೃಷ್ಟಿಯಿಂದ ನೋಡಿದಾಗ ಹಾಡಿನ ಕಥೆಗೆ ಅನುಗುಣವಾಗಿ, ಹಾಡಿನ ಪಾದಗಳ ಸೃಷ್ಠಿ ಕಂಡುಬರುತ್ತದೆ. ಭಾವ ಹಾಗು ಸಂಗೀತದ ಸಹಜವಾದ ಸಂಯೋಗ ಇಲ್ಲಿದೆ. ಮನೋರಂಜನೆಯ ಪ್ರತೀಕವಾಗಿರುವ ಬುಲಾಯಿ ಹಾಡುಗಳು ರಜಾಕಾರರ ಹಾವಳಿ, ಪೌರಾಣಿಕ ಕಥೆಗಳು, ಐತಿಹಾಸಿಕ ಘಟನೆಗಳು, ಧರ್ಮಕ್ಕಾಗಿ ಪ್ರಾಣಾರ್ಪಣೆ, ಸ್ನೇಹಕ್ಕಾಗಿ ಬಲಿ, ಶೀಲಕ್ಕಾಗಿ ಮಗನನ್ನೆ ಬಲಿ ಕೊಟ್ಟ ಕಡ್ಲಿಮಟ್ಟೆ ಕಾಶಿಬಾಯಿ , ಕುಮಾರ ರಾಮನ ಹಾಡು, ಅತ್ತಿಗೆ

---

1. ಬೀದರ ಜಿಲ್ಲಾ ದರ್ಶನ -ಡಾ. ಸೋಮನಾಥ ಎಳವಾರ ಸಂ. ಪು.ಸಂ. 185

ನಾದನಿಯರ ಹಾಡು, ಅಣ್ಣ ತಂಗಿಯರ ಹಾಡು ಮುಂತಾದ ಹಾಡಿನಲ್ಲಿ ಹೆಣ್ಣಿನ ಅಸಹಾಯಕತೆ, ತ್ಯಾಗ, ಸಹನೆ, ಮುಂತಾದವುಗಳು ಮನಸ್ಸಿಗೆ ತಾಗುವಂತೆ ಚಿತ್ರಿಸಲಾಗಿದೆ.

ಬದಲಾಗುತ್ತಿರುವ ಸಮಾಜದಲ್ಲಿ ಹಿಂದಿನ ಸಂಸ್ಕೃತಿಯನ್ನು ಪ್ರತಿನಿಧಿಸಿ ಸಂಶೋಧನೆಗೆ ಆಕಾರವನ್ನು ಒದಗಿಸುತ್ತವೆ. ಬೀದರ ಜಿಲ್ಲೆ ಜಾನಪದ ಕ್ಷೇತ್ರದ ಗಣಿಯಾಗಿದ್ದು, ಇದರ ಕುರಿತು ಸಾಕಷ್ಟು ಅಧ್ಯಯನ ನಡೆಯಬೇಕಾಗಿದೆ. ಲೇಖಕಿ ಈ ಲೇಖನದ ಮೂಲಕ ಬೀದರ ಜಿಲ್ಲೆಯು ಜಾನಪದ ಲೋಕಕ್ಕೆ ಕೊಟ್ಟ ಕೊಡುಗೆಯನ್ನು ಕೊಂಡಾಡಿದ್ದಾರೆ.

**ಸಾಕ್ಷರತೆಯಿಂದ ಸಹಕಾರದತ್ತ ಮಹಿಳೆ :**

ಈ ಲೇಖನ ೧೯೯೪ ರ ರಾಜ್ಯ ಮಟ್ಟದ ಮಹಿಳಾ ಸಹಕಾರಿಗಳ ನಾಯಕತ್ವ ತರಬೇತಿ ಶಿಬಿರ ಹಾಗೂ ಕಾರ್ಯಗಾರ, ಬೆಂಗಳೂರು ಇವರ ವಿಶೇಷ ಸಂಚಿಕೆಯಲ್ಲಿಯೂ ಸಹಕಾರದಲ್ಲಿ ಪ್ರಕಟಗೊಂಡಿದೆ.

ಅಕ್ಷರಜ್ಞಾನ ಮನುಕುಲದ ಮಹತ್ವದ ಶೋಧನೆಯಾಗಿದೆ. ಅಲೆಮಾರಿಯಾಗಿದ್ದ ಮಾನವ ಒಂದೆಡೆ ನಿಂತು, ಮನೆಕಟ್ಟಿ, ಬೇಸಾಯ ಮಾಡಿ, ಅಕ್ಷರ ಜ್ಞಾನಕ್ಕೆ ಗಮನ ಕೊಟ್ಟಂದಿನಿಂದ ಅಕ್ಷರ ಸಂಸ್ಕೃತಿ ಪ್ರಾರಂಭವಾಯಿತು. [1]ಮನುಷ್ಯ ಅಕ್ಷರ ಸಂಸ್ಕೃತಿಯನ್ನು ರೂಢಿಸಿಕೊಂಡ ಮೇಲೆ ಪ್ರಕೃತಿ ಜ್ಞಾನ, ವಾಕ್ ಪರಂಪರೆಯ ಜ್ಞಾನ ಜೊತೆಗೆ ಗ್ರಂಥಸ್ಥ ಸಾಹಿತ್ಯವು ಸೇರಿಕೊಂಡಿದೆ. ಅಕ್ಷರ ಜ್ಞಾನದಿಂದ ಮನುಷ್ಯನ ಜ್ಞಾನದ ಪರಧಿ ವಿಸ್ತಾರವಾಗಿದೆ. ಅಕ್ಷರ ಸಂಸ್ಕೃತಿ ಇಲ್ಲದಿದ್ದರೆ ಮನುಕುಲದ ಸಂಸ್ಕೃತಿ ಇಂದಿನಷ್ಟು ಅರ್ಥಪೂರ್ಣವಾಗಿರುತ್ತಿರಲಿಲ್ಲ.

ನಮ್ಮ ದೇಶದ ಸಂವಿಧಾನವು ಮಹಿಳೆಯರಿಗೆ ಅನೇಕ ಸೌಲಭ್ಯಗಳನ್ನು ನೀಡಿದೆ. ಬಹಳಷ್ಟು ಮಹಿಳೆಯರು ಇವುಗಳಿಂದ ದೂರವಾಗಿದ್ದಾರೆ. ಇದಕ್ಕೆ ಪ್ರಮುಖವಾದ ಕಾರಣ ಅನಕ್ಷರತೆ ಎನ್ನುತ್ತಾರೆ. ಲೇಖಕಿ ಅನಕ್ಷರತೆಯಿಂದ ಆರ್ಥಿಕ ಉನ್ನತಿಯು ಆಗದೆ ರಾಷ್ಟ್ರ ಬಡತನದ, ಹಿಂದೂಳಿದ ದೇಶವೆಂಬ ಹಣೆಪಟ್ಟಿ ಕಟ್ಟಿಕೊಳ್ಳಬೇಕಾಗುತ್ತದೆ.

ರಾಷ್ಟ್ರದಾದ್ಯಂತ ನಡೆಯುತ್ತಿರುವ ಸಾಕ್ಷರತಾ ಆಂದೋಲನದ ಪ್ರಯುಕ್ತ ಗ್ರಾಮೀಣ ಭಾಗದ ಮಹಿಳೆಯರು ಕೂಡಾ ಕಲಿಕೆಗೆಯಲ್ಲಿ ತೊಡಗುತ್ತಿರುವುದು ಸಂತೋಷದ ವಿಚಾರವಾಗಿದೆ. ಕಲಿತ ನಾರಿ ಪ್ರಗತಿಗೆ ದಾರಿ ಎನ್ನುವಂತೆ `ಹೆಣ್ಣು ಕಲಿತರೆ ಕುಟುಂಬವು ಕಲಿತಂತೆ` ಕಾರಣ `ಕಲಿತ ನಾರಿ ಕುಟುಂಬದ ಪ್ರಗತಿಗೆ ದಾರಿ` ಯಾಗುತ್ತಾಳೆ. `ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ` ಎಂದು ಹೇಳುವ ಹಾಗೆ ತನ್ನ ಮಕ್ಕಳಿಗೆ ಸರಿಯಾದ ಶಿಕ್ಷಣ ಕೊಡಬಲ್ಲಳು. ರಾಷ್ಟ್ರದ ಸಮಸ್ತ ಪ್ರಜಾಕೋಟಿ ಗಂಡು ಹೆಣ್ಣೆಂಬ ಲಿಂಗಭೇದವಿಲ್ಲದೆ ಸಾಕ್ಷರರಾದರೆ ಮಾತ್ರ ಆ ರಾಷ್ಟ್ರದ ಪ್ರಗತಿ ಸಾಧ್ಯ. ಈ ನಿಟ್ಟಿನಲ್ಲಿ ದಾಪುಗಾಲು ಹಾಕುತ್ತಿರುವ ಭಾರತ ಗುರಿ ತಲುಪಲು ದೂರ ನಡೆದು ಹೋಗಬೇಕಾಗಿದೆ.

---

1. ಕಣ್ಣ ಅಳತೆ -ಪ್ರೊ. ಡಿ. ಲಿಂಗಯ್ಯಾ ಪು.ಸಂ. 11

ಹಳ್ಳಿಗಳ ನಾಡೆಂದು ಕರೆಯಲ್ಪಡುವ ಭಾರತದಲ್ಲಿ ಶೇ. ೭೫ ಮಹಿಳೆಯರು ತಮ್ಮ ಕುಟುಂಬದ ಕೆಲಸ ಕಾರ್ಯಗಳಲ್ಲಿ ಪಾಲುಗೊಂಡು ತಮ್ಮ ಪರಿವಾರಕ್ಕೆ ನೆರವಾಗುವುದರಲ್ಲೇ ತೃಪ್ತಿಪಡುತ್ತಾರೆ. ತಾವು ಜೀವಂತವಿರುವುದಷ್ಟೇ ಬದುಕು. ಎಂದು ತಿಳಿದ ಮಹಿಳೆಯರ ಸಂಖ್ಯೆಯೇ ಹೆಚ್ಚಾಗಿದೆ. ಬದುಕಿಗೆ ಒಂದು ಅರ್ಥವುಂಟು. ಅರ್ಥಪೂರ್ಣವಾಗಿ ಬದುಕಿದಾಗ ಮಾತ್ರ ಜೀವನ ಸಾರ್ಥಕವಾಗುತ್ತದೆ. ಅದಕ್ಕಾಗಿ ಮಹಿಳೆಯರು ಸಾಕ್ಷರರಾಗುವುದು ಅಗತ್ಯವಾಗಿದೆ. ವಿದ್ಯೆ ಹುಟ್ಟಿನಿಂದ ಬರುವಂತಹದಲ್ಲ. ಕಲಿಕೆಯಿಂದ ಬರುವಂತಹ ಜಾತಿ, ಮತ, ವರ್ಗ, ವರ್ಣ ಕಾಲ ದೇಶಗಳನ್ನು ಪರಿಗಣಿಸದೆ ಯಾರು ಬೇಕಾದರೂ ಯಾವಾಗ ಬೇಕಾದರು ಶಿಕ್ಷಣ ಪಡೆಯಲು ಸಾಧ್ಯವಿದೆ. ಇದಕ್ಕೆ ತೆರೆದ ಮನಸ್ಸು ಬೇಕು.

ನಮ್ಮ ಸಮಾಜದಲ್ಲಿ ಶೋಷಿತ ವರ್ಗದ ಅದರಲ್ಲೂ ಮಹಿಳೆಯರ ಆರ್ಥಿಕ ಅಭಿವೃದ್ಧಿಗೆ ಸಹಕಾರಿ ಕ್ಷೇತ್ರ ಒಂದು ದಿವ್ಯ ಔಷಧಿಯಾಗಿ ಪರಿಣಮಿಸುತ್ತಿದೆ. ಈ ಸಹಕಾರಿ ಕ್ಷೇತ್ರದಿಂದ ಮಹಿಳೆ ಆರ್ಥಿಕ ಭದ್ರತೆ ಪಡೆಯಲು ಸಾಧ್ಯ. ಕೈಗಾರಿಕೆ ಸಹಕಾರ ಬ್ಯಾಂಕಗಳು, ಸಹಕಾರಿ ಕ್ಷೇತ್ರದ ಬ್ಯಾಂಕುಗಳು, ಕೋ-ಆಪರೇಟಿವ ಮಾರ್ಕೆಟಿಂಗ್ ಸೊಸೈಟಿಗಳು, ಹಾಲು ಉತ್ಪಾದಕರ ಸಹಕಾರ ಸಂಘಗಳು, ಮೀನುಗರಿಕೆ , ಕೋಳಿ ಸಾಕಾಣಿಕೆ , ಕೃಷಿ ಸಹಕಾರಿ ಸಂಘಗಳು ಹೀಗೆ ಹಲವಾರು ಮಾದರಿಯ ಸಂಘ ಸಂಸ್ಥೆಗಳು ರಾಷ್ಟ್ರದಲ್ಲಿ ವ್ಯಾಪಕವಾಗಿ ಹರಡಿವೆ. ೧೯೯೨-೯೩ ರಲ್ಲಿ ಮಹಿಳೆಯರಲ್ಲಿನ ಕುಶಲತೆಯನ್ನು ಅಭಿವೃದ್ಧಿಪಡಿಸಲು ಸಹಕಾರಿ ಕ್ಷೇತ್ರದಲ್ಲಿ ವಿಶೇಷ ರೀತಿಯ ಕಾರ್ಯ ಯೋಜನೆಯನ್ನು ಸಿದ್ದಪಡಿಸಿ ಜಾರಿಗೆ ತರಲಾಯಿತು. ಎಲೆಕ್ಟ್ರಾನಿಕ್, ಕಂಪ್ಯೂಟರ್, ಕೈ ಗಡಿಯಾರದ ಬಿಡಿ ಭಾಗಗಳ, ಕೈ ಮಗ್ಗದ ಬಟ್ಟೆ ತಯಾರಿಕೆ ಹೀಗೆ ಸರ್ಕಾರ ದೇಶದ ಮಹಿಳೆಯರನ್ನು ಮೇಲೆತ್ತಿರುವ ಕಾರ್ಯ ಮಾಡುತ್ತಿದೆ. ಹೊಸ ಹೊಸ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ ಮಹಿಳೆಯರ ಸ್ಥಿತಿ ಸುಧಾರಣೆಗಾಗಿ ಶ್ರಮಿಸುತ್ತಿದೆ. ಈ ಕಾರ್ಯಕ್ರಮಗಳು ತಿಳಿದುಕೊಳ್ಳಲು ಮಹಿಳೆಯರು ಶಿಕ್ಷಿತರಾಗಬೇಕಾದದ್ದು ಅಗತ್ಯ ಎಂಬ ಮಾತು ಪರೋಕ್ಷವಾಗಿ ಲೇಖಕಿ ಅಭಿಪ್ರಾಯ ವ್ಯಕ್ತಪಡಿಸಿದಂತೆ ಕಾಣುತ್ತದೆ.

ಸಮಕಾಲಿನ ಪ್ರಪಂಚದಲ್ಲಿ ಮಹಿಳೆ ಸಾಕ್ಷರಳಾಗಿ ಬದುಕುವುದು ಅಗತ್ಯವಾಗಿದೆ. ಹೀಗಾದಾಗ ಮಹಿಳೆ ರಾಷ್ಟ್ರದ ಸಮಸ್ತ ಆಗೋ ಹೋಗುಗಳಲ್ಲಿ ಪಾಲ್ಗೊಳ್ಳಲು ಸಾಧ್ಯ. ಚಿಂತನಾಶೀಲಳಾಗಿ ಆಕೆಯು ಸಮಾಜದ ಅಭಿವೃದ್ಧಿಗೆ ನೆರವಾಗಬೇಕು. ಈ ನಿಟ್ಟಿನಲ್ಲಿ ಸಹಕಾರಿ ಕ್ಷೇತ್ರ ಮಹಿಳೆಯರ ಪಾಲಿಗೆ ವರವಾಗಿ ಪರಿಣಮಿಸಿದೆ. ಲೇಖಕಿ ಈ ಲೇಖನದ ಮೂಲಕ ತಂತ್ರಜ್ಞಾನದ ಯುಗದಲ್ಲಿ ಮಹಿಳೆ ಸಬಲಳಾಗಬೇಕಾದರೆ ಆರ್ಥಿಕವಾಗಿ ಸದೃಡಳಾಗಬೇಕಾದರೆ ಅಗತ್ಯವಾಗಿ ಆಕೆಗೆ ಸಾಕ್ಷರತೆ ಬೇಕು ಎಂಬುವ ಅಂಶವು ಮುಖ್ಯವಾಗಿ ಹೇಳಲು ಹೊರಟಿದ್ದಾರೆ.

ವರದಕ್ಷಿಣೆ ನಿರ್ಮೂಲನೆಯಲ್ಲಿ ಮಹಿಳೆಯರ ಪಾತ್ರ :

ನಮ್ಮ ದೇಶ ಎದುರಿಸುತ್ತಿರುವ ಸಾಮಾಜಿಕ ಸಮಸ್ಯೆಗಳಲ್ಲಿ ವರದಕ್ಷಿಣೆ ಕೂಡಾ ಒಂದಾಗಿದೆ. ಹೆಣ್ಣು ಮಗು ಹುಟ್ಟಿದಾಗ ಹುಣ್ಣು ಹುಟ್ಟಿದಂತೆ ಎಂದು ಹೇಳುವುದು ಈ ಕಾರಣಕ್ಕಾಗಿಯೆ. ನಮ್ಮ ಸಮಾಜಕ್ಕೆ ಬಹಳ ಕಾಲದಿಂದಲೂ ಅಂಟಿಕೊಂಡಿರುವ ಈ ಮಹಾ ಜಾಡ್ಯ ಇದರ ವ್ಯಾಮೋಹ ದಿನೇ ದಿನೇ ಹೆಚ್ಚಾಗುತ್ತಿದ್ದು. ವಯಸ್ಸಿಗೆ ಒಂದು ಹೆಣ್ಣುಗಳು ಜೀವನ ಪರ್ಯಂತ ಕುಮಾರಿಯರಾಗಿಯೇ ಉಳಿಯುವ ಸ್ಥಿತಿಗೆ ತಂದು ನಿಲ್ಲಿಸಿದೆ. ವರದಕ್ಷಿಣೆಗಾಗಿ ಮದುವೆಗಳು ಮುರಿಯುತ್ತಿವೆ. ಒಂದು ವೇಳೆ ವಿವಾಹವಾದರೂ ನಂತರ ಹೆಣ್ಣು ಬಲಿಪಶುವಾಗುತ್ತಿದೆ. ಅನೇಕ ಮಹಿಳೆಯರ ಮೇಲೆ ಆಗಬಾರದ ಎಲ್ಲಾ ದೌರ್ಜನ್ಯಗಳು ನಡೆಯುತ್ತಿವೆ.

ಜಗತ್ತಿನಲ್ಲಿಯೇ ಬುದ್ಧಿವಂತ ಪ್ರಾಣಿ ಮನುಷ್ಯ ಪ್ರಕೃತಿ ಸಹಜವಾಗಿರುವ ಹೆಣ್ಣು ಗಂಡುಗಳ ಆಕರ್ಷಣೆ ಕಾಮಕ್ಕೆ ಎಡೆಮಾಡಿಕೊಡುತ್ತದೆ. ಇದನ್ನರಿತು ವಿವಾಹ ಎಂಬ ಪವಿತ್ರ ಬಂಧನ ಜಾರಿಗೆ ಬಂದಿದೆ. ಈ ವಿವಾಹ ಪವಿತ್ರವಾದ ಸಂಸ್ಕಾರವಾಗಿದ್ದು, ಗ್ರಹಸ್ಥಾಶ್ರಮದ ಪ್ರಮುಖ ಪಟ್ಟವಾಗಿದೆ. ವಿವಾಹ ಎಂದಾಕ್ಷಣ ವರದಕ್ಷಿಣೆ ಎಂಬ ಪದ ಅದರ ಬೆನ್ನ ಹಿಂದೆಯೇ ಬರುತ್ತದೆ. ಏಕೆಂದರೆ ವಿವಾಹಕ್ಕು ವರದಕ್ಷಿಣೆಗೂ ಬಿಡಲಾಗದ ನಂಟಾಗಿದೆ. ಇಂದಿನ ವಿವಾಹ ಪದ್ಧತಿ ತನ್ನ ಪವಿತ್ರತೆಯನ್ನು ಕಳೆದುಕೊಳುತ್ತಿದ್ದು ಅದು ವ್ಯಾಪಾರದ ಮಾರುಕಟ್ಟೆಯಾಗಿ ಪರಿಣಮಿಸುತ್ತಿದೆ. ಹಿಂದೆ ಹೆಣ್ಣಿಗೆ ಗೌರವವಾಗಿ ಕೊಡುತ್ತಿದ್ದ ಕನ್ಯ ಶುಲ್ಕ ಇಂದು ವರದಕ್ಷಿಣೆಯಾಗಿದೆ. ನಮ್ಮಲ್ಲಿ ಬಹುಮಟ್ಟಿಗೆ ಪ್ರಚಲಿತದಲ್ಲಿದುದು ವರದಕ್ಷಿಣೆ ಪದ್ಧತಿ ಹೆಣ್ಣು ಋತಮತಿಯಾಗುವ ಮೊದಲೆ ಮದುವೆ ಮಾಡಿಕೊಡುತ್ತಿದ್ದರು. ಹೆಣ್ಣು ಮಕ್ಕಳಿಗೆ ಶಾಲೆಗೆ ಕಳುಹಿಸಲು ಮುಂದಾದಾಗ ಋತುಮತಿಯಾಗಿ ಕೆಲವು ವರ್ಷಗಳ ನಂತರ ವಧುವಿಗೆ ವಯಸ್ಸು ಹೆಚ್ಚಾಯಿತು ಎಂಬ ಕಾರಣಕ್ಕಾಗಿ ಜವಾಬ್ದಾರಿಯಿಂದ ಜಾರಿಕೊಳ್ಳುವ ಉದ್ದೇಶದಿಂದ ವರದಕ್ಷಿಣೆ ಜಾರಿಗೆ ಬಂದಿದೆ.

ಆಧುನಿಕ ವಚನಕಾರ್ತಿ ಕಮಲಾ ಹಂಪನಾರ ವಚನ ವರದಕ್ಷಿಣೆಯಿಂದ ನಡೆಯುತ್ತಿರುವ ಘಟನೆ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

[1]ಅಕ್ಷತೆ ಸುರಿದ ಕೈಯೆಲ್ಲೇ
ಸೀಮೆ ಎಣ್ಣೆ ಸುರಿವರಯ್ಯ
ಅರಶಿಣ ಹಚ್ಚಿದ ಕೈಯಲ್ಲೆ
ಬೆಂಕಿಹಚ್ಚಿ ಸುಡುವರಯ್ಯಾ
ಮುದ್ದು ಮಾಡಿ ಮನೆ ತುಂಬಿಸಿ ಕೊಂಡವರೆ
ಹೆಣ ಮಾಡಿ ಆಚೆ ಸಾಗಿಸುವರಯ್ಯ ಕಮಲ ಪ್ರೀಯ

1. ಸ್ವತಂತ್ರೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ -ಪ್ರೊ. ಎಲ್.ಎಸ್. ಶೇಷಗಿರಿರಾವ ಪು.ಸಂ. 67

ವರದಕ್ಷಿಣೆಯ ವ್ಯಾಮೋಹಕ್ಕೆ ಅನೇಕ ಮಹಿಳೆಯರು ಬಲಿಯಾಗುತ್ತಿದ್ದು ವಿವಾಹಿತ ಸ್ತ್ರೀ ನರಕಯಾತನೆ ಅನುಭವಿಸುವ ಸ್ಥಿತಿಯು ಬಂದೊದಗಿದೆ. ದಿನೇ ದಿನೇ ವರದಕ್ಷಿಣೆಯ ಬೆಲೆ ಏರುತ್ತಿರುವುದು ಹೆಣ್ಣ ಹೆತ್ತ ಮಧ್ಯಮ ವರ್ಗದವರು ನಿದ್ದೆ ಹಾಳು ಮಾಡುತ್ತಿದೆ. ಮಹಿಳೆಯ ಗೌರವ ಕಡಿಮೆಯಾಗುತ್ತಿದೆ. ಎನ್ನುವಂತೆ ಮಹಿಳೆಯರು ವರದಕ್ಷಣೆಯ ವಿರುದ್ಧ ಧ್ವನಿ ಎತ್ತಬೇಕಾಗಿದೆ.

ಲೇಖಕಿ ಆಧುನಿಕ ವಿವಾಹ ಪದ್ಧತಿಗಳಾದ ಪ್ರೇಮ ವಿವಾಹ ,ಅಂತರಜಾತಿ, ವಿವಾಹ, ನೊಂದಣಿ ವಿವಾಹ, ವರದಕ್ಷಿಣೆ ಹೋಗಲಾಡಿಸುವ ಅಸ್ತ್ರವೆಂಬುವ ನಿಲುವು ತಾಳಿದ್ದಾರೆ. ಪ್ರತಿ ಮಾತೆಯೂ ಹೆಣ್ಣು ಮಕ್ಕಳಿಗೆ ವರದಕ್ಷಣೆ ಕೊಡಬಾರದು ಗಂಡು ಮಕ್ಕಳಿಗೆ ತೆಗೆದುಕೊಳ್ಳಬಾರದು ಎಂಬ ಧೃಢವಾದ ನಿಲುವು, ಕಲಿತ ಮಹಿಳೆಯರು ಮಹಿಳಾ ಸಂಘ, ಯುವತಿಯರ ಸಂಘಗಳು ಸ್ಥಾಪಿಸಿ ವರದಕ್ಷಿಣೆಯ ವಿರುದ್ಧ ಪುಟಿದೇಳುವಂತಹ ಭಾಷಣ, ಉಪನ್ಯಾಸಗಳು ಏರ್ಪಡಿಸಿ ಅವಿದ್ಯಾವಂತ ಮಹಿಳೆಯರ ಗಮನಕ್ಕೂ ಬರುವಂತಹ ರೀತಿಯಲ್ಲಿ ವಿಷಯವನ್ನು ಪ್ರಸ್ತಾಪಿಸಿ ಎಲ್ಲರ ಮನವನ್ನು ಗೆಲ್ಲುವುದರ ಮೂಲಕ ಹಾಗೆಯೇ ಮಹಿಳಾ ಸಾಹಿತಿಗಳು ಪತ್ರಿಕಾ ಸಂಪಾದಕರಾಗಿ, ವರದಿಗಾರರಾಗಿ ಸಮಾಜದ ಮೇಲೆ ಮಹಿಳೆಗೆ ಆಗುತ್ತಿರುವ ದೌರ್ಜನ್ಯದ ಸತ್ಯ ಸಂಗತಿಗಳು ಹೊರ ಹಾಕಬೇಕು.

ವರದಕ್ಷಿಣೆ ನಿರ್ಮೂಲನೆಯಲ್ಲಿ ಮಹಿಳಾ ಜಾಗೃತಿ ಮುಖ್ಯವಾದುದು. ಮಹಿಳೆಯರು ಸಂಘಟಿತರಾದಾಗ ಇದು ಸಾಧ್ಯ. ಹಾಗೆಯೆ ಮಹಿಳಾ ಸಂಘಟನೆಗಳ ಸಂಖ್ಯೆ ಹೆಚ್ಚಾಗಿ ಉತ್ಸಾಹದಿಂದ ಕಾಳಜಿಯಿಂದ ಕಾರ್ಯನಿರ್ವಹಿಸಬೇಕು. ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸುವಲ್ಲಿ ಪ್ರಮುಖ ಪಾತ್ರ ನಿರ್ವಹಿಸಬೇಕು. ಇದು ಬಹಳ ಅಗತ್ಯವಾದ ವಿಚಾರವಾಗಿದೆ. ಹಾಗೆಯೇ ಮಹಿಳೆಯರು ರಾಜಕೀಯ ಪ್ರವೇಶಿಸಿ ಅಧಿಕಾರದ ಚುಕ್ಕಾಣಿ ಹಿಡಿದು ವರದಕ್ಷಿಣೆ ಕುರಿತು ಧ್ವನಿಯಾದಾಗ ವರದಕ್ಷಿಣೆ ಹಂತ ಹಂತವಾಗಿ ನಿಧಾನವಾಗಿ ನಿರ್ಮೂಲನೆ ಆಗುವುದೆಂಬುದು ಲೇಖಕಿಯ ಮನದದ ಮಾತಾಗಿದೆ.

ಶತಮಾನಗಳಿಂದಲೂ ಶೋಷಣೆಗೆ ಒಳಗಾಗುತ್ತಿರುವ ಹೆಣ್ಣು ಹೆತ್ತ ಮಹಿಳೆಯರಿಗೆ ವರದಕ್ಷಿಣೆ ಎಂಬ ಭೂತದಿಂದ ಬಿಡಿಸಿ ಸಾಮಾಜಿಕವಾದ ಸಾಮಾನ್ಯ ಜೀವನ ನಡೆಸುವಂತೆ ತಿಳುವಳಿಕೆ ಕೊಡುವ ಪ್ರಯತ್ನ ಇದಾಗಿದೆ.

**ಸಮಾಜದಲ್ಲಿ ಮಹಿಳೆಯ ಸ್ಥಾನ ಮಾನ :**

ಭಾರತೀಯ ಸಮಾಜ ಮಹಿಳೆಯನ್ನು ಪೂಜ್ಯನೀಯವಾದ ಮಾತೃವಿನ ಸ್ಥಾನ ನೀಡಿದೆ. ಆಕೆಯನ್ನು ನಾಲ್ಕು ಗೋಡೆಗಳ ಮಧ್ಯೆದಲ್ಲಿಯೇ ಬಂದಿಸುತ್ತಾ ಬಂದಿದೆ. ಆದರೆ ಮಹಿಳೆ ಅದೇ ಗೌರವದಲ್ಲಿ ಉಳಿಸಿಕೊಡು ಬಂದಿದ್ದಾಳೆ. ಕಾಲ ಬದಲಾದಂತೆ ಮಹಿಳೆಯು ಬದಲಾಗಿದ್ದಾಳೆ. ಸಮಾಜದ ಸದಸ್ಯೆಯಾಗಿರುವ ಮಹಿಳೆ ಸಮಾಜದ ಬದಲಾವಣೆಗೆ ತಾನು ಕೂಡಾ ಬದಲಾಗುವ

ಆಶಾಭಾವ ಹೊಂದಿದ್ದಾಳೆ. ಭಾರತೀಯ ಮಹಿಳೆಯ ಬದಲಾವಣೆಯ ಹಿಂದೆ ಜಾಗತೀಕರಣದ ಪ್ರಭಾವ ದಟ್ಟವಾಗಿ ಹರಡಿದ್ದು ಉಲ್ಲೇಖಿಸಬಹುದಾಗಿದೆ.

ಪ್ರಪಂಚದ ಜೀವರಾಶಿಯನ್ನು ವಿಂಗಡಿಸಿದ್ದಾಗ ಅಲ್ಲಿ ಗೋಚರಿಸುವ ಪ್ರಭೇದಗಳೆಂದರೆ ಗಂಡು ಹೆಣ್ಣು ಕೋಟ್ಯಂತರ ವರ್ಷಗಳ ಇತಿಹಾಸದಲ್ಲಿ ಮಹಿಳೆಗೆ ಇರುವ ಸ್ಥಾನಮಾನಗಳಲ್ಲಿ ಏರುಪೇರುಗಳಾಗುತ್ತಾ ಬಂದಿವೆ. ಶಿಲಾಯುದ ಮಹಿಳೆಯು ಪುರುಷನಿಗಿಂತ ಉನ್ನತವಾದ ಸ್ಥಾನದಲ್ಲಿದ್ದಳು. ಹೆಣ್ಣು ತಾನಿರುವ ಗುಂಪಿನ ನಾಯಕಿಯು ಆಗಿದ್ದಳು. ವೇದಗಳಲ್ಲಿ ದೊರಕುವ ಉಲ್ಲೇಖಗಳ ಪ್ರಕಾರ ಆ ಕಾಲದಲ್ಲಿ ಸ್ತ್ರೀಯರಿಗೆ ಗೌರವಯುತವಾದ ಸ್ಥಾನಮಾನಗಳಿದ್ದು ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಪುರುಷನಿಗೆ ಸರಿ ಸಮಾನವಾಗಿ ಮಹಿಳೆಯು ಪಾತ್ರವಹಿಸಿದ್ದು ವೇದಗಳು ಗುರುಸಿಸಿದೆ. ಮುಂದೆ ಮಧ್ಯಕಾಲದಲ್ಲಿ ಸ್ತ್ರೀಯರು ಸ್ವಾತಂತ್ರ್ಯ ಕಳೆದುಕೊಂಡು ಪರದಾ ಪದ್ಧತಿಯಲ್ಲಿ ಜೀವಿಸುವಂತಾಯಿತು.

ಮನುಸ್ಯತಿಕಾರನ ಪ್ರವೇಶ ಭಾರತೀಯ ಮಹಿಳೆಯ ಸ್ಥಾನವನ್ನು ಕೆಳಮಟ್ಟದಾಗಿ ಮಾಡಿ ಅವಳ ಸ್ವಾತಂತ್ರ್ಯ ಕಸಿದುಕೊಂಡು ಮನುಸ್ಮೃತಿ ರಚನೆ ಮಾಡಿದನು. ಈ ಕಾಲದಲ್ಲಿ ಹೆಣ್ಣು ಎಲ್ಲಾ ವಿಧದಲ್ಲಿ ತುಳಿತಕ್ಕೆ ಒಳಗಾದರು ವಿದ್ಯೆ ಪಡೆಯುವ ಅಧಿಕಾರದಿಂದ ಪಾರಾದಳು. ಅಸ್ಪ್ರಶ್ಯಳಂತೆ ಕಾಣುವ ಸ್ಥಿತಿ ಬಂದೊದಗಿತ್ತು. ಧರ್ಮ ಸಂಸ್ಕಾರ, ಉಪನಯನಗಳು ಮಹಿಳೆಯಿಂದ ದೂರಾದವು.

ಹನ್ನೆರಡನೆಯ ಶತಮಾನದ ಬಸವಾದಿ ಶಿವಶರಣರು ನಡೆಸಿದ ವಿಚಾರ ಕ್ರಾಂತಿಯ ಫಲವಾಗಿ ಹೆಣ್ಣಿಗೆ ಒಂದು ಸುಂದರವಾದ ಅವಕಾಶ ಕಲ್ಪಿತವಾಯಿತು. ಹೆಣ್ಣು ಗಂಡೆಂಬ ಭೇದವನ್ನು ಅಳಿಸುವ ಪ್ರಯತ್ನ ಮಹಿಳೆಯಿಂದ ನಡೆಯಿತು.

[1]ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವ ಆತ್ಮಾ ಗಂಡು ಅಲ್ಲಾ
ಹೆಣ್ಣು ಅಲ್ಲ ಕಾಣಾ ರಾಮನಾಥ.

ಲೇಖಕಿ ಈ ಲೇಖನದಲ್ಲಿ ಮಹಿಳೆ ಯಾವುದಲ್ಲಿಯೂ ಕಡಿಮೆ ಅಲ್ಲಾ ಎಂಬುದನ್ನು ಸಾಧಿಸಲು ಅಲ್ಲಮಪ್ರಭು, ಬಸವಣ್ಣ, ಚನ್ನಬಸವಣ್ಣ, ಮಡಿವಾಳ ಮಾಚಿದೇವ, ಸಮಗಾರ ಹರಳಯ್ಯ, ಡೋಹರ ಕಕ್ಕಯ್ಯ, ಮುಂತಾದ ಹಲವಾರು ಶರಣರನ್ನು ಬೌದ್ಧಿಕ ಸಾಮರ್ಥ್ಯವನ್ನು ತಮ್ಮ ವಚನಗಳ ಮುಖಾಂತರ ನೀಡಿದ ಅಕ್ಕಮಹಾದೇವಿ, ನೀಲಾಂಬಿಕೆ, ಗಂಗಾಂಬಿಕೆ, ಲಕ್ಕಮ, ಸತ್ಯಕ್ಕ , ಬೊಂತಾದೇವಿ, ಸಂಕವ್ವೆ ಕಾಳವ್ವ ಮುಂತಾದ ಮಹಿಳೆಯರು ಇಂದಿಗೂ ಪ್ರಾತಃ ಸ್ಮರಣೀಯರಾಗಿದ್ದಾರೆ.

---
1. ಸಾಹಿತ್ಯ ಸೌರಭ -ಜಯದೇವಪ್ಪ ಜೈನಕೇರಿ ಪು.ಸಂ.12

ಲೇಖಕಿ ಈ ಲೇಖನದ ಮೂಲಕ ಮಹಿಳೆ ನಡೆದುಬಂದ ದಾರಿಯನ್ನು ಸ್ಪಷ್ಟ ಮಾಡಲು ಹೊರಟಿದ್ದಾರೆ. ಇಂಗ್ಲೀಷರ ವಿರುದ್ಧ ಹೋರಾಡಿದ ಕಿತ್ತೂರಿನ ವೀರ ರಾಣಿ ಚೆನ್ನಮ್ಮ, ಝಾನ್ಸಿಯ ರಾಣಿ ಲಕ್ಷ್ಮಿಬಾಯಿಯನ್ನು ಸ್ಮರಿಸಿರುವ ಲೇಖಕಿ ಸ್ವಾತಂತ್ರ್ಯ ಪೂರ್ವದಲ್ಲಿ ಗಾಂಧಿಜಿ, ನೆಹರು, ಸುಭಾಷಚಂದ್ರ ಭೋಸ, ವಲ್ಲಭಾಯಿ ಪಟೇಲರ ನೇತೃತ್ವದ ಭಾರತ ಸ್ವಾತಂತ್ರ್ಯ ಆಂದೋಲನದಲ್ಲಿ ಪಾಲ್ಗೊಂಡ ಸರೋಜಿನಿ ನಾಯ್ಡು, ವಿಜಯಲಕ್ಷ್ಮಿ ಪಂಡಿತರನ್ನು ಚಿನ್ನದರಾಣಿ ಎಂದು ವಿಶ್ವಖ್ಯಾತಿ ಪಡೆದ ಪಿ.ಟಿ. ಉಷಾ, ಎವರೆಸ್ಟ ಆರೋಹಣ ಮಾಡಿ ಜಗತ್ತನ್ನೇ ವಿಸ್ಮಯಗೊಳಿಸಿದ ಬಚೇಂದ್ರಿಪಾಲ್, ಕರ್ನಾಟಕದ ಪ್ರಥಮ ಮಹಿಳಾ ಪೈಲಟ ಸೌದಾಮಿನಿ ದೇಶಮುಖ ಸಾಹಿತ್ಯ ಕ್ಷೇತ್ರದಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದ ಅಮೃತಾ ಪ್ರೀತಮ್ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಾಧನೆಗಳಾದ ಸಿ.ಸಿ. ಉಪಾ, ಪ್ರತಿಭಾ ನಂದಕುಮಾರ, ಮುಕ್ತಾಯಕ್ತ, ಅನುಪಮ ನಿರಂಜನ, ಗೀತಾ ನಾಗಭೂಷಣ, ಕಮಲಾ ಹಂಪನರವನ್ನು ಸಾಧನೆ ಕೊಂಡಾಡಿದ್ದಾರೆ.

ಮಹಿಳೆಯರು ಇಂದು ಯಾವುದರಲ್ಲಿಯೂ ಹಿಂದೆ ಉಳಿದಿಲ್ಲ ಎಂಬ ವಾದವನ್ನು ಲೇಖನದ ಮುಖ್ಯ ಆಶಯವಾಗಿದೆ. ಬ್ಯಾಂಕರ್ಸ ಆಗಿ, ಕೈಗಾರಿಕೋದ್ಯಮಿಯಾಗಿ, ಕ್ರೀಡಾಪಟುವಾಗಿ, ರಾಜಕೀಯ ಮಂತ್ರಿಗಳಾಗಿ, ಸಮಾಜ ಸೇವಕಿಯಾಗಿ ಎಲ್ಲಾ ಕ್ಷೇತ್ರದಲ್ಲಿ ಕಾಣಿಸಿಕೊಂಡಿದ್ದಾಳೆ. ಸಹಕಾರ, ಪತ್ರಿಕೋದ್ಯಮ, ವಿಜ್ಞಾನ, ಶಿಕ್ಷಣ, ತಂತ್ರಜ್ಞಾನ, ಪೋಲೀಸ ಇಲಾಖೆ, ರಕ್ಷಣಾ ಇಲಾಖೆ ಮೊದಲಾದ ಕ್ಷೇತ್ರಗಳಲ್ಲದೆ ದೇಶ ವಿದೇಶಗಳ ಗಮನ ಸೆಳೆದಿರುವ ಭಾರತೀಯ ಮಹಿಳೆ ನಡೆದು ಬಂದ ಕಲ್ಲು ಮುಳ್ಳಿನ ದಾರಿ ಎಂದು ಹೇಳುವಲ್ಲಿ ಮಹಿಳೆಯರು ಮುಂದೆ ಬರಬೇಕು ಎಂದು ಸಂದೇಶ ಲೇಖನದಲ್ಲಿ ಪರೋಕ್ಷವಾಗಿ ಚಿತ್ರಿಸಲಾಗಿದೆ.

**ಪ್ರಗತಿಯ ಪಥದಲ್ಲಿ ಭಾರತೀಯ ನಾರಿ :**

ಯಶೋದಮ್ಮ ಸಿದ್‌ಬಟ್ಟೆರವರ ಈ ಲೇಖನವು ಭಾರತ ೧೯೯೭ ರಲ್ಲಿ ೫೦ನೇ ಸ್ವಾತಂತ್ರ್ಯದ ಸುವರ್ಣ ಮಹೋತ್ಸವ ಆಚರಿಸಿಕೊಂಡ ಸಂದರ್ಭದಲ್ಲಿ ಸ್ವಾತಂತ್ರ್ಯದ ನಂತರ ಮಹಿಳೆಯ ಸಾಧನೆ ಪ್ರಗತಿಯ ಮೇಲೆ ಬೆಳಕು ಚಲ್ಲುವ ಲೇಖನ ಇದಾಗಿದೆ.

ದೇಶದ ಸ್ವಾತಂತ್ರ್ಯದ ನಂತರ ೫೦ ವರ್ಷಗಳಲ್ಲಿ ಮಹಿಳೆಯರು ಶಿಕ್ಷಿತರಾಗಲು, ಸಂಘಟಿತರಾಗಲು, ಕೂಡಿ ಹೋರಾಟ ನಡೆಸಲು, ತಮ್ಮ ಬದುಕಿಗೆ ಅರ್ಥ ಕಲ್ಪಿಸಿಕೊಳ್ಳಲು ತುಂಬಾ ಹೆಣಗಾಡಬೇಕಾಯಿತು. ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ತಮ್ಮ ಪ್ರತಿಭೆಯನ್ನು ತೋರಿಸಲು ಅಪಾರವಾಗಿ ಶ್ರಮಿಸಿದ್ದಾರೆ. [1]ಮಾನವನು ತನ್ನ ಅಗತ್ಯಗಳಿಗೆ ಅನುಗುಣವಾಗಿ ಆಯಾ ಸನ್ನಿವೇಶ ಮತ್ತು ಸಂದರ್ಭಗಳನ್ನು ಬಳಸಿಕೊಳ್ಳುತ್ತಾನೆ. ಅವನು ತನ್ನತನವನ್ನು ಉಳಿಸಿಕೊಳ್ಳಲು ಸುತ್ತ ಮುತ್ತಲಿನ ಪರಿಸರದೊಡನೆ ಹೋರಾಟ ನಡೆಸಬೇಕಾದುದು ಅನಿವಾರ್ಯ ಎನ್ನುವಂತೆ ಮಹಿಳೆಯರು

---

1. ವಿ.ಕೃ.ಗೋಕಾಕರ ಭಾರತ ಸಿಂಧೂ ರಶ್ಮಿ -ಡಾ. ಟಿ.ವಿ.ಸುಬ್ರಮಣ್ಯ.

ನೆಲೆಕಂಡುಕೊಳ್ಳಲು ಹೋರಾಟ, ಪ್ರತಿಭಟನೆ, ಪ್ರಯತ್ನಗಳ ಮೂಲಕ ತನ್ನತನ ಕಂಡುಕೊಳ್ಳಲು ಹೋರಾಟ ಮಾಡಬೇಕಾಯಿತು.

ಸ್ವಾತಂತ್ರ್ಯದ ನಂತರದ ಮಹಿಳೆಯರು ಭಾರತದ ವಿವಿಧ ಭಾಗಗಳಲ್ಲಿ ಉನ್ನತ ಹುದ್ದೆಗಳನ್ನು ಸ್ವೀಕರಿಸಿದ್ದಾರೆ. ಸರೋಜನಿ ನಾಯ್ಡು ಉತ್ತರ ಪ್ರದೇಶದ ರಾಜ್ಯಪಾಲರಾಗಿ ಇದು ದೇಶದ ಮೊದಲ ಮಹಿಳಾ ರಾಜ್ಯಪಾಲರೆಂಬ ಹೆಗ್ಗಳಿಕೆಯು ಪಡೆದಿದೆ. ಸುಚೇತ ಕೃಪಲಾನಿ ಮೊದಲ ಮಹಿಳಾ ಮುಖ್ಯಮಂತ್ರಿಯಂತಲು ಹೊಸ ಇತಿಹಾಸ ಬರೆದಿದ್ದಾರೆ. ಹಾಗೆಯೇ ವಿಶ್ವವೇ ಬೆರಗುಗೊಳ್ಳುವಂತೆ ಸ್ಥಾನ ಹಾಗೂ ಸೇವೆ, ಧೈರ್ಯ, ತ್ಯಾಗ ಮೊದಲಾದವುಗಳನ್ನು ಮೆಟ್ಟಿ ನಿಂತ ದೇಶದ ಮೊದಲ ಮಹಿಳಾ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಒಬ್ಬ ಧೀರ ಮಹಿಳೆ ಎನಿಸಿಕೊಂಡರು.

ಅವರ ಅಧಿಕಾರದ ಅವಧಿಯಲ್ಲಿ ಮಾಡಿದ ಸಾಧನೆಗಳನ್ನು ಮೇಲುಕು ಹಾಕಿ ಅವರ ಧೈರ್ಯ, ತ್ಯಾಗ, ಛಲ ಕೊಂಡಾಡಿದ್ದಾರೆ. ಇವರ ಪ್ರತಿಭೆಗೆ ಹಿಡಿದ ಕೈಗನಾಡಿಯಾಗಿದೆ. ಸ್ತ್ರೀಶಕ್ತಿ ಜಾಗೃತಗೊಂಡಾಗ ಒಬ್ಬ ಮಹಿಳೆ ಏನನ್ನು ಬೇಕಾದರೂ ಸಾಧಿಸಬಲ್ಲಳು ಎಂಬುದನ್ನು ಇಂದಿರಾಗಾಂಧಿ ಜ್ವಲಂತ ಸಾಕ್ಷಿಯಾಗಿದ್ದಾರೆ ಇಂದಿಗೂ ದೇಶದ ಪ್ರತಿಯೊಬ್ಬ ಬಾಯಿಮಾತಾಗಿದ್ದಾರೆ.

ಭಾರತೀಯ ಮಹಿಳೆ ರಾಜಕೀಯವಲ್ಲದ ಐ.ಎ.ಎಸ್., ಐ.ಪಿ.ಎಸ್., ರಕ್ಷಣೆ, ಅಕ್ಷರ, ನೀರಿಕ್ಷಕ , ಪೈಲಟ, ಎಲ್ಲಾ ಕ್ಷೇತ್ರದಲ್ಲಿ ಛಾಪು ಮಾಡಿಸಬೇಕು ಎಂದು ಹೇಳಿ ಲೋಕಸಭೆ, ರಾಜ್ಯಸಭೆ, ವಿಧಾನ ಸಭೆಯಲ್ಲಿ ಶಾಸಕಿ, ಸಂಸದೆ, ಮಂತ್ರಿಗಳ ಅಧಿಕಾರಿಗಳ ಹೆಸರನ್ನು ಸೂಚಿಸಿದ್ದಾರೆ. ಅವರ ಸೇವೆ ಕೊಂಡಾಡಿದ್ದಾರೆ.

ಕ್ರೀಡಾ ಕ್ಷೇತ್ರದಲ್ಲಿ ಮಹಿಳೆಯ ಸಾಧನೆ ಕೊಂಡಾಡಿದ್ದಾರೆ. ಓಟದಲ್ಲಿ ಪಿ.ಟಿ. ಉಷಾ, ಮಹಿಳಾ ಕ್ರಿಕೆಟ ಕಟ್ಟಿ ಬೆಳೆಸಿದ ಗೀತರಂಗ ಸ್ವಾಮಿ ಭಾರವೆತ್ತುವ ಸ್ಪರ್ಧೆಯಲ್ಲಿ ಕರ್ಣಂ ಮಲ್ಲೇಶ್ವರಿ ಮೊದಲಾದವರನ್ನು ಹೆಸರಿಸಿದ್ದಾರೆ. ಹಾಗೆಯೇ ಕನ್ನಡ ಸಾಹಿತ್ಯ ಕ್ಷೇತ್ರ ಕೃಷಿಗೈದಿರುವ ತ್ರೀವೇಣಿ, ಅನುಪಮಾ ನಿರಂಜನ, ಟಿ. ಸುನಂದಮ್ಮ, ಬಿ.ಟಿ. ಲಲಿತಾ ನಾಯಕ, ಗೀತಾ ನಾಗಭೂಷಣ ಶಾಂತಾದೇವಿ ಮಾಳವಾಡ, ಜಯದೇವಿ ತಾಯಿ ಲಿಗಾಡೆ ಮೊದಲಾದ ಮಹಿಳಾ ಸಾಹಿತಿಗಳ ಹೆಸರು ಸೂಚಿಸಿ ಸಂಗೀತ ಕ್ಷೇತ್ರದಲ್ಲಿ ಸಾಧನೆಗೈದ ಗಂಗೂಬಾಯಿ ಹಾನಗಲ್, ಎಂ.ಎಸ್. ಸುಬ್ಬಲಕ್ಷ್ಮಿಯವರನ್ನು ನೆನೆದಿದ್ದಾರೆ.

ಶತಮಾನಗಳಿಂದಲೂ ಶೋಷಣೆ ಒಳಗಾಗಿದ್ದ ಮಹಿಳೆಯರು ಕಾಲ ಮರುಳಿದಂತೆ ಬದಲಾವಣೆಯೇ ಅಸ್ತ್ರವಾಗಿ ಮಾಡಿಕೊಂಡು ಮುಂದೆ ಬಂದಿರುವುದು ಸಾಧನೆಗೆ ಮುಖ್ಯ ನೆಲೆ ಎಂಬುದು ಲೇಖಕಿಯ ಮನದ ಮಾತಾಗಿದೆ. ಮಹಿಳೆಯನ್ನು ಅಸ್ಪ್ರಶ್ಯಳಿಗಿಂತ ಕೀಳಾಗಿ ಕಾಣುವ

ಮನೋಭವ ಬೆಳೆದಿದೆ. ಇದಕ್ಕೆ ಕಾರಣ ಮನುಸ್ಮೃತಿಕಾರ. ಹೆಣ್ಣಿನ ಸ್ವಾತಂತ್ರ್ಯವನ್ನು ಮೇಲಿಂದ ಮೇಲೆ ಕಸಿದುಕೊಂಡು ಅವಳನ್ನು ಅಬಲೆಯಾಗಿ ಮಾಡಲಾಗಿದೆ.

ಲೇಖಕಿ ಯಶೋದಮ್ಮ ಸಿದ್‌ಬಟ್ಟೆ ಪ್ರಗತಿಯ ಪಥದಲ್ಲಿ ಭಾರತೀಯ ನಾರಿ ಎಂಬ ಈ ಏಳು ಬಿಡಿ ಬಿಡಿ ಲೇಖನಗಳಲ್ಲಿ ದೇಶ ಸ್ವಾತಂತ್ರ್ಯಕೆಂದು ೫೦ ವರ್ಷಗಳಲ್ಲಿ ಮಹಿಳೆ ಸಾಧಿಸಿದ ಸಾಧನೆಯನ್ನು ಮೇಲೆ ಕಣ್ಣಾಸುವ ಕಾರ್ಯ ಮಾಡಿದ್ದಾರೆ. ನಾಲ್ಕು ಗೋಡೆಯ ಮಧ್ಯೆ ಬಂಧಿತಳಾಗಿದ್ದು ಮಹಿಳೆ ಪೂರ್ಣ ವ್ಯವಸ್ಥೆಯಿಂದ ಹೊರ ಬರದೆ ಸಿಕ್ಕ ಎಲ್ಲಾ ಅವಕಾಶಗಳನ್ನು ಬಳಸಿಕೊಂಡು ಈ ಸಾಧನೆ ಮಾಡಿರುವುದು. ಸಂತಸದಾಯಕ ವಿಚಾರವಾಗಿದೆ. ಆದರೆ ಇಷ್ಟೆಲ್ಲಾ ಸಾಧನೆ ಗೈದರೂ ಮಹಿಳೆಯರ ಶೋಷಣೆ ತಪ್ಪಿಲ್ಲ ಕಿರುಕುಳ, ಲೈಂಗಿಕ ಹಿಂಸೆ, ಅವಮಾನ, ಇನ್ನು ತಪ್ಪಿಲ್ಲ. ಈ ದೇಶದಿಂದ ಇವುಗಳು ದೂರವಾಗಬೇಕಾದ ಮಹಿಳೆ ಸಾಕ್ಷರಳಾಗಬೇಕು ಎಂಬುದನ್ನು ತನ್ನ ಅಂತರಾಳದ ನುಡಿಯಾಗಿಸಿಕೊಂಡಿದ್ದಾರೆ. ಲೇಖಕಿ ಇದೇ ಮಾತನ್ನು ಡಾ. ಬಿ.ಆರ್.ಅಂಬೇಡ್ಕರ ಉಚ್ಚರಿಸಿದ್ದಾರೆ. ಕೆಟ್ಟ ಗುಣಗಳಿಂದ ದೂರ ಉಳಿದು ಸ್ವಚ್ಛತೆಯ ಬದುಕು ಸಾಗಿಸಬೇಕು. ತಾವು ವಿದ್ಯಾವಂತರಾಗುವುದು ಜೊತೆಗೆ ತಮ್ಮ ಮಕ್ಕಳಿಗೆ ಸಾಕ್ಷರರನ್ನಾಗಿ ಮಾಡಬೇಕು.

**ಬೀದರ ಜಿಲ್ಲೆಯ ಮಹಿಳಾ ಸಾಹಿತಿಗಳು :**

ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ಇವರಿಂದ ಪ್ರಕಟಗೊಂಡಿರುವ ಈ ಕೃತಿಯು ೨೦೦೬ ನೇ ಸಾಲಿನಲ್ಲಿ ಬೀದರನಲ್ಲಿ ಜರುಗಿದ ೭೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸವಿ ನೆನಪಿಗಾಗಿ ಒಟ್ಟು ೭೨ ಗ್ರಂಥಗಳನ್ನು ಪ್ರಕಟಗೊಳಿಸಲಾಯಿತು. ಇವುಗಳಲ್ಲಿ ಬೀದರ ಜಿಲ್ಲೆಯ ಮಹಿಳಾ ಸಾಹಿತಿಗಳು ಯಶೋದಮ್ಮ ಸಿದ್‌ಬಟ್ಟೆ ಬರೆದಿರುವ ಚಿಕ್ಕ ಕೃತಿ ಇದಾಗಿದೆ. ಗಾತ್ರದಲ್ಲಿ ಚಿಕ್ಕದೆಂದೆನಿಸಿದರು ಇದೊಂದು ಅಮೂಲ್ಯವಾದ ಕೃತಿಯಾಗಿದೆ.

ಕರ್ನಾಟಕ ರಾಜ್ಯದ ಮುಕುಟವಾಗಿರುವ ಬೀದರ ಜಿಲ್ಲೆಗೆ ತನ್ನದೇ ಆದ ಇತಿಹಾಸ ಪರಂಪರೆಯನ್ನು ಹೊಂದಿದೆ. ಸಂಸ್ಕೃತಿ, ಕಲೆಗಳ ಬೀಡಾಗಿರುವ ಬೀದರ ಬಿದರಿ ಕಲೆಯಿಂದ ವಿಶ್ವಪ್ರಸಿದ್ಧ ಸ್ಥಳವೆಂದೆನಿಸಿದೆ. ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಅಷ್ಟಕಷ್ಟೇ ಪ್ರಗತಿಯನ್ನು ಕಂಡುಕೊಂಡಿರುವ ಜಿಲ್ಲೆಯು ಇದಾಗಿದ್ದು. ಹಿಂದೂ ಮುಸ್ಲಿಂ ಸಾಂಸ್ಕೃತಿಕ ಬಾಂಧವ್ಯದ ಕೇಂದ್ರವಾಗಿರುವ ಇಲ್ಲಿ ಉರ್ದು, ತೆಲಗು, ಮರಾಠಿ ಭಾಷೆಗಳ ಪ್ರಭಾವಕ್ಕೆ ಒಳಗಾಗಿರುವ ಕನ್ನಡ ಭಾಷೆಯು ವಿಶಿಷ್ಟ ಭಾಷೆಯೆಂದೆನಿಸಿದೆ.

ಲೇಖಕಿ ಯಶೋದಮ್ಮ ಸಿದ್‌ಬಟ್ಟೆ ಕೃತಿಯ ಪ್ರಾರಂಭದಲ್ಲಿ ಬೀದರನ ಐತಿಹಾಸಿಕ ಹೆಸರಿನ ಬಗ್ಗೆ ಉಲ್ಲೇಖಿಸಿದ್ದಾರೆ. ಬೀದರಗೆ `ವಿದುರ ನಗರ` ಎಂದು ಮಹಾಭಾರತದ ಕಾಲದಲ್ಲಿ ಕರೆಯಲಾಗಿದೆ. ನಳದಮಯಂತಿಗಳ ಪ್ರಣಯದ ಉದ್ಯಾನವೆಂದು ಪ್ರತೀತಿಯು ಇದೆ. ಕಾಲಕಾಲಕ್ಕೆ

ಈ ನಗರಕ್ಕೆ ಬ್ೇರೆ ಬೇರೆ ಹೆಸರುಗಳಿಂದ ಕಂಗೊಳಿಸಿದೆ. ಬೀದರನ ಮೂಲ ಶಬ್ದ `ಬಿದಿರು` ಅಂದರೆ ಬಿದಿರು ಬೆಳೆಯುವ ಪ್ರದೇಶ ಅಂತೆಯೇ ಇದಕ್ಕೆ ಬಿದಿರೆ, ಬಿದಿರುಪುರ, ಬಿದಿರೂರು, ಬಿದರಿ ಇತ್ಯಾದಿ ಹೆಸರುಗಳು ಉಲ್ಲೇಖಗೊಂಡಿವೆ. ಮುಸ್ಲಿಂ ಅರಸರ ಕಾಲದಲ್ಲಿ ಅಹಮದಾಬಾದ ಬೀದರ ಹಾಗೂ ಮೊಹಮ್ಮದಾಬಾದ ಬೀದ ಎಂಬ ಹೆಸರು ಬಂದಿದ್ದು. ಈಗ ಬೀದರ ಎಂದಾಗಿದೆ ಎಂಬ ಉಲ್ಲೇಖ ನೀಡಿದ್ದಾರೆ.

ಹತ್ತನೇ ಶತಮಾನದ ಈ ನಾಡಿನಲ್ಲಿ ಆಳ್ವಿಕೆ ನಡೆಸಿದ ಕಲ್ಯಾಣ ಚಾಲುಕ್ಯರ ಕಾಲವು ಸುವರ್ಣಯುಗ ಎಂಬ ಅಂಶ ಪ್ರಸ್ತಾಪಿಸಿದ್ದಾರೆ. ಬಸವಕಲ್ಯಾಣವನ್ನು ರಾಜಧಾನಿಯನ್ನಾಗಿ ಆಳ್ವಿಕೆ ನಡೆಸಿದ ಕಲ್ಯಾಣ ಚಾಲುಕ್ಯರು ಸಾಹಿತ್ಯ ಕ್ಷೇತ್ರದ ಕೊಡುಗೆಯನ್ನು ಸ್ಮರಿಸಿದ್ದಾರೆ. ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದು `ವಿಕ್ರಮಾಂಕ ದೇವ ಚರಿತೆ` ಎಂಬ ಐತಿಹಾಸಿಕ ಗ್ರಂಥ ರಚಿಸಿರುವ ವಿಷಯ ವಿಜ್ಞಾನೇಶ್ವರನ `ಮಿತಾಕ್ಷರ` ಕೃತಿಗಳನ್ನು ಸ್ಮರಿಸಿದ್ದಾರೆ. [1]ಆದರೆ ಭ್ರಾಜಿಷ್ಣು ಬರೆದಿರುವ ವಡ್ಡಾರಾಧನ ಕೃತಿಯ ಉಲ್ಲೇಖ ನೀಡದಿರುವುದು ಪ್ರಶ್ನೆಯಾಗಿ ಉಳಿದಿದೆ.

ಹನ್ನೆರಡನೆಯ ಶತಮಾನದಲ್ಲಿ ನಡೆದ ಕಲ್ಯಾಣ ಕ್ರಾಂತಿ, ಬೀದರ ಇತಿಹಾಸದ ನವೋದಯದ ಕಾಲವೆಂದೆನಿಸಿದ್ದು. ಅಲ್ಲಮಪ್ರಭು, ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಇನ್ನಿತರ ಶರಣ ಶರಣೆಯರು ಕಲ್ಯಾಣವನ್ನು ಭೂಕೈಲಾಶವೆಂದು ಕರೆದಿದ್ದಾರೆ. ಇಲ್ಲಿ ಕ್ರಾಂತಿ ಎಂದರೆ ವೀರಶೈವ ಮತದ ಪುನರುತ್ಥಾನವೆಂದು ಅರ್ಥಿಸದೆ ಇದನ್ನು ಮಾನವ ಧರ್ಮದ ಮೂಲವನ್ನು ಅರಿಯುವ ಕಾಲ , ಬದುಕಿನ ಮೌಲ್ಯಗಳ ಪುನರ್ವಿಮರ್ಶೆಯ ಪರ್ವಕಾಲ ಸಮಾಜ ಮತ್ತು ಧರ್ಮ ಎಂಬ ಪರಿಕಲ್ಪನೆಗೆ ಹೊಸ ವ್ಯಾಖ್ಯಾನ ಬರೆದ ಕಾಲವೆಂದು ಹೇಳಲಾಗಿದೆ.

ಶರಣರು ಕಟ್ಟ ಬಯಸಿದ ಸಮಾಜದ ಆದರ್ಶಗಳಲ್ಲಿ ಸ್ತ್ರೀ ಮತ್ತು ಪುರುಷ ಭೇದರಹಿತ ಉಭಯ ಪ್ರಧಾನ ಕುಟುಂಬ ಪದ್ಧತಿಯನ್ನು ಅಸ್ಥಿತ್ವಕ್ಕೆ ತರಲು ಪ್ರಯತ್ನಿಸಿರುವುದು ಸಮಾನ ಅವಕಾಶಗಳನ್ನು ಮಾಡಿಕೊಟ್ಟಿರುವುದು. ಸ್ತ್ರೀ ಪುರುಷ ಎಂಬ ಭೇದಕ್ಕೆ ಕೊಡಲಿ ಪೆಟ್ಟು ಹಾಕಿರುವ ವಿಷಯ ಸಂದರ್ಭೋಚಿತವಾಗಿ ಬಳಸಿದ್ದಾರೆ. ಹೆಣ್ಣು ಮಾಯೆಯಲ್ಲಿ ಹೆಣ್ಣು ಅಸ್ಪೃಶ್ಯಳಲ್ಲ. ಹೆಣ್ಣು ಪ್ರತ್ಯಕ್ಷ ದೇವತೆ ಪರಸ್ತ್ರೀ ಪ್ರತ್ಯಕ್ಷ ಪಾರ್ವತಿ ಎಂದು ಹೇಳುವಲ್ಲಿ ೧೨ನೇ ಶತಮಾನದ ವಚನಕಾರರ ಆದರ್ಶ ಮೆಚ್ಚುಗೆಗೆ ಪಾತ್ರವಾಗಿದೆ.

**ಹನ್ನೆರಡನೆಯ ಶತಮಾನದ ವಚನಕಾರ್ತಿಯರು :**

ಕನ್ನಡ ಸಾಹಿತ್ಯದ ಪರ್ವಕಾಲ ಎಂದೆನಿಸಿಕೊಂಡಿರುವ ಹನ್ನೆರಡನೆ ಶತಮಾನದಲ್ಲಿನ ಕಲ್ಯಾಣದ ಕ್ರಾಂತಿಯ ಸಂದರ್ಭದಲ್ಲಿ ಬಸವಕಲ್ಯಾಣದ ಅನುಭವ ಮಂಟಪದಲ್ಲಿ ಅನೇಕ ಜನ ಶರಣ ಶರಣೆಯರು ತಮ್ಮ ಆರಾಧ್ಯ ದೇವನ ಅಂಕಿತದಲ್ಲಿ ವಚನಗಳ ರಚನೆ ಮಾಡಿದ್ದಾರೆ. ಸುಮಾರು ೩೩

---

1. ಬೀದರ ಜಿಲ್ಲಾ ದರ್ಶನ -ಡಾ. ಸೋಮನಾಥ ಯಾಳವಾರ (ಸಂ.) ಪು.ಸಂ. 2

ಜನ ಶಿವಶರಣೆಯರು ವಚನಗಳನ್ನು ಬರೆದು ಕನ್ನಡ ಸಾಹಿತ್ಯದ ವ್ಯಾಪ್ತಿಯನ್ನು ವಿಸ್ತರಿಸಿದ್ದಾರೆ. ನಾಡಿನ ವಿವಿಧ ಭಾಗಗಳಲ್ಲಿ ನೆಲೆಸಿ ವಚನಗಳನ್ನು ರಚನೆ ಮಾಡಿದ್ದಾರೆ. ಸಮಾಜದ ವ್ಯವಸ್ಥೆಯನ್ನು ಪ್ರಶ್ನಿಸುವ ಸ್ತ್ರೀಯರನ್ನು ಮೇಲೆತ್ತುವ ಕಾರ್ಯಕ್ಕೆ ಅರ್ಥ ಕಲ್ಪಿಸುವ ಆಧ್ಯಾತ್ಮಿಕತೆ, ವೈಚಾರಿಕತೆ, ಒಳಗೊಂಡಿರುವ ಅನೇಕ ವಚನಗಳನ್ನು ರಚನೆ ಮಾಡಿದ್ದಾರೆ.

ಲೇಖಕಿ ಇಲ್ಲಿ ಅಕ್ಕಮಹಾದೇವಿ, ಅಕ್ಕಮ್ಮ ಆಯ್ದಕ್ಕಿ ಲಕ್ಕಮ್ಮ , ಅಮುಗೆಯ ರಾಯಮ್ಮ, ಬೊಂತಾದೇವಿ ಕದಿರೆಕಾಯದ ಕಾಳವ್ವ , ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ , ಗಂಗಾಂಬಿಕೆ, ದುಗ್ಗಳೆ, ನಾಗಲಾಂಬಿಕೆ, ನೀಲಾಂಬಿಕೆ ಇಲ್ಲಿ ಹನ್ನೊಂದು ಜನ ಶಿವಶರಣೆಯರ ಬದುಕಿನ ವಿವರ ವಚನಗಳು ಉದಾಹರಿಸಿದ್ದಾರೆ. ಇದರೊಂದಿಗೆ ಇನ್ನುಳಿದ ೨೨ ಜನ ವಚನಗಾರ್ತಿಯರಲ್ಲಿ ಎಡೆಮಠದ ನಾಗಿ ದೇವಯ್ಯಗಳ ಪುಣ್ಯ ಸ್ತ್ರೀ ಮಸಣಮ್ಮ, ಕಹಾರೆ ರೆಮ್ಮವ್ವೆ, ಕನ್ನಡಿ ಕಾಯಕದ ರೇಮಮ್ಮ, ಕಾಲಕೂಟಯ್ಯಗಳ ಪೂಜ್ಯಸ್ತ್ರೀ ರೇಡವ್ವೆ, ಕಾಲಕಣ್ಣಿಯ ಕಾಮಮ್ಮ ಕುಂಬಾರ ಗುಂಡಯ್ಯನ ಪುಣ್ಯಸ್ತ್ರೀ ಕೇತಲಾದೇವಿ, ಕೊಂಡಿಮಂಚಣ್ಣನ ಪುಣ್ಯಸ್ತ್ರೀ ಲಕ್ಷ್ಮಮ್ಮ, ಕೊಟ್ಟಣದ ಸೋಮವ್ವ, ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ ಗೊವ್ವೆ, ದಸರಯ್ಯಗಳ ಪುಣ್ಯಸ್ತ್ರೀ ವೀರಮ್ಮ, ಬತ್ತಲೇಶ್ವರರ ಪುಣ್ಯಸ್ತ್ರೀ ಗುಡ್ಡವ್ವೆ, ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳಮ್ಮ, ಮುಕ್ತಾಯಕ್ಕ, ಮೋಳಿಗೆ ಮಹಾದೇವಿ ರೇಕಮ್ಮ ಸತ್ಯಕ, ಸಿದ್ದಬುದ್ದಯ್ಯಗಳ ಪುಣ್ಯಸ್ತ್ರೀ, ಸೂಳೆ ಸಂಕವ್ವೆ , ಹಡಪದ ಅಪ್ಪಣಗಳ ಪುಣ್ಯಸ್ತ್ರೀ ಲಿಂಗಮ್ಮ, ಹಾದರ ಕಾಯಕದ ಮಾದಯ್ಯಗಳ ಪುಣ್ಯಸ್ತ್ರೀ ಗಂಗಮ್ಮ ಮೊದಲಾದ ವಚನಕಾರ್ತಿಯರ ಹೆಸರು ಪ್ರಸ್ತಾಪಿಸಿದ್ದಾರೆ.

ಬೀದರ ಜಿಲ್ಲೆಯ ಮಹಿಳಾ ಸಾಹಿತಿಗಳು ಎಂಬ ಶೀರ್ಷಿಕೆಯಿಂದ ಕೂಡಿರುವ ಗ್ರಂಥದಲ್ಲಿ ನಾಡಿನ ನಾನಾ ಭಾಗದವರಿಂದ ವಚನಕಾರ್ತಿಯರ ಕುರಿತು ಮಾಡಿರುವ ಪ್ರಸ್ತಾಪ ಪ್ರಸ್ತುತವೋ ಅಪಸ್ತುತವೋ ಎಂದಾಗ ಒಂದೇದ್ದೆ ಇವರುಗಳು ಬೀದರ ಜಿಲ್ಲೆಯಲ್ಲಿ ಹುಟ್ಟಿ ಇಲ್ಲಿಯೇ ಬೆಳೆದವರಲ್ಲ ಹೀಗಾಗಿ ಈ ಜಿಲ್ಲೆಗೆ ಸಂಬಂಧ ಪಡದೆ ಇರುವುದರಿಂದ ವಚನಕಾರ್ತಿಯರ ಹೆಸರು ಪ್ರಸ್ತಾಪಿಸಿರುವುದು ಅಪ್ರಸ್ತುತ ಎಂದೆನಿಸುತ್ತದೆ. ಇನೊಂದೆಡೆಗೆ ಸಾಹಿತಿಕವಾಗಿ ಬರುಡಾಗಿರುವ ಬೀದರ ಜಿಲ್ಲೆಯ ಮಹಿಳಾ ಬರಹಗಾರರಿಗೆ ಇವರೇ ಪ್ರೇರಣೆಯಾಗಿ ಬಂದಿರುವದು ಹಾಗೆಯೇ ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ಜಿಲ್ಲೆಯಲ್ಲಿ ನಡೆದಾಡಿದ ಈ ಶಿವಶರಣೆಯರು ಹೀಗಾಗಿ ಲೇಖಕಿ ವಚನಕಾರ್ತಿಯರ ಪ್ರಸ್ತುತ ಎಂದೆನಿಸುತ್ತದೆ.

[1]ಅನುಭವನ ಅನುಭವ ಮಂಟಪದ ಕಮ್ಮಟದಲ್ಲಿ ಸಿದ್ಧವಾದ ಚಿನ್ನದ ನಾಣ್ಯಗಳೆ ವಚನಗಳು ಎಂದಿರುವ ಎಂ.ಎಸ್. ಆಡಕೆಯವರು ಹಾಗು [1]ರಾಷ್ಟ್ರಕವಿ ಕುವೆಂಪು ಹೇಳುವಂತೆ ವಚನ ಸಾಹಿತ್ಯದ ಉದ್ದೇಶ ಕೃತಿ ಲೋಕೆದ ರಸಾನುಭವ ಅಲ್ಲ ಭೂ ಲೋಕಕ್ಕೆ ಅನುಭವವನ್ನು ತರಲು ಕೃತರ

1. ಬೀದರ ಉತ್ಸವ 2006 ಸ್ಮರಣ ಸಂಚಿಕೆ ಪು.ಸಂ. 44

ಕಾರ್ಯ ಎಂದಿದ್ದಾರೆ. ಹಾಗೆಯೇ ಡಾ. ಆರ್.ಸಿ. ಹಿರೇಮಠ ಮಾನವ ಕಲ್ಯಾಣವನ್ನೇ ದೃಷ್ಟಿಯಲ್ಲಿಟ್ಟುಕೊಂಡು ತಾತ್ವಿಕ, ಧಾರ್ಮಿಕ , ಸಾಮಾಜಿಕ ಮತ್ತು ಸಾಹಿತಿಕ ಕ್ಷೇತ್ರಗಳಲ್ಲಿ ಅನುಪಮ ಕ್ರಾಂತಿಯನ್ನು ಮಾಡಿದ್ದಾರೆ. ಈ ಕ್ರಾಂತಿಯ ಫಲವೇ ವಚನ ವಾಗ್ಮಯ ಎಂದಿದ್ದಾರೆ.

**ಬೀದರ ಜಿಲ್ಲೆಯ ಸಾಹಿತ್ಯ :**

[1]ಒಂದು ಕಾಲಕ್ಕೆ ವಿಶ್ವಕ್ಕೆ ವಚನ ಸಾಹಿತ್ಯವನ್ನು ಕೊಟ್ಟ ಬೀದರ ಜಿಲ್ಲೆ ಹೈದ್ರಾಬಾದ ನಿಜಾಮರ ಆಳ್ವಿಕೆಗೆ ಒಳಪಟ್ಟು ಕನ್ನಡ ಮಾಧ್ಯದ ಶಿಕ್ಷಣದಿಂದ ವಂಚಿತವಾಯಿತು. ಜನತೆಗೆ ಉರ್ದು, ಮರಾಠಿ ಕಲಿಕೆಯನ್ನು ಹೇರಲಾಯಿತು. ಹೈದ್ರಾಬಾದ ಕರ್ನಾಟಕ ಭಾಗ ಸ್ವಾತಂತ್ರ್ಯವಾದಾಗ ರಜಾಕಾರರು ಮಾಡಿದ ಸಾಮೂಹಿಕ ಹತ್ಯೆಯ ಪ್ರತ್ಯಕ್ಷದರ್ಶಿಗಳಾದ ಇಬ್ಬರು ಪುರುಷರು ಜಾನಪದ ಪ್ರಕಾರದಲ್ಲಿ 108 ನುಡಿಗಳಲ್ಲಿ ಈ ಕ್ರಾಂತಿಯ ಕಥೆಯನ್ನು ಕಣ್ಮುಂದೆ ಕಟ್ಟುವಂತೆ ಬರೆದಿದ್ದಾರೆ. ಇದನ್ನೆ ಮಹಿಳೆಯರು ಬುಲಾಯಿ ಹಾಡು, ತತ್ವ ಪದ, ಬೀಸುವ ಪದ, ಕುಟ್ಟುವ ಪದ, ಸೋಬಾನ ಮುಂತಾದ ಬಗೆಯ ಹಾಡುಗಳಿಗೆ ಬಾಹ್ಯ ಪ್ರೇರಣೆ ಒದಗಿಸಿದೆ.

ಅಕ್ಕಮಹಾದೇವಿ ಚನ್ನಮಲ್ಲಿಕಾರ್ಜುನನೇ ತನ್ನ ಪತಿ ಎಂದು ಹಾಡಿದಂತೆ ಹಾರಕೂಡದ ಚೆನ್ನಬಸವ ತನ್ನ ಸರ್ವಸ್ವವೆಂದು ಸಮರ್ಪಣಾ ಭಾವವನ್ನು ವ್ಯಕ್ತಪಡಿಸಿದ ಹಾರಕೂಡದ ಗುಂಡಮ್ಮ ಹಾಗೂ ಬೀದರ ಜಿಲ್ಲೆಯ ಜಾನಪದ ಹಾಡುಗಳು ಹಾಡುವುದರಲ್ಲಿ ಸುಪ್ರಸಿದ್ದಳು ಹಾಗೂ ಜಾನಪದ ಅಕಾಡೆಮಿ ಪ್ರಶಸ್ತಿ ಪುರಸ್ಕೃತೆ ರತ್ನಮ್ಮ ತಂಬಾಕೆಯವರ ಬದುಕಿನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಹಾಗೆಯೇ ಭಾಲ್ಕಿಯ ಪಾರ್ವತಿಬಾಯಿ ಶಿವಲಿಂಗಮ್ಮ ಖಂಡ್ರೆ, ಬಸಪ್ಪ ಕಾಶೆಮ್ಮಾ ಖಂಡ್ರೆ, ಮೀನಾಕ್ಷಿ ಬಸವರಾಜ ಶೇರಿಕಾರ, ಕಮಠಾಣಾದ ಲಕ್ಷ್ಮೀಬಾಯಿ, ತೋರಣಾದ ಭೀಮಾಬಾಯಿ, ಔರಾದನ ರತ್ನಮ್ಮ ಅಲಮಾಜೆ, ಸಂಗಮ್ಮಾ ಅಲಮಾಜೆ, ಲಕ್ಷ್ಮೀಬಾಯಿ ಕನಕೆ , ಚಿನ್ನಮ್ಮ ಮೂಗುರೆ, ಮೊದಲಾದವರು ಬುಲಾಯಿ, ಜಾನಪದ ಹಾಡುಗಳ ಮೂಲಕ ಪ್ರಸಿದ್ಧರಾಗಿದುದ್ದನ್ನು ಹೆಸರಿಸಿದ್ದಾರೆ.

**ಬೀದರ ಜಿಲ್ಲೆಯ ಅನುಭವಿ ಸಾಹಿತಿಗಳು :**

ಸಾಹಿತ್ಯ ಎನ್ನುವದು ಮನುಷ್ಯನ ಅನುಭವದ ದಾಖಲೆಯಾಗಿದೆ. ಮನುಷ್ಯ ಅಕ್ಷರ ಸಂಸ್ಕೃತಿಯನ್ನು ರೂಢಿಸಿಕೊಂಡ ಮೇಲೆ ಪ್ರಕೃತಿ ಜ್ಞಾನ, ವಾಕ್ ಪರಂಪರೆಯ ಜ್ಞಾನದ ಜೊತೆಗೆ ಗ್ರಂಥಸ್ಥ ಸಾಹಿತ್ಯವು ಸೇರಿಕೊಂಡಿತ್ತು. ಕ್ರಮೇಣ ಜ್ಞಾನದ ಕ್ಷೇತ್ರವು ವಿಸ್ತರಿಸಿತು. ಲೇಖಕಿ ಇಲ್ಲಿ ೪೮ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಪ್ರಥಮ ಅಧ್ಯಕ್ಷೆಯಾದ ಜಯದೇವಿ ತಾಯಿ ಲೀಗಾಡೆ ಇವರ ಮಗಳಾದ ಲಲ್ಲೇಶ್ವರಿ ಮೂಗಿ, ಮಾತೆ ಲಕ್ಷ್ಮೀದೇವಿ, ಅಕ್ಕ ಅನ್ನಪೂರ್ಣ, ಪ್ರೊ. ಗಂಗಾಬಿಕಾ ಪಾಟೀಲ ಈ ಮೊದಲಾದ ಸಾಹಿತಿಗಳ ಪರಿಚಯದೊಂದಿಗೆ ಅವರು ಬರೆದಿರುವ

1. ಬೀದರ ಜಿಲ್ಲಾ ದರ್ಶನ -ಸೋಮನಾಥ ಯಾಳವಾರ ಪು.ಸಂ. 50

ಸಾಹತಿಕ ಕೃತಿಗಳ ಪಟ್ಟಿ ಹಾಗು ಅವರ ಕರ್ತವ್ಯದ ಮೇಲೆ ಬೆಳಕು ಚೆಲ್ಲುವ ಮೂಲಕ ಈ ಮಹಿಳಾ ಸಾಹಿತಿಗಳನ್ನು ಪರಿಚಯಿಸಿದ್ದಾರೆ.

**ಆಧುನಿಕ ಸಾಹಿತಿಗಳು :**

ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಬೀದರ ಜಿಲ್ಲೆಯು ಪ್ರಮುಖವಾದದು.ಹೊಸಗನ್ನಡ ಸಾಹಿತ್ಯ ಸಂದರ್ಭಕ್ಕೆ ಸಂಬಂಧಿಸಿದಂತೆ ನೋಡಿದಾಗ ಈ ಭಾಗದಲ್ಲಿ ಸಾಹಿತ್ಯ ರಚನೆ ಕಡಿಮೆ ಇರುವುದು ಕಂಡುಬರುತ್ತದೆ. ಮಹಿಳಾ ಸಾಹಿತ್ಯವಂತು ಇನ್ನೂ ತೀರ ಕಡಿಮೆ ಎಂದು ಹೇಳಬಹುದು. [1]ಕನ್ನಡದ ಮೊದಲ ಗದ್ಯ ಕೃತಿ ಬ್ರಾಜಿಷ್ಣುವಿನ `ಆರಾಧನಾ ಕರ್ಣಾಟ ಟೀಕಾ` ಹಳ್ಳಿಖೇಡ (ಬಿ) ಯಲ್ಲಿ ರಚನೆಗೊಂಡಿದೆ. ಜಾನಪದ ಸಾಹಿತ್ಯ ಸೃಷ್ಟಿದ ಮಹಿಳೆಯರು ಬಹಳ ಜನರಿದ್ದಾರೆ. ತತ್ವಪದ ರಚನಾಕಾರರು ಬುಲಾಯಿ ಹಾಡು, ಸಾವಿರಾರು ಹಾಡು ಕಥೆಗಳು ಬರೆದಿದ್ದಾರೆ.

ಲೇಖಕಿ ಯಶೋದಮ್ಮ ಸಿದ್‌ಬಟ್ಟೆ ಆಧುನಿಕ ಸಾಹಿತಿಗಳ ಜೀವನ ಚರಿತ್ರೆ, ವೃತ್ತಿ ಸೇವೆ, ಸಾಹಿತ್ಯ ಕೃತಿಗಳು, ಅವರ ಇತರ ಸಾಧನೆಗಳನ್ನು ಪಟ್ಟಿ ಮಾಡಿದ್ದಾರೆ. ಪ್ರಮುಖವಾಗಿ ೩೦ ಜನ ಮಹಿಳಾ ಸಾಹಿತಿಗಳ ವ್ಯಕ್ತಿ ಚಿತ್ರಣ ನೀಡಿದ್ದಾರೆ. ಜೊತೆಗೆ ಇನ್ನೂಳಿದ ಕೆಲವು ಮಹಿಳಾ ಸಾಹಿತಿಗಳ ಹೆಸರುಗಳನ್ನು ಮಾತ್ರ ಪಟ್ಟಿ ಮಾಡಿದ್ದಾರೆ. ವಿಶಿಷ್ಟ ಬರಹಗಳ ಮೂಲಕ ಸಾಹಿತ್ಯ ಕೃಷಿಗೈದು ಅನೇಕ ಪ್ರಶಸ್ತಿಗಳನ್ನು ಗಿಟ್ಟಿಸಿರುವ ಮಹಿಳಾ ಸಾಹಿತಿಗಳ ಪಟ್ಟಯಲ್ಲಿ ಡಾ. ವಿಜಯಶ್ರೀ ಸಬರದ, ಡಾ. ಪ್ರೇಮಾ ಸಿರ್ಸೆ, ಯಶೋದಮ್ಮ ಸಿದ್‌ಬಟ್ಟೆ, ಪ್ರೊ. ವಜ್ರಾ ಪಾಟೀಲ, ಮಲ್ಲಮ್ಮ ಆರ್.ಪಾಟೀಲ, ಕಲಾವತಿ ಬಿರಾದಾರ, ಇಂದುಮತಿ ಬಂಡಿ, ಡಾ. ನೀಲಾಂಬಿಕಾ ಪೋಲಿಸ ಪಾಟೀಲ, ನೀಲಾ ಕೆ. ಪ್ರಯಾಗಬಾಯಿ ಎರೋಳಕರ್ , ಡಾ. ಜಗದೇವಿ ಗಾಯಕವಾಡ, ಡಾ. ಶಾಂತಾ ಅಷ್ಟಗಿ, ಪ್ರೊ. ಭಾರತಿ ವಸ್ತ್ರದ, ಕಾವ್ಯಶ್ರೀ ಮಹಾಗಾಂವಕರ್ ,ಕನ್ಯಾಕುಮರಿ , ಡಾ. ಹೇಮಲತಾ ವಡ್ಡೆ, ಡಾ. ಶಿವಗಂಗಾ ರುಮ್ಮಾ, ಲಕ್ಷ್ಮಿ ಪಾಟೀಲ, ಲೀಲಾ ಪಾಟೀಲ, ಮೊದಲಾದವರ ಸಂಕ್ಷಿಪ್ತ ವ್ಯಕ್ತಿ ಪರಿಚಯ ನೀಡಲಾಗಿದೆ.

ಯಶೋದಮ್ಮನವರು ಈ ಚಿಕ್ಕ ಕೃತಿಯಲ್ಲಿ ಬೀದರ ಜಿಲ್ಲೆಯಲ್ಲಿ ಅನೇಕ ಮಹಿಳೆಯರು ಕೃತಿ ರಚಿಸದೆ ಕವನಗಳನ್ನು ಬರೆದು ಕವಿಗೋಷ್ಠಿಯಲ್ಲಿ ವಾಚನೆ ಮಾಡುವವರ ಹೆಸರುಗಳನ್ನು ಮಾತ್ರ ಇಲ್ಲಿ ಪಟ್ಟಿ ಮಾಡಿದ್ದಾರೆ. ಕು. ದೀಪಿಕಾ ಬಿರಾದಾರ, ಪ್ರೇಮಾ ಹೂಗಾರ, ಗೀತಾ ಆರ್.ಪಾಟೀಲ, ಮಹೇಶ್ವರಿ ಪಾಟೀಲ, ಶಶಿರೇಖಾ ಸೊಲೊಮನ್, ಉಮಾ ಬಾಪುರೆ, ಚೆನ್ನಮ್ಮ ವಲ್ಲೆಪುರೆ, ಸುಂದ್ರಮ್ಮಾ ಹಡಪದ, ಶಶಿಕಲಾ ವಿ. ಸ್ವಾಮಿ, ಸುಜ್ಞಾನಿ ದೇವಿ ಬಿರದಾರ, ಮಹೇಶ್ವರಿ ವಗದಾಳೆ, ರಾಜಮ್ಮಾ ನಾಗರಾಳಕರ್, ಜಯಶ್ರೀ ಟೋಕರೆ, ಲೀಲಾ ಪಾಟೀಲ, ಸುವರ್ಣಮಾಲಾ ದಿಕ್ಷೀತ, ಗೀತಾ ಪಾಟೀಲ, ರೇಖಾಬಾಯಿ ಜೋತೆಪ್ಪಾ, ಸಂಗೀತಾ ರಘುನಾಥ, ಸುಮನ

1. ಕಣ್ಣಳತೆ -ಪ್ರೊ. ಡಿ.ಲಿಂಗಯ್ಯಾ ಪು.ಸಂ. 1

ಹೆಬ್ಬಾಳಕರ್, ಮುಂತಾದ ಕವಯಿತ್ರಿಯರನ್ನು ಹೆಸರಿಸಿದ್ದಾರೆ. ಕೃತಿಯ ಕೊನೆಗೆ ಉಪ ಸಂಹಾರದಲ್ಲಿ ಲೇಖಕಿ ಬೀದರ ಜಿಲ್ಲಾ ಮಹಿಳೆಯರು ಸಾಹಿತ್ಯ ಕೃಷಿ , ಸಂಶೋಧನೆ, ಕಾವ್ಯ ರಚನೆ, ಪುಸ್ತಕ ಪ್ರಕಟಣೆ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮಹಿಳೆಯರು ಮುನ್ನುಗ್ಗಲು ಕರೆ ನೀಡಿದ್ದಾರೆ.

ಬೀದರ ಜಿಲ್ಲೆಯ ಮಹಿಳಾ ಸಾಹಿತಿಗಳು ಎಂಬ ಈ ಕಿರು ಹೊತ್ತಿಗೆ ಹಿರಿದಾದ ಆಶೆ ಆಕಾಂಕ್ಷೆಗಳನ್ನು ಮೂಡಿಸಬಲ್ಲ ಕೃತಿಯಾಗಿದೆ. ಈ ಕೃತಿಯಿಂದ ಪ್ರಭಾವಿತರಾದ ಅನೇಕ ಯುವ ಬರಹಗಾರ ಮಹಿಳೆಯರು `ನಾನು ಬರೆಯಬಲ್ಲೆ` ಎನ್ನುವ ಆಕಾಂಕ್ಷೆ ಹೊರಹಾಕಿ ಜಾಗೃತಳಾಗಿ ತಾನು ಸಾಹಿತ್ಯ ರಚನೆಯಲ್ಲಿ ತೊಡಗಿ ಜಿಲ್ಲೆಯ ಮಹಿಳಾ ಸಾಹಿತ್ಯವನ್ನು ವೃದ್ಧಿಸುವಲ್ಲಿ ಆಶ್ಚರ್ಯಪಡಬೇಕಾಗಿಲ್ಲ.

**೩.೬ ಇತರ ಸಾಹಿತ್ಯ**

**ಐತಿಹಾಸಿಕ ಮತ್ತು ಸಾಂಸ್ಕೃತಿಕ ಸ್ಮಾರಕಗಳ ಬೀಡು**

ಜಿಲ್ಲಾ ಸಂಸ್ಕೃತಿ ಪರಿಷತ್ ಬೀದರ ಪ್ರಕಟಿಸಿರುವ ಬೀದರ ಉತ್ಸವ ೨೦೦೬ ರ ಸ್ಮರಣ ಸಂಚಿಕೆಯು ಕನ್ನಡ ಭಾಷೆಯಲ್ಲಿ ೧೭ ಬಿಡಿ ಲೇಖನಗಳನ್ನು ಒಳಗೊಂಡಿದೆ. ಇದರಲ್ಲಿ ಯಶೋದಮ್ಮ ಸಿದ್‌ಬಟ್ಟೆರವರು ಬರೆದಿರುವ ಲೇಖನ ಇದಾಗಿದೆ.

ಮಹಾಭಾರತದ ಕಾಲದಷ್ಟು ಪ್ರಾಚೀನತೆಯನ್ನು ಹೊಂದಿರುವ ಬೀದರಗೆ ಸುಮಾರು ೨೦೦೦ ವರ್ಷಗಳ ಐತಿಹಾಸಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆ ಹೊಂದಿದ್ದು ೧೨ನೇ ಶತಮನಾದ ವಚನಕಾರರ ಕಾರ್ಯವನ್ನು ಇಲ್ಲಿಕೊಂಡಾಡಿದ್ದು, ಬೀದರ ರಾಜಧಾನಿ ಬೆಂಗಳೂರಿನಿಂದ ೭೦೦ ಕಿ.ಮೀ. ದೂರದಲ್ಲಿರುವುದು ಕಿರಿದಾದ ಜಿಲ್ಲೆ. ಭೌಗೋಳಿಕವಾಗಿ, ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಸಂಪದ್ಭರಿತ ಜಿಲ್ಲೆಯಾಗಿದ್ದು , ವಿಶ್ವ ಪ್ರಸಿದ್ಧ ಬಿದರಿ ಕಲೆ ಕನ್ನಡಿಗರ ಹೆಮ್ಮೆಯ ಕಲೆ ಎಂದು ಹೊಗಳಿದ್ದಾರೆ.

ಬಹುಮನಿ ಸಾಮ್ರಾಜ್ಯ, ಬರದಶಾಹಿ ಸಾಮ್ರಾಜ್ಯ, ರಾಷ್ಟ್ರಕೂಟರು, ಚಾಲುಕ್ಯರ ಕಾಲದಲ್ಲಿ ಈ ನಾಡು ಸುವರ್ಣಯುಗವಾಗಿತ್ತೆಂದು ಹೇಳಿ ಬಸವಕಲ್ಯಾಣ ಚಾಲುಕ್ಯರ ರಾಜಧಾನಿಯಾಗಿ ಪರುಮ ವೈಭವದಿಂದ ಮೆರೆದಿರುವುದು ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಮೊದಲಾದ ಅನುಭವಿಗಳ ಆಧ್ಯಾತ್ಮಿಕ ಚಿಂತನೆಗಳ ಫಲವಾಗಿ ಹುಟ್ಟಿಕೊಂಡ ಅನುಭವ ಮಂಟಪವನ್ನು ವಿಶ್ವದ ಮೊದಲ ಸಂಸತ್ತು ಎಂದು ಕರೆಯಲಾಗಿದೆ.

೧೫ನೇ ಶತಮಾನದಲ್ಲಿ ಬಹಮನಿ ಸುಲ್ತಾನರಿಂದ ಮತ್ತೊಮ್ಮೆ ಬೀದರ ರಾಜಧಾನಿಯಾಗಿ ಮೊಳಗಿತ್ತು. ಲೇಖಕಿ ಇಲ್ಲಿ ಕೋಟೆ ಆದರ ಸುತ್ತಲಿನ ಪರಿಸರದ ವರ್ಣನೆ ಮಾಡಿದ್ದಾರೆ. ಸಮುದ್ರ ಮಟ್ಟದಿಂದ ೩೦೦ ಅಡಿ ಎತ್ತರದ ಪ್ರಸ್ತಭೂಮಿಯಾದ ಬೀದರನಲ್ಲಿ ೫೦ ಅಡಿ ಎತ್ತರ, ೫ ಕಿ.ಮೀ. ವ್ಯಾಪ್ತಿಯ ಕೋಟೆಯ ಎರಡು ಬದಿಯಲ್ಲಿ ಮೂವತ್ತು ಅಡಿ ನೈಸರ್ಗಿಕ ಪ್ರಪಾತ, ತೋಪುಗಳು

ಸಂಗ್ರಹಿಸಲು ಕೋಟೆ ಸುತ್ತ ಮೂರು ಸುತ್ತಿನ ಕಂದಕ ಮದ್ದು ಗುಂಡು ಸಂಗ್ರಹಿಸಲು ನೆಲಮಾಳಿಗೆ, ೫೦ ಅಡಿ ಆಳದ ದೊಡ್ಡ ಬಾದಿ, ತುರ್ಕಿ ಮಾದರಿಯ ಸ್ನಾನಗೃಹ ರಂಗನ ಮಹಲ ಎಂಬ ಸುಂದರ ಅರಮನೆ, ಸೋಲಾಕಂಬ, [1]ಐತಿಹಾಸಿಕ ಸ್ಮಾರಕಗಳಾದ ಮಹಮ್ಮದ ಗವಾನ ಮದರಸಾ ಅತ್ಯಂತ ಗಮನ ಸೆಳೆಯುತ್ತದೆ. ಚೌಬಾರಾ ಹಳೆ ನಗರದ ನಾಲ್ಕು ಪ್ರಮುಖ ರಸ್ತೆಗಳು ಕೂಡುವ ಸ್ಥಳದಲ್ಲಿಯ ಅದನ್ನು ನಿರ್ಮಿಸಲಾಗಿದ್ದು ೭೧ ಅಡಿ ಎತ್ತರದ ಈ ಕಟ್ಟಡ ಮೇಲಿಂದ ಇಡಿ ನಗರವನ್ನು ನಿಯಂತ್ರಿಸಲಾಗುತ್ತಿತ್ತು. ನಾಲ್ಕು ದಿಕ್ಕಿಗೂ ದೊಡ್ಡ ಆಕಾರದ ನಾಲ್ಕು ಗಡಿಯಾರಗಳನ್ನು ಹೊಂದಿದೆ.

ಲೇಖಕಿ ಪೌರಾಣಿಕ ಹಿನ್ನಲೆಯ ಸಾಂಸ್ಕೃತಿಕ ಸ್ಮಾರಕಗಳನ್ನು ಪ್ರತ್ಯಕ್ಷಿಸಿದ್ದಾರೆ. ಪಾಪನಾಶ ಪುಣ್ಯ ಕ್ಷೇತ್ರ, ಶ್ರೀರಾಮಚಂದ್ರನಿಂದ ಸ್ಥಾಪಿಸಲ್ಪಟ್ಟ ಲಿಂಗವಿದ್ದು [1]ನೂತನ ಶಿಲಾಯುಗದ ಸಂಸ್ಕೃತಿ ನೆಲವಿದಾಗಿತ್ತು. ಹನ್ನೆರಡು ಜ್ಯೋತಿರ್ಲಿಂಗಗಳ ಸಾಲಿಗೆ ಇದನ್ನು ೧೨ನೇಯ ಲಿಂಗವಾಗಿ ಎಣಿಕೆ ಮಾಡಲಾಗುತ್ತದೆ. ನಗರದ ಸಮತಲನಿಂದ ಒಂದು ಸಾವಿರ ಅಡಿಗಳಷ್ಟು ಆಳದಲ್ಲಿರುವ ಈ ಪುಣ್ಯಕ್ಷೇತ್ರದ ಸುತ್ತಲು ವ್ಯಾಪಕವಾಗಿ ಹರಡಿಕೊಂಡಿರುವ ಸೃಷ್ಟಿ ಸೌಂದರ್ಯದಿಂದಾಗಿ ಅತ್ಯದ್ಭುತ ರಮಣೀಯವಾಗಿ ಗೋಚರಿಸುತ್ತದೆ.

ಸುತ್ತಲು ಪ್ರಕೃತಿ ಸೌಂದರ್ಯದಿಂದ ಮೈದಳೆದು ನಿಂತಿರುವ ನಾನಕಝರಿ ಗುರುನಾನಕರು ಭಾರತ ಭ್ರಮಣದಲ್ಲಿದ್ದಾಗ ಇಲ್ಲಿ ಕೆಲ ಕಾಲ ತಂಗಿದರು. ಅವರ ಪಾದಸ್ಪರ್ಶದಿಂದ ಈ ಝರಿ ಚಿಮ್ಮಿದೆ. ಇಲ್ಲಿ ಗುರುದ್ವಾರ ಭವ್ಯವಾದ ರೀತಿಯಲ್ಲಿ ಇದರ ಸ್ಮರಣಾರ್ಥ ಕಟ್ಟಲಾಗಿದೆ. ಇನ್ನೆರಡು ಪ್ರೇಕ್ಷಣೀಯ ಸ್ಥಳ ಝರಣಿ ನರಸಿಂಗ ಪುಣ್ಯಕ್ಷೇತ್ರ ಇದೊಂದು ಗುಹಾಂತರ ದೇವಾಲಯವಾಗಿದ್ದು ಎರಡು ಫರ್ಲಾಂಗ ಉದದ್ದ ಎದೆ ಎತ್ತರವಿರುವ ನೀರಿನಲ್ಲಿ ನಡೆದುಕೊಂಡು ಹೋದರೆ ನರಸಿಂಗ ಸ್ವಾಮಿಗಳು ದರ್ಶನ ಲಭಿಸುತ್ತದೆ.

ಹೀಗೆ ನಗರದ ಪ್ರಮುಖ ಐತಿಹಾಸಿಕ ಮತ್ತು ಪೌರಾಣಿಕ ಸ್ಥಳಗಳ ಹಿನ್ನಲೆ ಪ್ರಸ್ತುತ ಸ್ಥಿತಿಯನ್ನು ಅದ್ಭುತವಾಗಿ ನಿರೂಪಿಸಿದ್ದಾರೆ. ಈ ಲೇಖನ ಜಿಲ್ಲೆಗೆ ಭೇಟಿ ನೀಡುವ ಯಥಾರ್ಥಗಳಿಗೆ ಮಾರ್ಗದರ್ಶನ ಮಾಡುತ್ತದೆ. ಹಾಗೆಯೇ ಹಿತ್ತಲ ಗಿಡ ಮದ್ದಲ್ಲ ಎಂಬಂತೆ ಈ ಕ್ಷೇತ್ರಗಳ ಬಗ್ಗೆ ಕೇಳಿಯೂ ನೋಡದವರಿಗೆ ಸ್ಫೂರ್ತಿ ತುಂಬುತ್ತದೆ.

**ಬೀದರಿನ ಉದ್ಯಾನವನಗಳು :**

ಜಿಲ್ಲಾ ಸಂಸ್ಕೃತಿ ಪರಿಷತ್ತಿನಿಂದ ಮುದ್ರಿಸಿ ಪ್ರಕಟಿಸಲಾದ ಬೀದರ ಉತ್ಸವ ೨೦೦೮ರ ಸ್ಮರಣ ಸಂಚಿಕೆ ಕನ್ನಡ ಭಾಷೆಯಲ್ಲಿ ೨೦ ಬಿಡಿ ಲೇಖನಗಳನ್ನು ಒಳಗೊಂಡಿದೆ. ಪ್ರಸ್ತುತ ಬೀದರಿನ

---

1. ಚಂಬೆಳಕು ನೆನಪಿನ ಸಂಚಿಕೆ ಪು.ಸಂ. 10
2. ಕರ್ನಾಟಕ ಪುರಾತತ್ವ ನೆಲೆಗಳು -ಡಾ.ಕೆ.ಬಿ.ಶಿವಾತಾರಕ ಪು.ಸಂ. 484

ಉದ್ಯಾನವನಗಳು ಎಂಬ ಲೇಖನ ಯಶೋದಮ್ಮ ಸಿದ್‌ಬಟ್ಟೆರವರ ಚಿಕ್ಕ ಲೇಖನವಾಗಿದ್ದು ಚೊಕ್ಕದಾಗಿ ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ.

ಬೀದರಿನ ಉದ್ಯಾನವನಗಳ ಬಗ್ಗೆ ನಿರೂಪಿಸುವ ಮೊದಲು ೧೨ನೇ ಶತಮಾನದ ವಚನ ಕ್ರಾಂತಿ ಶರಣರ ಚಿಂತನೆ, ಅನುಭವ ಮಂಟಪದ ಕುರಿತು ೧೫ನೇ ಶತಮಾನದಲ್ಲಿ ಬಹುಮನಿ ಸುಲ್ತಾನರು ಕಲಬುರ್ಗಿಯಿಂದ ಬೀದರಗೆ ರಾಜಧಾನಿ ವರ್ಗಾವಣೆ ಮಾಡಿರುವುದು ಬೀದರನ ಐತಿಹಾಸಿಕ ಸ್ಮಾರಕಗಳ ಬೀಡು ಸಾಂಸ್ಕೃತಿಕ ಕೇಂದ್ರ ವೆಂದಿದ್ದಾರೆ. ಹಲವಾರು ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವ ಬೀದರ ಇಂದು ಕರ್ನಾಟಕ ರಾಜ್ಯದ ಅವಿಭಾಜ್ಯ ಅಂಗವಾಗಿದೆ. ಬೀದರನಲ್ಲಿ ಹೊಸಗಾಳಿ ಬೀಸುತ್ತಿದ್ದಂತೆ ಪರಿವರ್ತನೆಯತ್ತ, ಪ್ರಗತಿಯ ಪಥದತ್ತ ದಾಪುಗಾಲಿಡುತಿದ್ದು ಇದು ಮುಂದೊಮ್ಮೆ ಅಂತರಾಷ್ಟ್ರೀಯ ಮಟ್ಟದಲ್ಲಿ ಮಿಂಚುವ ಅಂಚಿನಲ್ಲಿದೆ ಎಂಬ ಭವಿಷ್ಯ ನುಡಿದಿದ್ದಾರೆ. ಈ ಮೇಲಿನ ಅಂಶ ಲೇಖನಕ್ಕೆ ಪೀಠಿಕೆಯಾಗಿದೆ. ಹೊರತು ವಿಷಯ ನಿರೂಪಣೆಯ ಸ್ಪಷ್ಟ ಮಾಹಿತಿ ಅಲ್ಲ.

ಬೆಳೆಯುತ್ತಿರುವ ಬೀದರ ನಗರದಲ್ಲಿ ದಶಕಗಳ ಹಿಂದೆ ನಗರ ಪಾಲಿಕೆಯ ಪಬ್ಲಿಕ ಗಾರ್ಡನ ವಾಯು ವಿಹಾರದ ಕೇಂದ್ರವಾಗಿತ್ತು. ಈಗ ಇವುಗಳ ಸಂಖ್ಯೆ ಹೆಚ್ಚಳವಾಗಿದೆ ಗುರುನಾನಕ ದೇವ ಪ್ರಬಂಧಕ ಸಮಿತಿಯವರು ಹುತಾತ್ಮ ಸರದಾರ ಜೋಗಾಸಿಂಗ ಅವರ ಸ್ಮರಣಾರ್ಥ ಗುರು ನಗರದಲ್ಲಿ ನಿರ್ಮಿಸಿದ್ದು ಬೀದರ ನಾಗರೀಕರನ್ನು ತನ್ನತ್ತ ಸೆಳೆಯುತ್ತಿದೆ. ಆ ನಂತರ ದೇವದೇವ ವನ ನಗರದಿಂದ ಸುಮಾರು ೬ ಕಿ.ಮೀ. ದೂರದಲ್ಲಿರುವ ಈ ವನ ವಿಶಾಲ ಭೂ ಪ್ರದೇಶವನ್ನು ವ್ಯಾಪಿಸಿದೆ. ಸಮಸ್ತ ನಾಗರಿಕರ ಮನರಂಜನೆಯ ಕೇಂದ್ರವಾಗಿ ಅಭಿವೃದ್ಧಿ ಹೊಂದುತ್ತಿದೆ. ಭಾರತದ ಸ್ವಾತಂತ್ರ್ಯದ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಬೀದರ ಜಿಲ್ಲಾ ಆಡಳಿತವು ಬರದ ಶಾಹಿ ಗಾರ್ಡನ ಹುಟ್ಟು ಹಾಕಿದೆ. 2003 ರಲ್ಲಿ ಅಕಾಲ ಮೃತ್ಯುವಿಗೆ ತುತ್ತಾಗಿರುವ ಡಾ. ವಿಶ್ವಾಸ ಅವರ ಹೆಸರಿನಲ್ಲಿ ನೌಬಾದನಲ್ಲಿ ನಿರ್ಮಿಸಲಾದ ಉದ್ಯಾನ ವನದ ವರ್ಣನೆಯೂ ಒಳಗೊಂಡಿದೆ.

ಮುಂದಾಲೋಚನೆ ಸಾಕಾರ ಮೂರ್ತಿ ಯಶೋದಮ್ಮ ಸಿದ್‌ಬಟ್ಟೆ ಪರಿಶುದ್ಧ ಪರಿಸರ ಹೊಂದಲು ನಗರದಲ್ಲಿ ಪಾರ್ಕಗಳ ಸಂಖ್ಯೆ ಜನಸಂಖ್ಯೆಯ ಅನುಪಾತದಲ್ಲಿ ಸ್ಥಾಪಿಸಬೇಕು. ಬೆಳೆದು ನಿಂತಿರುವ ನಗರಕ್ಕೆ ಹತ್ತು ಹಲವು ಗಾರ್ಡನಗಳ ಅವಶ್ಯಕತೆ ಎತ್ತಿ ಸೋರಿಸಿದ್ದಾರೆ. ಇದರೊಂದಿಗೆ ಬೀದರ ನಿಂದ ಗುಲಬರ್ಗಾ, ಹೈದ್ರಾಬಾದ, ನಾಂದೇಡ, ಲಾತೂರು, ಔರಂಗಾಬಾದ, ಅಜಂತಾ ಎಲ್ಲೋರಗಳೊಂದಿಗೆ ನೇರ ಸಂಪರ್ಕ ಕಲ್ಪಿಸಲು ರಸ್ತೆ, ರೈಲು ಹಾಗೂ ವಿಮಾನ ಯಾನ ಸೌಲಭ್ಯಗಳ ಚಿಂತನೆ ನಡೆಸುವ ಅಗತ್ಯವನ್ನು ಪಟ್ಟಿ ಮಾಡಿದ್ದಾರೆ.

[1]ಸಾಹಿತಿಗೆ ಸೂಕ್ಷ್ಮತೆಯ ಜೊತೆಗೆ ಸಮಕಾಲೀನ ಸತ್ಯವನ್ನು ಅನಾವರಣಗೊಳಿಸುವ ಧೈರ್ಯ ಇರಬೇಕು. ಯಾವ ವಿಷಯವನ್ನೇ ಆಗಲಿ ಎಲ್ಲಾ ದೃಷ್ಟಿಗಳಿಂದಲೂ ಪರೀಕ್ಷಿಸಿ,

1. ಸಾಹಿತ್ಯ ಸೌರಭ -ಜಯದೇವಪ್ಪ ಜೈನಕೇರಿ

ಪೂರ್ವಗ್ರಹವಿಲ್ಲದೆ, ಸ್ಪಷ್ಟವಾಗಿ, ತರ್ಕಬದ್ಧವಾಗಿ ನಿರರ್ಗಳವಾಗಿ ಹೇಳಲು ಹಾತೊರೆಯುವ ಕವಿ, ಲೇಖಕ ತನ್ನ ಅನಿಸಿಕೆ ಸ್ಪಷ್ಟವಾಗಿ ಕೊಡಬಲ್ಲೆ ಎನ್ನುವಂತೆ ಯಶೋದಮ್ಮ ಸಿದ್‌ಬಟ್ಟೆ ಜಿಲ್ಲೆಯ ಪರಿಸರದ, ಜನಸಂಖ್ಯೆಯ ಜಿಲ್ಲಾಡಳಿತದ ನಗರದ ಸೌಂದರ್ಯ ವೃದ್ಧಿಯಾಗಬೇಕು. ಹೆಚ್ಚಿನ ಉದ್ಯಾನಗಳ ನಿರ್ಮಾಣಕ್ಕೆ ಆಸಕ್ತಿ ತೋರಿಸಬೇಕು ಹಾಗೂ ಈಗಾಗಲೇ ಇರುವ ಉದ್ಯಾನಗಳನ್ನು ಅಭಿವೃದ್ಧಿಪಡಿಸಬೇಕೆಂಬ ಇಂಗಿತ ವ್ಯಕ್ತಪಡಿಸಿದ್ದಾರೆ.

**ಅಹಂಕಾರ :**

ಉತ್ತರಕರ್ನಾಟ ಪತ್ರಿಕೆಯಲ್ಲಿ ಪ್ರಕಟವಾಗಿರುವ ಈ ಹರಟೆಯು ಜಗತ್ತು ಅಹಂಕಾರದಿಂದ ತುಂಬಿ ತುಳುಕುತ್ತಿದೆ. ಬಡವ ಬಲ್ಲಿದ, ವಿದ್ಯಾವಂತ, ಅಧಿಕಾರಿ, ಸೇವಕ, ಎಲ್ಲರಲ್ಲಿಯೂ ಒಂದಿಲ್ಲ ಒಂದು ರೀತಿ ಅಹಂಕಾರದ ದರ್ಪದಲ್ಲಿ ತೇಲುತ್ತಿದ್ದಾರೆ. ಮಂತ್ರಿಯಿಂದ ತರಕಾರಿ ಮಾರುವವನ ವರೆಗೂ ಎಲ್ಲರೂ ಹೇಗೆ ದರ್ಪದಲ್ಲಿ ತೇಲುತ್ತಿದ್ದಾರೆ. ಅರಿತು ಅರಿಯದೆಯೂ ಅಹಂಕಾರ ಪಡುತ್ತಿರುತ್ತಾರೆ. ಎದುರಿನ ವ್ಯಕ್ತಿಯನ್ನು ಗುರುತಿಸುವಲ್ಲಿ ಎಡುವುತ್ತಿರುವ ಜನ ಅಹಂಕಾರ ಪಡುವುದು ಸರಿಯೋ ತಪ್ಪೋ ಎಂಬುದರ ಗಮನವು ಇಲ್ಲದೇ ಹಿರಿ ಕಿರಿಯರಲ್ಲಿಯೂ ಇದು ಹೆಚ್ಚುತ್ತಿರುವುದರಿಂದ ಇಲ್ಲಿ ಕಳವಳವ್ಯಕ್ತಪಡಿಸಲಾಗಿದೆ.

ಚುನಾವಣೆ ಬಂದಾಗ ಮನೆಗೆ ಬಂದು ನಮ್ಮೆಲ್ಲರಿಗೂ ಕೈಮುಗಿದು, ಹಿರಿಯರ ಕಾಲಿಗೆರಗಿ ಜಯಿಸಿ ಬಂದು ಮಂತ್ರಿಗಳಾದಾಗ ಕಾಣಲು ಹೋದರೆ ಮೊದಲು ಜವಾನನಿಗೆ ಕೈಮುಗಿದು ಮಂತ್ರಿಗಳಲ್ಲಿ ಹೋದಾಗ ನನಗೆ ಸಮಯವಿಲ್ಲ ಎರಡು ಮಾತು ಹೇಳಿ ಹೋಗಿ ಎಂದು ಹೇಳುವರು. ಜನರ ಸೇವೆ ಮಾಡಲೆಂದು ಸ್ಪರ್ಧಿಸುತ್ತಿದ್ದೇನೆ. ನಿಮ್ಮ ಆರ್ಶೀವಾದ ನಮಗಿರಲಿ ಎಂದು ಹೇಳುತ್ತಿದ್ದವನು ಈಗ ಮಾತಿಗೆ ತಿರುಗು ಬಿಳುತ್ತಿದ್ದಾನೆ. ಆತ್ಮೀಯರೊಬ್ಬರು ಅನಾರೋಗ್ಯದಿಂದ ಬಳಲುತ್ತಿದ್ದಾಗ ಸೌಜನ್ಯತೆಯಿಂದ ಹಣ್ಣು ಕಾಯಿಯೊಂದಿಗೆ ಮಾತನಾಡಲು ಹೋದರೆ ನಾನು ಸೇಬಿನ ಹಣ್ಣು ತಿನ್ನಲ್ಲ, ಪೇಡಾ ತಿನ್ನುವುದಕ್ಕೆ ಡಯಾಬೀಟಿಸ್, ಕರಿದು ತಿಂಡಿ ತಿನ್ನದಿರಲು ಡಾಕ್ಟರ ಸಲಹೆ ನೀಡಿದ್ದಾರೆ ಎಂದು ಹೇಳುವಾಗ ಹಣ ಖರ್ಚು ಮಾಡಿ ಹೋದವರಿಗೆ ಆಗುವ ಅವಮಾನ ಅಷ್ಟಿಷ್ಟಲ್ಲ. ಬಾಡಿಗೆ ಮನೆಯವರು ಕರೆಂಟ ಹೋದಾಗ ನಾವು ಬಿಲ್ಲು ಕೊಡುತ್ತೇವಲ್ಲಾ ಕರಂಟ ಏಕೆ ಇಲ್ಲ ಎನ್ನುವರು. ಕರೆಂಟ ಎಲ್ಲಿಯೂ ಇಲ್ಲದ ಮೇಲೆ ಇಲ್ಲಿ ಹೇಗೆ ಇರುತ್ತದೆ ಎಂಬುವ ಪ್ರಜ್ಞೆಯೂ ಇವರಿಗೆ ಇರುವುದಿಲ್ಲ. ಮನೆ ಖಾಲಿ ಮಾಡಿ ಎಂದರೆ ನಮ್ಮ ಮನಸ್ಸು ಬಂದಾಗ ಖಾಲಿ ಮಾಡುತ್ತೇವೆ ಎನ್ನುವದು ಮನೆಯಲ್ಲಿ ಮಕ್ಕಳು, ಯಜಮಾನರು ಹೋಟಲಿಗೆ ಹೋಗಿ ಊಟ ಮಾಡಿ ಬರುತ್ತೇವೆ ಎಂದು ಹೇಳಿ, ಹೇಳದೆ ಕೇಳದೆ ಸಿನಿಮಾ ನೋಡಿ ರಾತ್ರಿ ಹತ್ತು ಗಂಟೆಗೆ ಬರುವರು. ಗಂಟೆ ಬಾರಿಸಿ ಎಚ್ಚರವಿರಬಾರದೇ ಎಂದು ಹೇಳುವರು. ಬೆಳಿಗ್ಗೆ ಏಳಲು ತಡವಾದಾಗ ಮನೆ ಕೆಲಸದವಳು ನಾನು

ಬೇರೆ ಮನೆಗೆ ಕೆಲಸಕ್ಕೆ ಹೋಗಬೇಕು, ಎಷ್ಟು ಹೊತ್ತಂತ ಕರೆಯುವದು ಈ ದಿನ ಕಸಗೂಡಿಸಿ ರಂಗೋಲಿ ಹಾಕಿ ಹೋಗುತ್ತೇನೆ ಎನ್ನುವರು.

ನಾದಿನಿ ಮನೆಗೆ ಬಂದು ಅಣ್ಣ ಅತ್ತಿಗೆ ಅಂತ ಯಾಗಿದ್ದೀರಿ, ನನ್ನ ಗಂಡನ ಕಿಟಕಿಟಿ ಹೆಚ್ಚಾಗಿದೆ ಕೇಳಬಾರದೇ ತಂಗಿಯ ಹತ್ತಿರ ಮಾತನಾಡಲು ಸಮಯವಿಲ್ಲವೇ ಎಂದು ಕೇಳುವದು. ದಾರಿಯಲ್ಲಿ ಸಿಕ್ಕ ಗೆಳತಿ ರಿಕ್ಷಾದಲ್ಲಿ ಯಾಕೆ ಹೋಗುತ್ತಿದ್ದಿರಿ ಸ್ಕೂಟರ ಇಲ್ಲವೇ, ಗಂಡ ಹೆಂಡತಿ ದುಡಿದು ಗಂಟು ಮಾತ್ರ ಇಟ್ಟಿರಾ ಎನ್ನುವರು. ಹದಿನೈದು ನಿಮಿಷ ತಡವಾಗಿ ಕಾಲೇಜಿಗೆ ಹೋದಾಗ ತಡವಾಗಿ ಬಂದಿದನೆಂದು ಬರೆದು ಸಹಿ ಮಾಡಿ ಎನ್ನುವರು. ತರಗತಿಯಲ್ಲಿ ಮಕ್ಕಳು ಕಿರು ಪರೀಕ್ಷೆ ಪತ್ರಿಕೆ ತರಲಿಲ್ಲವೇ ಎನ್ನುವರು. ಮನೆಗೆ ಬರುವಾಗ ರೀಕ್ಷಾದವನು ಎಷ್ಟು ಹೊತ್ತಿನಿಂದ ಕಾಯುತ್ತಿದ್ದೇನೆ ನನ್ನ ಗಿರಾಕಿ ಎಲ್ಲಾ ಹಾಳಾಯಿತು ಎನ್ನುವನು ದಿನಾ ರಿಕ್ಷಾದವನಿಗೆ ಕಾಯಬೇಕು ಇಂದು ಒಂದೇ ದಿನ ತಡವಾಗಿದ್ದರೆ ಇಷ್ಟು ರಂಪಾಟ. ತರಕಾರಿಯವನು ಹಿಂದಿ ಕಲಿಯಬಾರದೇ ನೀವು ಎಂದು ಹೇಳುತ್ತಾನೆ. ತಾನು ಮಾತ್ರ ಕನ್ನಡ ಕಲಿಯುವ ಮಾತನಾಡುವುದಿಲ್ಲ.

ಅಹಂಕಾರಂ ಸರ್ವ ನಾಶಂ ಎನ್ನುವಂತೆ ಜೀವನದಲ್ಲಿ ಅನೇಕ ವೇಳೆಯಲ್ಲಿ ಇಂತಹ ಸಂದರ್ಭಗಳು ಬಂದೊದಗುತ್ತವೆ. [1]ಅಜ್ಞಾನಿಗಳು ಕೂಡ ಹೋರಾಡುವುದೇಕೆ ಎಂಬಂತೆ ತಮ್ಮ ಪಾಡಿಗೆ ತಾವು ಜೀವನದ ದೋಣಿ ಸಾಗಿಸಬೇಕು. ಹೀಗೆ ಅನೇಕ ದಿನ ನಿತ್ಯದ ಘಟನೆಗಳು ಹರಟೆಯ ವಿಷಯವಾಗಬಲ್ಲದ್ದು. ನೋಡಿ ಅರಿಯುವ ನಮ್ಮ ಗಮನಕ್ಕೆ ಬರುವ ಅಂಶಗಳು ಹರಟೆಯಾಗಬಲ್ಲವು. ಹಾಗೆಯೇ ಹರಟಗೆಳು [2]ವಿಚಾರಗಳ ಜೊತೆಗೆ ಕಲ್ಪನೆಗೂ ಪ್ರಾಧಾನ್ಯತೆ ಇರುತ್ತದೆ. ಒಂದಿಲ್ಲೊಂದು ವಿಚಾರ ಘಟನೆಯನ್ನು ಆಧರಿಸಿರುತ್ತದೆ. ಹಾಸ್ಯದ ರೂಪದಲ್ಲಿರುವ ಸಾಹಿತ್ಯ ಇದಾಗಿದ್ದು, ಕಂಡುಂಡ ಅನುಭವ ಕಂಡಂತೆ ಚಿತ್ರಿಸುವ ಪ್ರಕಾರದ ಸಾಹಿತ್ಯ ಇದಾಗಿದೆ.

**ಬೀದರ ಜಿಲ್ಲೆಯ ೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷೀಯ ಭಾಷಣ :**

ಸುಕ್ಷೇತ್ರ ಹಾರಕೂಡದಲ್ಲಿ ಜನವರಿ ೬, ೭ ೨೦೦೩ ರಲ್ಲಿ ಜರುಗಿದ ಬೀದರ ಜಿಲ್ಲೆಯ ೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿರುವ ಶ್ರೀಮತಿ ಯಶೋದಮ್ಮ ಸಿದ್‌ಬಟ್ಟೆರವರ ಭಾಷಣ ಸುಮಾರು ಹದಿನೈದು ಪುಟಗಳಿಂದ ಕೂಡಿದೆ ಇದೊಂದು ವೈವಿಧ್ಯತೆಯಿಂದ ಕೂಡಿರುವ ಭಾಷಣ ಅನೇಕ ವಿಷಯಗಳ ಚರ್ಚೆ ಇಲ್ಲಿ ನಡೆದಿದೆ.

ಬೀದರ ಜಿಲ್ಲೆಯ ಜನತೆಯ ಪರಿಸ್ಥಿತಿಯ ಮೇಲೆ ಬೆಳಕು ಚೆಲ್ಲಿದ್ದಾರೆ. ಸ್ತ್ರೀ ಶಿಕ್ಷಣ, ಬಡತನ, ಮತ್ತು ಸಾಹಿತಿಕ ವಾತಾವರಣದ ಬಗ್ಗೆ ಚರ್ಚಿಸಿ ಬೀದರ ಜಿಲ್ಲೆಯ ಆರು ಸಮ್ಮೇಳನಗಳ ಅಧ್ಯಕ್ಷರುಗಳ ಸಾಹಿತ್ಯಕ ಕೊಡುಗೆಗಳನನು ಮತ್ತು ಪರಿಷತ್ತಿನ ಹಿಂದಿನ ಅಧ್ಯಕ್ಷರುಗಳ

---

1. ಕಥೆಗಳು -ಡಾ. ಶ್ರದ್ಧಾನಂದ ಸ್ವಾಮಿಗಳು
2. ಆಧುನಿಕ ಕನ್ನಡ ಸಾಹಿತ್ಯದ ವಿರಾಟ ಪುರುಷರು -ಪ್ರೊ.ಜಿ.ಎಸ್. ಅಮ್ಮೂರ ಪು.ಸಂ. 405

ಕಾರ್ಯವೈಖರಿಗಳನ್ನು ಮುಕ್ತ ಕಂಠದಿಂದ ಹಾಡಿ ಹೊಗಳಿದ್ದಾರೆ. ಹಾಗೆಯೇ ಜ್ಞಾನದಾಸೋಹ, ಅನ್ನದಾಸೋಹಗಳಂತಹ ಕಾರ್ಯ ಮಾಡುತ್ತಾ ಬಂದಿರುವ ಸುಕ್ಷೇತ್ರ ಹಾರಕುಡದ ಸಾಧನೆ ಈ ಮಠದ ಸಂಸ್ಥಾಪಕರಾದ ಸದ್ಗುರು ಸಂಗನಬಸವ ಸ್ವಾಮಿಗಳಿಂದ ಹಿಂದಿನ ಸದ್ಗುರು ಷಡಕ್ಷರ ಬ್ರಹ್ಮ ಶ್ರೀ ಚನ್ನವೀರ ಶಿವಾಚಾರ್ಯರು ಕಾರ್ಯಗಳನ್ನು ಶ್ಲಾಘಿಸಿದ್ದಾರೆ.

ತಮ್ಮ ಭಾಷಣದುದ್ದಕ್ಕೂ ಹನ್ನೆರಡನೆಯ ಶತಮಾನದ ಶರಣರ ಕೊಡುಗೆ, ಸಾಮಾಜಿಕ ಚಿಂತನೆ ಜೊತೆಗೆ ಅಕ್ಕಮಹಾದೇವಿ, ಬಸವಣ್ಣ ಅವರನ್ನು ಹಾಡಿ ಹೊಗಳಿ ರಾಮಾಯಣ ಮತ್ತು ಮಹಾಭಾರತದ ಕಾಲದೊಷ್ಟು ಪ್ರಾಚೀನತೆ ಹೊಂದಿರುವ ಜಿಲ್ಲೆಯ ಪ್ರಾಚೀನತೆ ಬಗ್ಗೆ ವಿಶ್ಲೇಷಿಸಿದ್ದಾರೆ. ರಾಷ್ಟ್ರಕವಿ ಕುವೆಂಪು, ಹಾ.ಮಾ. ನಾಯಕ, ಯು.ಆರ್. ಅನಂತಮೂರ್ತಿ, ಪಿ.ಲಂಕೇಶ, ಟಿ. ಸುನಂದಮ್ಮಾ, ಶಿವಮೊಗ್ಗ ಸುಬ್ಬಣ್ಣ, ಮಾಜಿ ಮುಖ್ಯಮಂತ್ರಿಗಳಾದ ಕಡಿದಾಳ ಮಂಜಪ್ಪ, ಎಸ್. ಬಂಗಾರಪ್ಪ, ರಾಜಕಾರಣಿ ಬಿ.ಎಸ್.ಯಡಿಯೂರಪ್ಪ ಅವರ ಸೇವೆಯನ್ನು ಮತ್ತು ಹೋರಾಟಗಳನ್ನು ಕೊಂಡಾಡಿದರು.

ಈ ಜಿಲ್ಲೆಯ ಪ್ರದೇಶವನ್ನು ಆಳಿದ ರಾಷ್ಟ್ರಕೂಟರು, ಚಾಲುಕ್ಯರು ಶಾಹಿಗಳನ್ನು ಸ್ಮರಿಸಿದ್ದಾರೆ. ಕಾಶ್ಮೀರದ ಕವಿಗಳಾದ ಕಲ್ಹಣ, ಬಿಲ್ಹಣ, ಹಾಗೆಯೇ ಕನ್ನಡದ ಆದ್ಯ ಕವಿಗಳಾದ ಪಂಪ, ರನ್ನ, ಪೊನ್ನ, ಚಾವುಂಡರಾಯ, ನಾಗವರ್ಮ, ಶ್ರೀವಿಜಯ, ಎರಡನೆ ತೈಲಪ, ಆರನೆ ವಿಕ್ರಮಾದಿತ್ಯರನ್ನು ಉಲ್ಲೇಖಿಸಿದ್ದಾರೆ. ಹದಿನಾಲ್ಕನೆಯ ಶತಮಾನದಲ್ಲಿ ಬೀದರಿನ ಹವಾಮಾನಕ್ಕೆ ಮನಸೋತ ಬಹುಮನಿ ಸುಲ್ತಾನ, ಅಹ್ಮದಶಾ ಕಲ್ಬುರ್ಗಿಯಿಂದ ರಾಜಧಾನಿ ಬೀದರಗೆ ವರ್ಗಾವಣೆ ಮಾಡಿರುವುದು ಜಿಲ್ಲೆಯ ಭಾಷೆಯ ಮೇಲೆ ಪ್ರಭಾವ ವಿವರಿಸಿದ್ದಾರೆ. ಬೀರಿರುವ ಪಾರ್ಸಿ, ಅರಬ್ಬಿ, ಉರ್ದು, ತೆಲಗು, ಮರಾಠಿಗಳ ಪ್ರಭಾವ ಉಲ್ಲೇಖಿಸಿದ್ದಾರೆ. ಬ್ರಿಟಿಷರ ಕಾಲದಲ್ಲಿನ ಶೈಕ್ಷಣಿಕ ಪರಿಸರ, ಸ್ವಾತಂತ್ರ್ಯ ಹೋರಾಟಗಾರರನ್ನು ಹೈದ್ರಾಬಾದ ಕರ್ನಾಟಕ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಸಾಹಸಿಗರನ್ನು ೧೯೫೬ ರಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ದುಡಿದವರನ್ನು ಹಾಡಿ ಹೊಗಳಿದ್ದಾರೆ.

ಯಶೋದಮ್ಮನವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮಹಾಜನ ವರದಿ ಗೋಕಾಕ ವರದಿಯ ಜಾರಿಗೆ ಆದೇಶಿಸಿದ್ದಾರೆ. ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಮೈಸೂರಿನಲ್ಲಿ ವಿಶ್ವ ಕನ್ನಡ ಸಮ್ಮೇಳನ ನಡೆದಿರುವ ಅಮೇರಿಕಾದಲ್ಲಿ `ಅಕ್ಕ` ಸಂಸ್ಥೆಯಿಂದ ವಿಶ್ವ ಕನ್ನಡ ಸಮ್ಮೇಳನ ಜರುಗುತ್ತಿರುವ ಅಂಶ ಪಸ್ತಾಪಿಸಿದ್ದಾರೆ. ರಾಜ್ಯದ ಆಡಳಿತ ಭಾಷೆ ಕನ್ನಡದಲ್ಲಿ ನಡೆಯಬೇಕೆಂಬ ಮಹಾದೇಶ ಹೊಂದಿರುವ ಇವರು ಇದಕ್ಕಾಗಿ ದುಡಿಯುತ್ತಿರುವ ಬರಗೂರು ರಾಮಚಂದ್ರಪ್ಪನವರನ್ನು ಕೊಂಡಾಡಿದ್ದಾರೆ. ರಾಷ್ಟ್ರ ಮಟ್ಟದಲ್ಲಿ ದೇಶಕ್ಕೆ , ನಾಡಿಗೆ ಕೀರ್ತಿ ತಂದಿರುವ ನಾಡಿನ ಕ್ರೀಡಾ ಪಟುಗಳನ್ನು ಹಾಡಿ ಹೊಗಳಿದ್ದಾರೆ.

ಬೀದರ ಜಿಲ್ಲೆಯ ಶೈಕ್ಷಣಿಕ ಮತ್ತು ಸಾಹಿತ್ಯಕ ಚಳುವಳಿ ಕುರಿತು ಸುದೀರ್ಘವಾಗಿ ಮಾತನಾಡಿರುವ ಯಶೋದಮ್ಮನವರು ಸ್ವಾತಂತ್ರ್ಯ ಪೂರ್ವದಲ್ಲಿ ಕನ್ನಡ ಶಾಲೆಯು ಬೆಳೆದು ಬಂದ ಬಗ್ಗೆ ಹೆಮ್ಮೆವ್ಯಕ್ತ ಪಡಿಸಿದ್ದಾರೆ. ಭಾಲ್ಕಿಯ ಲಿಂಗೈಕ್ಯ ಶತಾಯುಷಿ ಶ್ರೀ ಚನ್ನಬಸವ ಪಟ್ಟದೇವರು ಧೈರ್ಯದಿಂದ ಹೊರಗಡೆ ಉರ್ದು ಶಾಲೆ ಹೆಸರು ಬರೆಯಿಸಿ ಒಳಗಡೆ ಕನ್ನಡ ಶಾಲೆ ಆರಂಭಿಸಿದ್ದು, 1920ರಲ್ಲಿ ಶರಣಪ್ಪ ಮಾಕಾ ಉದೋರನಲ್ಲಿ ೧೯೨೮ ರಲ್ಲಿ ಶ್ರೀ ಶಾಂತವೀರ ಸ್ವಾಮಿಗಳು ರಂಜೇರಿ ಹಾಗು ಗುರುಮಿಟಕಲ್ಲನಲ್ಲಿ ಕನ್ನಡ ಶಾಲೆ ಆರಂಭಿಸಿದ್ದು ಡಾ. ಶಾಂತಪ್ಪ ನವರು ಅಮೇರಿಕಾದ ರೆವರೆಂಡ್ ಸೀಮಂಡ ತಾತಾರ ಜೊತೆ ಸೇರಿ ಮಂಗಲಪೇಟನಲ್ಲಿ ನಾರ್ಮಾನ ಫೆಡ್ರಿಕ ಶಾಲೆ ಆರಂಭಿಸಿ ಕನ್ನಡ ಮತ್ತು ಇಂಗ್ಲೀಷ ಕಲಿಕೆಗೆ ಅವಕಾಶ ನೀಡಿರುವುದು ಹೀಗೆ ಕನ್ನಡದ ಅಲೆ ಬೀದರನಲ್ಲಿ ಬೆಳೆದು ಬಂದ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಸಾಂಸ್ಕೃತಿಕ ಕ್ಷೇತ್ರಕ್ಕೆ ಹೆಸರಾಗಿರುವ ಬೀದರ ಹಾಡು, ಬಯಲಾಟ, ಕೋಲಾಟ, ಕಲ್ಗಿತುರಾ, ತತ್ವಪದಗಳಿಗೆ ಹೆಸರಾಗಿದೆ. ಬೀದರ ಜಿಲ್ಲೆಗೆ ಮಾತ್ರ ವಿಶೇಷ ವೆನಿಸುವ ಬುಲಾಯಿ ಹಾಡುಗಳನ್ನು ಹೆಸರಿಸಿ ಇವುಗಳ ಅಧ್ಯಯನ ಸಂಗ್ರಹಣೆಯಲ್ಲಿ ತೊಡಗಿಸಿಕೊಂಡಿರುವ ಡಾ. ಎಂ.ಎಸ್.ಲಠ್ಠೆ, ಕಾಶಿನಾಥ ರೆಡ್ಡಿ, ಚಿಟಗುಪ್ಪಾದ ಶೀಲಪ್ಪ ಮತ್ತು ಮರಕಲ ಹನುಮಂತಪ್ಪ, ಕೊಳ್ಳುರು ಹುಸೇನ ಸಾಬ, ಲಾಡವಂತಿಯ ಮದನಸಾಬ, ಅಣದೂರಿನ ಜವರ ಸಾಬರು ೧೯೪೮ ರಲ್ಲಿ ರಜಾಕಾರರ ಹಾವಳಿಯಾದಾಗ ಗೋರ್ಟಾದಲ್ಲಿ ಇದನ್ನು ಕಣ್ಣಾರೆ ಕಂಡ ವಿರೂಪಾಕ್ಷಯ್ಯಾ ಭೂಲಾಯಿ ಪದ ಹಾಡಿರುವ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಯುವ ಸಾಹಿತಿಗಳಾದ ಡಾ. ಮಾಣಿಕರಾವ ಧನಾಶ್ರೀ, ಡಾ. ಕಾಶಿನಾಥ ಅಂಬುಲಗಿ, ಎಂ.ಜೆ. ಗಂಗನಪಳ್ಳಿ, ಡಾ. ಪ್ರೇಮಾ ಸಿರ್ಸೆ, ಡಾ. ವಿಜಯಶ್ರೀ ಸಬರದ್, ದೇಶಾಂಶ ಹುಡಗಿ, ಬಾಲಚಂದ್ರ ಜಯಶೆಟ್ಟಿ, ಎಂ.ಜಿ. ದೇಶಪಾಂಡೆ, ಡಾ. ಜಗನ್ನಾಥ ಹೆಬ್ಬಾಳೆ, ಡಾ. ರಾಜೇಂದ್ರ ಯರನಾಳೆ, ಸುಬ್ಬಣ್ಣ ಅಂಬೆಸಂಗೆ ಅವರನ್ನು ಸ್ಮರಿಸಿ ಇಲ್ಲಿನ ಪತ್ರಕರ್ತರನ್ನು ಕೊಂಡಾಡಿದ್ದಾರೆ. ಶಿವಶರಣಪ್ಪಾ ವಾಲಿ, ಗಂಧರ್ವ ಸೇನಾ, ಹಣಮಂತಪ್ಪ ಪಾಟೀಲ, ಮಲ್ಲಿಕಾರ್ಜುನ ಸ್ವಾಮಿ, ಹೆಚ್.ಸಿ.ಖಿಡ್ಕೆ , ಮಲ್ಲಿಕಾರ್ಜುನ ಬಿರಾದಾರ, ಓಂಪ್ರಕಾಶ ರೊಟ್ಟೆ, ಗುರುನಾಥ ಗಡ್ಡೆ ಮುಂತಾದವರ ಸೇವೆಯನ್ನು ಶ್ಲಾಘಿಸಿದ್ದಾರೆ. ಜಿಲ್ಲೆಯ ಮಹಿಳಾ ಲೇಖಕಿಯರ ಕೊಡುಗೆ ಸ್ಮರಿಸಿ ಮಹಿಳೆಯರು ಇನ್ನೂ ಹೆಚ್ಚಿನ ರೀತಿಯಲ್ಲಿ ಮುಂದೆ ಬರಬೇಕೆಂಬ ಹಂಬಲ ವ್ಯಕ್ತಪಡಿಸಿದ್ದಾರೆ.

ಹೀಗೆ ತಮ್ಮ ವೈವಿಧ್ಯಮಯ ಭಾಷಣದಲ್ಲಿ ಹತ್ತು ಹಲವು ಗಮನ ಸೆಳೆಯುವ ಅಂಶಗಳನ್ನು ಸೇರಿಸಿ ಜಿಲ್ಲೆಯ ಜನತೆಯ ಪ್ರೀತಿಗೆ ಪಾತ್ರರಾಗಿದ್ದಾರೆ.

# ಅಧ್ಯಾಯ-೪

**ಉಪಸಂಹಾರ :**

ಬೀದರ ಜಿಲ್ಲೆಯ ಆಧುನಿಕ ಸಾಹಿತಿಗಳಲ್ಲಿ ಪ್ರಮುಖರಾಗಿರುವ ಶ್ರೀಮತಿ ಯಶೋದಮ್ಮ ಸಿದ್‌ಬಟ್ಟೆಯವರು ಸೃಜನಶೀಲ ಬರಹಗಾರರಾಗಿದ್ದು, ತಮ್ಮ ಅಮೂಲ್ಯ ಬರಹಗಳ ಮೂಲಕ ಕಥೆ, ಕಾದಂಬರಿ, ಕಾವ್ಯ , ಚಿಂತನ ಲೇಖನಗಳನ್ನು ರಚಿಸಿ ಕನ್ನಡಮ್ಮನ ಉಡಿ ತುಂಬಿ ಅಪಾರ ಜನ ಮೆಚ್ಚಿಗೆಗೆ ಪಾತ್ರರಾಗಿದ್ದಾರೆ. ಬಹುಮುಖಿ ಪ್ರತಿಭೆಯ ಇವರು ತಮ್ಮ ಬರಹ ಮತ್ತು ಭಾಷಣಗಳ ಮೂಲಕ ಜಿಲ್ಲೆಯ ಸಹೃದಯಿಗಳ ಮನಸ್ಸು ಗೆದ್ದಿದ್ದಾರೆ. ಹಾಗೆಯೇ ಮಹಿಳೆಯರ ಬಗ್ಗೆ ಅಪಾರ ಕಾಳಜಿ ಹೊಂದಿರುವ ಮಹಿಳೆಯರ ಸಮಸ್ಯೆಗಳನ್ನು, ಶೋಷಣೆಯನ್ನು ವರದಕ್ಷಿಣೆ ಕುರಿತು ತಮ್ಮ ಹರಿತವಾದ ಲೇಖನಿಯಿಂದ ಖಂಡಿಸಿದ್ದಾರೆ. ವಿಧವಾ ವಿವಾಹ, ಮಹಿಳಾ ಶಿಕ್ಷಣ ಹೀಗೆ ಹೆಣ್ಣಿನ ಧ್ವನಿಯಾಗಿ, ಸ್ತ್ರೀ ಶಕ್ತಿಯಾಗಿ ವೈವಿಧ್ಯಪೂರ್ಣ ವ್ಯಕ್ತಿತ್ವದೊಂದಿಗೆ ಹೊರ ಹೊಮ್ಮಿದ ಧೀಮಂತ ಶಕ್ತಿಯಾಗಿದ್ದಾರೆ.

ಸದಾ ಉತ್ಸಾಹದ ಚಿಲುಮೆಯಾಗಿ ಬದುಕಿರುವ ಯಶೋದಮ್ಮ ನವರಿಗೆ ಶಿಕ್ಷಕ ವೃತ್ತಿ ಉಸಿರಾದರೆ, ಸಾಹಿತ್ಯ ಅವರ ಪ್ರಾಣವಾಗಿತ್ತು. ವಿದ್ಯಾರ್ಥಿ, ಶಿಕ್ಷಕರುಗಳ ಪ್ರೀತಿ, ಆದರಗಳಿಗೆ ಪಾತ್ರರಾದ ಇವರು ಸಂಪನ್ಮೂಲ ವ್ಯಕ್ತಿಯಾಗಿ, ಆದರ್ಶ ಶಿಕ್ಷಕಿಯಾಗಿ ರಾಜ್ಯ ಹಾಗೂ ರಾಷ್ಟ್ರ ಪ್ರಶಸ್ತಿಯ ಒಡತಿಯಾಗಿದ್ದಾರೆ. ಇನೊಂದೆಡೆಗೆ ಸಾಹತ್ಯ ಕ್ಷೇತ್ರದಲ್ಲಿ ತಮ್ಮ ಅಮೂಲ್ಯವಾದ ೭ ಕೃತಿಗಳು ನೀಡುವುದರ ಮೂಲಕ ಅಪಾರ ಸಹೃದಯಿಗಳು ಮನ ತಣಿಸಿದ್ದಾರೆ. ``ಇದ್ದಲ್ಲಿ ಅಗಿ ಬಿದ್ದಲ್ಲಿ ಚಿಗಿ`` ಎನ್ನುವ ಗಾದೆಯಂತೆ ಹೋದೆಡೆಗಳಲ್ಲಿ ಸಾಧನೆ ಮಾಡಿ ತೋರಿಸಿರುವ ಸಾಕಾರ ಮೂರ್ತಿಯಾಗಿದ್ದಾರೆ. ಭರತನಾಟ್ಯ ಕಲಾವಿದೆ ಯಶೋದಮ್ಮ ಈ ಸಾಂಸ್ಕೃತಿಕ ಕ್ಷೇತ್ರದಿಂದ ಸಾಹಿತಿಕ ಕ್ಷೇತ್ರಕ್ಕೆ ಪಲಾಯನ ಮಾಡಿ ಅಮೂಲ್ಯ ಕೃತಿಗಳ ಮೂಲಕ ಸಾಹಿತ್ಯ ಕೃಷಿ ಗೈದಿದ್ದಾರೆ. ಮಂಗಳಾ, ವಿಶ್ವಮೇಘ, ಹೊಸ ಹೆಜ್ಜೆ ಕಾದಂಬರಿಗಳು ಅಪಾರ ಜನಮೆಚ್ಚಿಗೆ ಪಡೆದಿವೆ. ಮಹಿಳಾ ಸಾಹಿತಿಗಳ ಬಗ್ಗೆ ಅಪಾರ ಕಾಳಜಿ ಹೊಂದಿದ ಇವರು ಚೈತನ್ಯಶ್ರೀ ಹಾಗೂ ಸಾಹಿತ್ಯ ಸೌರಭ ಸಂಪಾದನ ಕೃತಿ ಹೊರತಂದು ಅನೇಕ ಮಹಿಳಾ ಬರಹಕ್ಕೆ ಶಕ್ತಿ ತುಂಬಿದ್ದಾರೆ. ಹೀಗೆ ಸಾಹಿತ್ಯ ಸೃಷ್ಠಿಯ ಮೂಲಕ ಕನ್ನಡಮ್ಮನ ಸೇವೆಗೆ ತಮ್ಮನ್ನು ತೊಡಗಿಸಿಕೊಂಡು ಬೀದರ ಜಿಲ್ಲಾ ೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಸಮಸ್ತ ಕನ್ನಡಿಗರ ಪ್ರಶಂಸೆಗೆ ಪಾತ್ರರಾಗಿದ್ದಾರೆ.

ವೈವಿದ್ಯ ಪೂರ್ಣ ವ್ಯಕ್ತಿತ್ವದ ಯಶೋದಮ್ಮನವರು ನೇರ ನಡೆ ನುಡಿ, ಸರಳ ಜೀವನ ಉನ್ನತ ಚಿಂತನೆಯ ಗುಣ ಮೈಗುಡಿಸಿಕೊಂಡವರು. ಸರ್ವಧರ್ಮಿಯರನ್ನು ತುಂಬಾ ಗೌರವದಿಂದ ಕಾಣುವ ಧರ್ಮಾತೀತವಾದ ವ್ಯಕ್ತಿತ್ವವನ್ನು ರೂಪಿಸಿಕೊಂಡಿದರು. ವಿಶ್ವಭಾತೃತ್ವದ ಸಂಕೇತವಾಗಿರುವ ಇವರು ಎಲ್ಲಾ ಧರ್ಮಿಯ ಅಭಿಮಾನಿಗಳನ್ನು ಹೊಂದಿರುವುದು ಅವರ ವ್ಯಕ್ತಿತ್ವಕ್ಕೆ ಹಿಡಿದ

ಕನ್ನಡಿಯಾಗಿದೆ. ಶರಣ ತತ್ವದ ನಿಷ್ಠ ಭಕ್ತರಾದ ಇವರು ಪ್ರಪಂಚದ ಪ್ರತಿಯೊಂದು ಸಮಸ್ಯೆಗೂ ಶರಣ ತತ್ವವೇ ಪರಿಹಾರ ಒದಗಿಸಬಲ್ಲದೆಂಬ ಆಶಾಭಾವನೆ ಹೊಂದಿರುವವರು. ೧೨ನೇ ಶತಮಾನದ ವಚನಕಾರರ ಗಾಢವಾದ ಪ್ರಭಾವಕ್ಕೆ ಒಳಗಾಗಿದ್ದಾರೆ. ಫ್ಲೋರಿಡಾದಲ್ಲಿ ನಡೆದ `ಅಕ್ಕ` ವಿಶ್ವ ಕನ್ನಡ ಸಮ್ಮೇಳನದಲ್ಲಿ ಕಲ್ಯಾಣ ನಾಡಿನ ಏಕೈಕ ಪ್ರತಿನಿಧಿಯಾಗಿ ಭಾಗವಹಿಸಿ ಅಮೇರಿಕಾದಲ್ಲಿ ಕನ್ನಡದ ಕಹಳೆಯುದಿದ್ದಾರೆ.

ಧರಿನಾಡಿನ ಸೊಸೆಯಾದ ಯಶೋದಮ್ಮ ಮೂಲತಹ ಮಲೆನಾಡಿನ ಮಗಳು ಈ ಮಣ್ಣಿನಲ್ಲಿಯ ಬೆರೆತು ಜಿಲ್ಲೆಯ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ವೃತ್ತಿಯಿಂದ ನಿವೃತ್ತರಾಗಿ ಕರ್ನಾಟಕ ಲೇಖಕಿಯರ ಸಂಘ ಬೀದರನಲ್ಲಿ ಶಾಖೆ ಆರಂಭಿಸಿ ಈ ಮೂಲಕ ಸಾಹಿತ್ಯ ಸೇವೆಗೆ ಮುಂದಾದರು. ಆದರ್ಶ ಜೀವನ ಶೈಲಿ, ಅದ್ಭುತ ಕ್ರೀಯಾಶೀಲತೆ ಹಾಗೂ ಪ್ರಾಮಾಣಿಕತೆಗಳನ್ನು ಮೈಗೂಡಿಸಿಕೊಂಡಿರುವ ಪ್ರಬುದ್ಧ ವ್ಯಕ್ತಿತ್ವದ ಮಹಿಳೆ ಇವರಾಗಿದ್ದು, ಯುವ ಬರಹಗಾರರಿಗೆ, ಪ್ರತಿಭೆಗಳಿಗೆ ಅಂತರಂಗದ ಪ್ರೀತಿ ಧಾರೆಯೆರೆಯುವ ಇವರ ವ್ಯಕ್ತಿತ್ವ ಜಿಲ್ಲೆಯ ಜನತೆಯನ್ನು ಮಂತ್ರಮುಕ್ತಗೊಳಿಸಿದೆ.

ಅಪಾರ ಜನರ ಪ್ರೀತಿ ಗೌರವಗಳಿಗೆ ಭಾಜನರಾಗಿ ಇಹಲೋಕ ತ್ಯಜಿಸಿರುವ ಯಶೋದಮ್ಮನವರು ಅರ್ಥಪೂರ್ಣವಾದ ಬದುಕನ್ನು ಬದುಕಿ ತೋರಿಸಿದ್ದಾರೆ. ಅವರ ವ್ಯಕ್ತಿತ್ವ ಆದರ್ಶತೆಯಿಂದ ಕೂಡಿತ್ತು. ಅವರ ಸಾಹಿತ್ಯವು ಅಷ್ಟೇ ಸತ್ವಯುತವಾದುದಾಗಿದೆ. ಹೀಗಾಗಿ ಅವರ ಬದುಕು ಬರಹದ ಅಧ್ಯಯನ ಅರ್ಥಪೂರ್ಣ ಪ್ರಯತ್ನವಾಗಿದೆ ಎಂದು ಹೇಳಬಹುದಾಗಿದೆ.

# ಅನುಬಂಧ

- ಪ್ರಶಸ್ತಿ ಮತ್ತು ಸಮ್ಮಾನಗಳು
- ಇತರ ಸಾಧನೆಗಳು
- ಲೇಖಕಿ ಅವರ ಕುರಿತು ಇತರ ಸಾಹಿತಿಗಳ ಅಭಿಪ್ರಾಯ
- ವ್ಯಕ್ತಿ ಪರಿಚಯ
- ಭಾವಚಿತ್ರಗಳು
- ಗ್ರಂಥಋಣ

# ಅನುಬಂಧ

## ಪ್ರಶಸ್ತಿ ಹಾಗೂ ಸನ್ಮಾನಗಳು

1. ಜಿಲ್ಲೆಯ ಅತ್ಯುತ್ತಮ ಶಿಕ್ಷಕ ಪ್ರಶಸ್ತಿ ೧೯೯೩
2. ರಾಜ್ಯ ಶಿಕ್ಷಕ ಪ್ರಶಸ್ತಿ, ಕರ್ನಾಟಕ ಸರ್ಕಾರ ೧೯೯೭
೩. ರಾಷ್ಟ್ರೀಯ ಶಿಕ್ಷಕ ಪ್ರಶಸ್ತಿ, ಭಾರತ ಸರ್ಕಾರ ೧೯೯೯
4. ವಿಶ್ವಮೇಘ ಕಾದಂಬರಿಗೆ ಕರ್ನಾಟಕ ಜನಸೇವ ಸಾಹಿತ್ಯ ಪ್ರಶಸ್ತಿ ಹಾಗೂ ಗುಲಬರ್ಗಾ ವಿ.ವಿ. ರಾಜ್ಯೋತ್ಸವ ಪ್ರಶಸ್ತಿ.
5. ಸ್ಕೌಟ್ಸ ಗೈಡ್ಸ್ ಸಂಸ್ಥೆಯ ಅಸಿಸ್ಟೆಂಟ್ ಡಿಸ್ಟ್ರಕ್ಟ ಕಮೀಷನರ್ ಆಗಿ ಕಾರ್ಯನಿರ್ವಹಣೆ
6. ಕರ್ನಾಟಕ ರಾಜ್ಯ ಸ್ಟೇಟ್ ಚೀಫ್ ಕಮಿಶನರರಿಂದ ಬೆಂಗಳೂರಿನಲ್ಲಿ, ೧೯೯೫ ರಲ್ಲಿ ಸನ್ಮಾನಿಸಿ ಗೌರವಿಸಲಾಯಿತು.
7. ನೇಪಾಳದ ರಾಜಧಾನಿ ಖಟ್ಮಂಡುವಿನಲ್ಲಿ ಜರುಗಿದ ಅಂತರಾಷ್ಟ್ರೀಯ ಮಟ್ಟದ ಧಾರ್ಮಿಕ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಪಾಲ್ಗೊಂಡಿದ್ದಾರೆ
8. ಕೋಲಾಪುರದಲ್ಲಿ ಜರುಗಿದ ೪ನೇ ಅಖಿಲ ಭಾರತೀಯ ಕವಿಯತ್ರಿ ಸಮ್ಮೇಳನದಲ್ಲಿ ಸನ್ಮಾನಿಸಲಾಯಿತು, ೨೦೦೩.
9. ರಾಜ್ಯ ಸಂಪನ್ಮೂಲ ಕೇಂದ್ರ ಮೈಸೂರು ನಿಂದ ಪ್ರಶಂಸನ ಪತ್ರ, ೧೯೯೨
10. ಚಿದಂಬರಾಶ್ರಮ ಸಿದ್ಧಾರುಢ ಮಠ ಬೀದರ ಇವರಿಂದ ಸನ್ಮಾನ ಪತ್ರ ಸಮರ್ಪಣೆ ೨೦೦೦
11. ಆಲ್ ಇಂಡಿಯಾ ಸೆಂಟರ್ ಫಾರ್ ಅರಬನ್ ಆಂಡ್ ರೂರಲ್ ಡೆವಲಪಮೆಂಟ ಸಂಸ್ಥೆ ಹೊಸ ದಿಲ್ಲಿಯಲ್ಲಿ ಏರ್ಪಡಿಸಿದ ಸೇಮಿನಾರನಲ್ಲಿ ಕರ್ನಾಟಕದ ಪ್ರತಿನಿಧಿಯಾಗಿ ಭಾಗವಹಿಸಿದರು.
12. ಹಾರಕೂಡದಲಿ ಜರುಗಿದ ಬೀದರ ಜಿಲ್ಲೆಯ ೭ನೇ ಕನ್ನಡ ಸಾಹಿತ್ಯ ಸಮ್ಮೇಳನ ೨೦೦೩ ಅಧ್ಯಕ್ಷತೆ
13. ಬೀದರ ಜಿಲ್ಲೆಯ ಸಾಕ್ಷರತಾ ಆಂದಲೋನದಲ್ಲಿ ಮಹಿಳಾ ವಿಭಾಗದ ಅಧ್ಯಕ್ಷರಾಗಿ ಇಡೀ ಜಿಲ್ಲೆಯನ್ನು ಸುತ್ತಿದ್ದಾರೆ.
14. ಅಮೇರಿಕಾದ ಫ್ಲೋರಿಡಾದಲ್ಲಿ ಜರುಗಿದ ೫ನೇ ವಿಶ್ವ `ಅಕ್ಕ` ಕನ್ನಡ ಸಮ್ಮೇಳನದಲ್ಲಿ ಕವಿಗೋಷ್ಠಿಯಲ್ಲಿ ಕಾವ್ಯ ವಾಚನ.
15. ಗುಲಬರ್ಗಾ ಆಕಾಶವಾಣಿ ಕೇಂದ್ರದಿಂದ ಚಿಂತನ ಮತ್ತು ರೇಡಿಯೋ ಟಾಕ್‌ಗಳ ಪ್ರಸಾರ.
16. ೭ನೇ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ ಮಂಡ್ಯದಲ್ಲಿ ಸನ್ಮಾನ ೨೦೦೭.

**ಇತರ ಸಾಧನೆಗಳು :**

1. ಕರ್ನಾಟಕ ಲೇಖಕಿಯರ ಸಂಘ (ರಿ) ಬೀದರ ಜಿಲ್ಲೆಯಲ್ಲಿ ಶಾಖೆ ಸ್ಥಾಪನೆ
2. ಮಹಿಳಾ ಜನಜಾಗೃತಿಗಾಗಿ ಅನೇಕ ಭಾಷಣಗಳನ್ನು ಮಾಡಿದ್ದಾರೆ
3. ಕುಟುಂಬ ಕಲ್ಯಾಣಕ್ಕೆ ಸಂಬಂಧಿಸಿದಂತೆ ಜನಜಾಗೃತಿ ಮೂಡಿಸಲು ಸುಮಾರು 500 ಭಾಷಣಗಳು ಮಾಡಿದ್ದಾರೆ
4. ಸ್ಕೌಟ್ಸ-ಗೈಡ್ಸ್ ಶಾಖೆ ಬೀದರನಲ್ಲಿ ಅಸಿಸ್ಟೆಂಟ ಡಿಸ್ಟ್ರಿಕ್ಟ ಕಮೀಷನರ್ ಆಗಿ ಕಾರ್ಯನಿರ್ವಹಿಸಿದ್ದಾರೆ
5. ಕರ್ನಾಟಕ ರಾಜ್ಯ ಪ್ರೌಢಶಾಲಾ ಸಹ ಶಿಕ್ಷಕರ ಸಂಘ ಜಿಲ್ಲಾ ಸಮಿತಿಯಲ್ಲಿ ಮಹಿಳಾ ಪ್ರತಿನಿಧಿಯಾಗಿ ಸೇವೆ ಸಲ್ಲಿಸಿದ್ದಾರೆ.
6. ಭಾರತ ಸರ್ಕಾರ ಮಾನವ ಸಂಪನ್ಮೂಲ ಇಲಾಖೆಯ ಕಲಾ ವಿಭಾಗದ ವತಿಯಿಂದ ದೇಶದಾದ್ಯಂತ ಪ್ರಸ್ತುತಗೊಂಡ ಅಕ್ಬರ್ ನಾಟಕದಲ್ಲಿ ಜೋದಾಬಾಯಿ ಪಾತ್ರ ನಿರ್ವಹಿಸಿದ್ದಾರೆ. ಇದು ಲೈಟ ಅಂಡ ಸೌಂಡ ಸಿಸ್ಟಮಿನಲ್ಲಿ ಪ್ರಸ್ತುತಗೊಂಡಿತ್ತು.

## ಲೇಖಕಿ ಯಶೋದಮ್ಮ ಸಿದ್‌ಬಟ್ಟೆ ಅವರನ್ನು ಕುರಿತು ಸಾಹಿತಿಗಳ ಅಭಿಪ್ರಾಯಃ

ಯಶೋದಮ್ಮ ಸಿದ್‌ಬಟ್ಟೆ ಬೀದರ ಜಿಲ್ಲೆಯ ಹೆಸರಾಂತ ಕಾದಂಬರಿಕಾರ್ತಿ ವೃತ್ತಿಯಿಂದ ಶಾಲಾ ಶಿಕ್ಷಕಿ. ಆದರೆ ಪ್ರವೃತ್ತಿಯಿಂದ ವಾಗ್ಮಿ ಹಾಗೂ ಲೇಖಕಿ. ಇಡೀ ಬೀದರ ಜಿಲ್ಲೆ ತುಂಬ ತಮ್ಮ ಕಂಚಿನ ಕಂಠದಿಂದ, ಓತಪ್ರೋತವಾದ ಭಾಷೆಯ ಪ್ರಭುತ್ವದಿಂದ, ವಿವಿಧ ವಿಷಯಗಳ ಮೇಲಿನ ಪಾಂಡಿತ್ಯದಿಂದ ಜನಪ್ರಿಯ ಭಾಷಣಕಾರ್ತಿಯಾದರು. ಕಾದಂಬರಿ, ಸಣ್ಣ ಕತೆಗಳಲ್ಲಿ ವೈಚಾರಿಕ ಲೇಖನಗಳನ್ನು ಸ್ತ್ರೀ ಸ್ವಾತಂತ್ರ್ಯ ಹಾಗೂ ಸಮಾನತೆಯ ಕಹಳೆಯ ಧ್ವನಿಯನ್ನು ಪ್ರತಿಧ್ವನಿಸಿದ್ದಾರೆ. ಇಡೀ ತಮ್ಮ ಆಯುಷ್ಯವನ್ನು ಅರ್ಥಪೂರ್ಣ ಸಮಾಜ, ಸಂಸ್ಕೃತಿ, ಸಾಹಿತ್ಯಗಳ ಸೇವೆಯಲ್ಲಿ ಕಳೆದು, ಆದರ್ಶ ವ್ಯಕ್ತಿತ್ವದ ವಾಗ್ಮಿಯಾಗಿ ಹೆಸರು ಪಡೆದಿದ್ದಾರೆ.

-ಪ್ರೊ. ವಿರೇಂದ್ರ ಸಿಂಪಿ

ಸಾಹಿತಿಗಳು, ಬೀದರ.

ಕರ್ನಾಟಕದ ತುತ್ತ ತುದಿಯ ಬೀದರ ಜಿಲ್ಲೆಯಲ್ಲಿ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ಬರವಿಲ್ಲ. ಎಂಬುದನ್ನು ತೋರಿಸಿಕೊಟ್ಟಿರುವ ಜಿಲ್ಲಾ ಮಹಿಳಾ ಲೇಖಕಿಯರ ಸಂಘದ ಅಧ್ಯಕ್ಷರಾದ ಯಶೋದಮ್ಮ ಸಿದ್‌ಬಟ್ಟೆ ಕತೆ, ಕಾದಂಬರಿ, ವೈಚಾರಿಕ ಲೇಖನಗಳ ಮೂಲಕ ಸಾಹಿತ್ಯ ಲೋಕದಲ್ಲಿ ಕಾಣಿಸಿಕೊಂಡಿದ್ದಾರೆ. ಮಹಿಳಾ ಲೋಕಕ್ಕೆ ಸ್ಫೂರ್ತಿ, ಚೈತನ್ಯ ಕ್ರಿಯಾಶೀಲ ಬರವಣಿಗೆಯ ಮೂಲಕ ಕಾಣಿಸಿಕೊಂಡಿರುವ ಇವರು ಇನ್ನೊಂದೆಡೆಗೆ ಮಹಿಳೆಯರ ಸಂಘಟನೆ ಮಾಡುತ್ತಾ ಅವರಲ್ಲಿ ಸಾಹಿತ್ಯಾಭಿರುಚಿಯನ್ನು ತುಂಬುವ, ಅವರು ಸಾಹಿತ್ಯ ಕೃಷಿಯಲ್ಲಿ ತೊಡಗುವಂತೆ ಮಾಡುವ ಅವರಿಂದ ರಚಿತವಾದ ಕೃತಿಗಳಿಗೆ ಜೀವ ತುಂಬುವ ಮೂಲಕ ಸಾಹಿತ್ಯ ಸೇವೆಗೈದಿದ್ದಾರೆ. ಇದನ್ನೆಲ್ಲಾ ಮನಗಂಡು ಬೀದರ ಜಿಲ್ಲಾ 7ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆ ಮಾಡಿ ಗೌರವ ಸಲ್ಲಿಸಿದೆ. `ಕಾದಂಬರಿ` ಸಾಹಿತ್ಯದಲ್ಲಿ ಹೆಸರು ಮಾಡಿರುವ ಯಶೋದಮ್ಮನವರು ಉತ್ತಮವೆನಿಸುವ ಕೃತಿಯನ್ನೇ ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ್ದಾರೆಂಬ ಕಾರಣಕ್ಕೆ ಅವರನ್ನು ಅಭಿನಂದಿಸುತ್ತೇನೆ.

-ಜಾಣಗೇರೆ ವೆಂಕಟರಾಮಯ್ಯ

ಸಾಹಿತಿಗಳು ಮತ್ತು ಪತ್ರಕರ್ತರು ಬೆಂಗಳೂರು

ಅಚ್ಚುಕಟ್ಟುತನದ ಬದುಕಿನ ಯಶೋದಮ್ಮ ಸಿದ್‌ಬಟ್ಟೆ ಅತಿಥಿಸತ್ಕಾರ ಮತ್ತು ಅಚ್ಚುಕಟ್ಟುತನಕ್ಕೆ ಇನ್ನೊಂದು ಹೆಸರೆ ಇವರಾಗಿದ್ದಾರೆ. ಆದರ್ಶೋನ್ಮುಖ ಯಥಾರ್ಥವಾದಿಯಾಗಿ ದಲಿತ ಮತ್ತು ಬಂಡಾಯ ಪ್ರಕಾರದ ಸಾಹಿತ್ಯವನ್ನು ಈ ಕಾಲದ ಅಗತ್ಯವೆಂದು ಪರಿಗಣಿಸಿದ್ದಾರೆ. ತಾವು ಮೆಚ್ಚಿದನ್ನು ಉಪ್ಪಿನಕಾಯಿಯಂತೆ ರುಚಿ ರುಚಿಯಾಗಿ ಮಂಡಿಸಬಲ್ಲ ಅವರು ಒಪ್ಪದನ್ನು ಖಾರವಾಗಿ ಟೀಕಿಸುವಾಗ ಹರಿತವಾದ ಕತ್ತಿಯಂತೆ ಇವರು ಯಶೋದಮ್ಮನವರೇ ಏನು ? ಎನ್ನುವಂತೆ ಅಚ್ಚರಿಗೊಳಿಸುತ್ತಾರೆ. ಹೀಗೆ ನಿರ್ಭಿಡೆಯ ವಿಮರ್ಶಕರಾದ ಇವರು ಕಟು ವಿಮರ್ಶೆಯನ್ನು ಅಭಿವ್ಯಕ್ತಿಸುವ ಸಾಮರ್ಥ್ಯ ಹೊಂದಿದ್ದಾರೆ.

-ದೇಶಾಂಶ ಹುಡುಗಿ
ಸಾಹಿತಿಗಳು ಧರಿನಾಡು ಕನ್ನಡ ಸಂಘ, ಬೀದರ.

ಯಶೋದಮ್ಮನವರಿಂದಾಗಿ ದೂರದ ಬೀದರ ನಮಗೆ ತವರುರಿನಷ್ಟೆ ಹತ್ತಿರವಾಯಿತು. ಶ್ರದ್ಧೆ, ಕಾಳಜಿಯಿಂದ ದುಡಿಯುವ ಅಪರೂಪದ ಅಧ್ಯಕ್ಷೆ ಅವರಾಗಿದ್ದರು. ಉಳಿದವರಿಗೆ ಅವರೊಂದು ಮಾದರಿಯಂತ್ತಿದ್ದರು. ಆದರ್ಶ ಜೀವನ ಶೈಲಿ, ಅದ್ಭುತ ಕ್ರಿಯಾಶೀಲತೆ ಹಾಗೂ ಕಠೋರ ಪ್ರಾಮಾಣಿಕತೆಗಳನ್ನು ಮೈಗೂಡಿಸಿಕೊಂಡಿರುವ ಶ್ರೀಮತಿ ಯಶೋದಮ್ಮನವರು ಪ್ರಭುತ್ವ ವ್ಯಕ್ತಿತ್ವದ ಧಣಿಯಾಗಿದ್ದಾರೆ. ಮಗಳು ಕಾವ್ಯಾಶ್ರೀ ಸಂಸಾರದ ಜಂಜಡದಲ್ಲಿ ಸಾಹಿತ್ಯ ಸೇವೆ ಗೈಯುವುದು ಮರೆಯಬಾರದೆಂಬ ಆಸೆ ಅವರದಾಗಿತ್ತು. ನಿಧಾನವಾಗಿಯಾದರೂ ಸರಿ ಅವರು ತಮ್ಮ ತಾಯಿಯ ದಾರಿಯಲ್ಲಿ ನಡೆಯಬೇಕೆಂಬುದೆ ನನ್ನ ಆಶೆಯ.

-ಶ್ರೀಮತಿ ಸಂಧ್ಯಾರಡ್ಡಿ
ಅಧ್ಯಕ್ಷರು ಕರ್ನಾಟಕ ಲೇಖಕಿಯರ ಸಂಘ
ಬೆಂಗಳೂರು.

ಶಿಕ್ಷಕಿ ಯಶೋದಮ್ಮ ಸಿದ್ ಬಟ್ಟೆಯವರು ಸದಾ ಉತ್ಸಾಹದ ಚಿಲುಮೆಯಾಗಿ ಬದುಕಿದವರು. ಶಿಕ್ಷಕ ವೃತ್ತಿ ಅವರ ಉಸಿರಾದರೆ, ಸಾಹಿತ್ಯ ಅವರ ಪ್ರಾಣವಾಗಿತ್ತು. ಮಕ್ಕಳ ಮತ್ತು ಮಹಿಳೆಯರ ಕಲ್ಯಾಣಕ್ಕಾಗಿ , ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಯ ವಿಕಾಸಕ್ಕಾಗಿ ದುಡಿದ ಧೀಮಂತ ಮಹಿಳೆ ಪಾದರಸದಂತೆ ರಾಜ್ಯದಾದ್ಯಂತ ಓಡಾಡಿ ಅಮೇರಿಕಾ ದೇಶದ ಫ್ಲೋರಿಡಾದಲ್ಲಿ ಜರುಗಿದ `ಅಕ್ಕ` ವಿಶ್ವ ಕನ್ನಡ ಸಮ್ಮೇಳನದಲ್ಲಿ ಕಲ್ಯಾಣ ನಾಡಿನ ಏಕೈಕ ಪ್ರತಿನಿಧಿಯಾಗಿ ಅಕ್ಕ ಮಹಾದೇವಿಯ ಕುರಿತು ರಚಿಸಿದ ಕವನವನ್ನೋದಿ ಅನಿವಾಸಿ ಕನ್ನಡಿಗರಿಂದ ಭೇಷ ಎನಿಸಿಕೊಂಡರು. ಅಸಂಖ್ಯಾತ ಜನರ ಮಧ್ಯದಲ್ಲಿ ಎದ್ದು ಕಾಣುವಂತಹ ವಿಶೇಷ ವ್ಯಕ್ತಿತ್ವ ಅವರದು.

ಕರ್ನಾಟಕ ಲೇಖಕಿಯರ ಸಂಘ ಬೀದರ ಜಿಲ್ಲಾ ಅಧ್ಯಕ್ಷರಾಗಿ ಮಹಿಳಾ ಸಾಹಿತ್ಯವನ್ನು ವಿಸ್ತೃತಗೊಳಿಸಿದ ಹೆಗ್ಗಳಿಕೆ ಅವರದು. ಶ್ರೀಗಂಧವನ್ನು ತೆಗೆದಂತೆ ತಮ್ಮ ಜೀವನವನ್ನು ಸವೆಸಿ ಎಲ್ಲೆಡೆಗಳಲ್ಲೂ ಕಂಪನ ಪಸರಿಸಿದ ಆ ಮಹಿಳಾಮಣಿ ಮತ್ತಾರು ಅಲ್ಲ ನನ್ನ ತಾಯಿ ! ಎಂದು ಹೇಳಿಕೊಳ್ಳಲು ತುಂಬಾ ಸಂತೋಷ, ಹೆಮ್ಮೆ ಅಭಿಮಾನ ಎನಿಸುತ್ತದೆ.

-ಕಾವ್ಯಾಶ್ರೀ ಮಹಾಗಾಂವಕರ
ಸಾಹಿತಿಗಳು, ಗುಲಬರ್ಗಾ.

ಯಶೋದಮ್ಮನವರ ಮಂಗಳ ಕಾದಂಬರಿ ತುಂಬಾ ಆಸಕ್ತಿಯಿಂದ ಓದಿದ್ದೇನೆ. ಅದು ಸಹಜ ಸಂವೇದನೆಗಳಿಂದ ಓದಿಸಿಕೊಂಡು ಹೋಗುವ ಕಾದಂಬರಿ. ಕೌಟುಂಬಿಕ ಜೀವನದಲ್ಲಿಯೇ ಸಾಮಾಜಿಕ ಸಮಸ್ಯೆಗಳಿಗೆ ಕ್ರಾಂತಿಕಾರಿ ನಿಲುವನ್ನು ಒದಗಿಸಿ ಮಾನವಸಹಜವಾದ ಸ್ವಭಾವವಗಳಿಗೆ ಆರೋಗ್ಯಕರ ಪರಿಸರವನ್ನು ನಿರ್ಮಿಸುವ ಕಡೆಗೆ ಕಾದಂಬರಿಯ ಅಭಿವ್ಯಕ್ತಿ, ಸಹಜವಾದ ಒಳತುಡಿತಗಳಿಗೆ ಮಾಂಗಲ್ಯ ತಂದಿದೆ. ಬೀದರಿನ ನೆಲ ಅತ್ಯಂತ ಸ್ಫೂರ್ತಿದಾಯಕ ಹಾಗೂ ಲೋಕಕ್ಕೆ ಪರಿಣಾಮಕಾರಿ ವಿಚಾರಧಾರೆಯನ್ನು ಸದಾ ನೀಡುತ್ತಿರುವ ಚೇತೋಹಾರಿ ಕ್ಷಿತಜ.

-ವಸಂತ ಕುಷ್ಟಗಿ
ಹಿರಿಯ ಸಾಹಿತಿಗಳು, ಗುಲಬರ್ಗಾ.

ಶ್ರೀಮತಿ ಯಶೋದಮ್ಮ ಸಿದ್‌ಬಟ್ಟೆಯವರ ನೂತನ ಕಾದಂಬರಿ ಹೊಸ ಹೆಜ್ಜೆ ಈಗ ತಾನೇ ಓದಿ ಮುಗಿಸಿದೆ. ಹೊಸ ಹೆಜ್ಜೆ ಕೌಟುಂಬಿಕ ಸರಸ, ವಿರಸ, ಸಮರಸ, ದಾಪಂತ್ಯಗಳ ಮಾನವ ಮಾನವ ಸಂಬಂಧಗಳ ಚಿತ್ರಣವಾಗಿದೆ. ಸ್ತ್ರೀ ಕೇಂದ್ರಿತ ಅನುಭವಗಳನ್ನು ವಾಸ್ತವದ ನೆಲೆಗಟ್ಟಿನಲ್ಲಿ ಮನಮುಟ್ಟುವಂತೆ ಇಲ್ಲಿ ಚಿತ್ರಿಸಲಾಗಿದೆ. ಕಥಾ ನಾಯಕಿ ರಮ್ಯಳ ನಿಲವು ಆಧುನಿಕ ಮಹಿಳೆಯ ನಿಲುವು ಆಗಿದೆ. ಸ್ತ್ರೀ ವಾದ, ಸಂಸ್ಕೃತಿ, ವಿಸ್ಮೃತಿ ಸಮಕಾಲೀನ ಸಮಸ್ಯೆಗಳು ಕಾದಂಬರಿಕಾರ್ತಿಗೆ ಕಾಡಿದೆ. ಕಾದಂಬರಿಯ ಕೊನೆಯಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಸಂಪ್ರದಾಯಗಳು ರಮ್ಯ ಕಲ್ಪಿಸಿದ ಸುಂದರ ಬದುಕನ್ನೆ ಹೊಸಕಿ ಹಾಕುತ್ತವೆ. ವಿವಾಹ ವಿಚ್ಛೇದನ ಕಥಾ ನಾಯಕಿಗೆ ಹೊಸ ಆಯಾಮ ಒದಗಿಸಿದೆ. ಕಾದಂಬರಿಗಾರ್ತಿಯ ಕಥೆ ಹೇಳುವ ಕಲೆ ತುಂಬ ಅದ್ಭುತವಾಗಿ ಅಭಿವ್ಯಕ್ತಗೊಂಡಿದೆ.

-ಡಾ. ಜಿ.ಬಿ. ವಿಸಾಜಿ
ಹಿರಿಯ ಸಾಹಿತಿಗಳು ಭಾಲ್ಕಿ ಜಿಲ್ಲೆ ಬೀದರ.

# ದಿ. ಶ್ರೀಮತಿ ಯಶೋದಮ್ಮ ಸಿದ್‌ಬಟ್ಟೆರವರ ವ್ಯಕ್ತಿ ಪರಿಚಯ

ಜನನ : ೦೮–೦೬–೧೯೪೩

ಸ್ಥಳ: ಚಿಕ್ಕಮಗಳೂರು ಜಿಲ್ಲೆ ಜೈಪುರ

ತಂದೆ, ತಾಯಿಯರು: ತಂದೆ ಶಿವಾಚಾರ್ಯ, ತಾಯಿ ಶ್ರೀಮತಿ ಶಾರದಮ್ಮ

ಮದುವೆ : ೧೯೬೮ ರಲ್ಲಿ ಬಸವಣಪ್ಪಾ ಜಿ. ಸಿದ್‌ಬಟ್ಟೆಯವರೊಂದಿಗೆ ವಿವಾಹವಾದರು.

ಮಗ : ಕಾವ್ಯಾನಂದ ಅಮೇರಿಕಾದಲ್ಲಿ ಸಾಫ್ಟವೇರ ಇಂಜೀನಿಯರ

ಮಗಳು : ಶ್ರೀಮತಿ ಕಾವ್ಯಶ್ರೀ ಗುಲ್ಬರ್ಗಾದಲ್ಲಿ ವಾಸ ಸಾಹಿತಿಯಾಗಿದ್ದಾರೆ.

ಮೊಮ್ಮಕ್ಕಳು : ಆರ್ಯನ್, ರೀಯಾ (ಮಗನ ಮಕ್ಕಳು)

ಶೃತಿ, ಸೌಮ್ಯ, ಶುಭಂ, ಸೌರಭ (ಮಗಳ ಮಕ್ಕಳು)

ಪದವಿ : ಎಂ.ಎ. ಎಂ.ಇಡಿ.

ವಿದೇಶ ಪ್ರವಾಸ: ನೇಪಾಳ, ಥೈಲ್ಯಾಂಡ, ಸಿಂಗಪೂರ, ಚೀನಾ, ಮಲೇಶಿಯಾ, ಶ್ರೀಲಂಕಾ , ಇಂಗ್ಲೇಂಡ, ಫ್ರಾನ್ಸ್, ಜರ್ಮನಿ, ಅಮೇರಿಕಾ.

ವೃತ್ತಿ ಸೇವೆ:

1. ೧೯೯೮ ರಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕಿಯಾಗಿ ಸೇವೆ ಆರಂಭ
2. ೧೯೮೨ ರಲ್ಲಿ ಪ್ರೌಢ ಶಾಲಾ ಶಿಕ್ಷಕಿಯಾಗಿ ಆಯ್ಕೆಯಾಗಿ
3. ೧೯೮೩ ರಲ್ಲಿ ಸರ್ಕಾರಿ ಪದವಿಪೂರ್ವ ಕಾಲೇಜಿನ ಉಪನ್ಯಾಸಕಿಯಾಗಿ ಪದೋನ್ನತಿ
4. ೨೦೦೮ ರಲ್ಲಿ ವೃತ್ತಿಯಿಂದ ನಿವೃತ್ತರಾಗಿದ್ದಾರೆ.

ಮರಣ : ೧೭–೦೩–೨೦೦೮

ಕೃತಿಗಳು :

1. ಮಂಗಳಾ (ಕಾದಂಬರಿ)
2. ವಿಶ್ವಮೇಘ (ಕಾದಂಬರಿ)
3. ಹೊಸ ಹೆಜ್ಜೆ (ಕಾದಂಬರಿ) (ಬಿಡುಗಡೆಯಾಗಬೇಕಾಗಿದೆ)
4. ಬೀದರ ಜಿಲ್ಲಾ ಮಹಿಳಾ ಸಾಹಿತಿಗಳು
5. ಸಾಹಿತ್ಯ ಸೌರಭ (ಚಿಂತನ ಬರಹಗಳ ಲೇಖನ) (ಸಂಪಾದನೆ)
6. ಚೈತನ್ಯಶ್ರೀ (ಕವನಗಳು) (ಸಂಪಾದನೆ)
7. ಪ್ರಗತಿಯ ಪಥದಲ್ಲಿ ಭಾರತೀಯ ನಾರಿ



ರಾಷ್ಟ್ರಪತಿ ಕೆ.ಆರ್.ನಾರಾಯಣನ್‌ರಿಂದ ರಾಷ್ಟ್ರ ಶಿಕ್ಷಕ ಪ್ರಶಸ್ತಿ ಸ್ವೀಕರಿಸುತ್ತಿರುವ ಯಶೋದಮ್ಮ ಸಿದ್‌ಬಟ್ಟೆ

ಕರ್ನಾಟಕ ರಾಜ್ಯ ಶಿಕ್ಷಣ ಮಂತ್ರಿಗಳಾದ ಗೋವಿಂದೆ ಗೌಡರಿಂದ ರಾಜ್ಯ ಶಿಕ್ಷಕ ಪ್ರಶಸ್ತಿ ಸ್ವೀಕರಿಸುತ್ತಿರುವ ಯಶೋದಮ್ಮ ಸಿದ್‌ಬಟ್ಟೆ



ಸಾಹಿತಿ ಚೆನ್ನವೀರ ಕಣವಿ ಅವರಿಂದ ಗುಲಬರ್ಗಾ ವಿಶ್ವವಿದ್ಯಾಲಯದಿಂದ ರಾಜ್ಯೋತ್ಸವ ಪ್ರಶಸ್ತಿ ಸ್ವೀಕರಿಸುತ್ತಿರುವ ಯಶೋದಮ್ಮ ಸಿದ್‌ಬಟ್ಟೆ




ಬೀದರ ಜಿಲ್ಲಾ ೨ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ವೇದಿಕೆ ಅಲಂಕರಿಸಿರುವ ಯಶೋದಮ್ಮ ಸಿದ್‌ಬಟ್ಟೆ

ಬೀದರ ಜಿಲ್ಲಾ ೭ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ತಮ್ಮ ಪತಿ ಬಿ.ಜಿ.ಸಿದ್‌ಬಟ್ಟೆ
ಅವರೊಂದಿಗೆ ಯಶೋದಮ್ಮ ಸಿದ್‌ಬಟ್ಟೆ



ಪ್ರಧಾನಮಂತ್ರಿ ಅಟಲ್ ಬಿಹಾರಿ ವಾಜಪಾಯಿ ಹಾಗೂ ಮಾನವ ಸಂಪನ್ಮೂಲ ಅಭಿವೃದ್ಧಿ
ಮಂತ್ರಿ ಮುರಳ ಮನೋಹರ ಜೋಶಿ ಅವರೊಂದಿಗೆ ಯಶೋದಮ್ಮ ಸಿದ್‌ಬಟ್ಟೆ

# ಗ್ರಂಥ ಋಣ

| ಕ್ರ. ಸಂ. | ಲೇಖಕ/ಸಂಪಾದಕ | ಕೃತಿ | ಪ್ರಕಾಶನ | ವರ್ಷ |
|---|---|---|---|---|
| 1. | ಡಾ.ಎಸ್.ತಿಪ್ಪೆರುದ್ರ ಸ್ವಾಮಿ | ಕರ್ನಾಟಕ ಸಂಸ್ಕೃತಿ ಸಮೀಕ್ಷೆ | ಡಿ.ವಿ.ಕೆ. ಮೂರ್ತಿ, ಮೈಸೂರು | ೧೯೯೭ |
| 2. | ಡಾ. ಸೋಮನಾಥ ಯಾಳವಾರ (ಸಂ.) ಡಾ. ಪ್ರೇಮಾ ಸಿರ್ಸೆ | ಬೀದರ ಜಿಲ್ಲಾ ದರ್ಶನ | ಪ್ರಸಾರಂಗ ಗುಲಬರ್ಗಾ | ೨೦೦೫ |
| 3. | ಡಾ. ಕಮಲಾ ಹಂಪನಾ ಡಾ. ಎಸ್.ಪಿ. ಪದ್ಮಪ್ರಸಾದ | ಸುವರ್ಣ ಭಾರತಿ ಸಂಪುಟ-3 | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. | ೧೯೯೭ |
| 4. | ಡಾ. ಶಾಂತಿನಾಥ ದಿಬ್ಬದ | ವೈಚಾರಿಕ ಲೇಖನಗಳು | ಪ್ರಸಾರಂಗ ಗುಲಬರ್ಗಾ | ೨೦೦೫ |
| 5. | ಜಯದೇವಪ್ಪಾ ಜೈನಕೇರಿ | ಸಾಹಿತ್ಯ ಸಂಪದ | ಶಾಂತಲಾ ಪ್ರಕಾಶನ, ಶಿವಮೊಗ್ಗ | ೨೦೦೪ |
| 6. | --ಅದೇ-- | ಸಾಹಿತ್ಯ ಸೌರಭ | ಶಾಂತಲಾ ಪ್ರಕಾಶನ, ಶಿವಮೊಗ್ಗ | ೨೦೦೪ |
| 7. | ಡಾ.ಟಿ.ವಿ. ಸುಬ್ರಹ್ಮಣ್ಯ | ವಿ.ಕೃ. ಗೋಕಾಕರ ಭಾರತ ಸಿಂಧೂ ರಶ್ಮಿ | ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು | ೧೯೯೭ |
| 8. | ಶ್ರೀ ಬಿ.ಎಚ್.ಶ್ರೀಧರ | ಪ್ರತಿಭೆ | ರವೀಂದ್ರ ಪುಸ್ತಕಾಲಯ, ಸಾಗರ | ೧೯೭೮ |
| 9. | ಎಲ್.ಎಸ್. ಶೇಷಗಿರಿರಾವ | ಸ್ವಾತಂತ್ರೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ | ಉದಯಭಾನು ಕಲಾ ಸಂಘ, ಬೆಂಗಳೂರು | ೧೯೯೩ |
| 10. | ವಿ. ಸೀತಾರಾಮಯ್ಯ | ಸಾಹಿತ್ಯ ಲೋಕನ | ವಿ.ಸೀ. ಸ್ಮರಣ ವೇದಿಕೆ | ೧೯೯೫ |
| 11. | ಪ್ರೊ. ಡಿ.ಲಿಂಗಯ್ಯಾ | ಕಣ್ಣಳತೆ | ವಸಂತ ಪ್ರಕಾಶನ, ಬೆಂಗಳೂರು | ೨೦೦೩ |
| 12. | ವಾಮನ ಬೇಂದ್ರೆ (ಸಂ.) | ಸಮಗ್ರ ಕಾವ್ಯ ಸಿದ್ಧಾಂತ ಸಂ.6 | ಡಾ.ದ.ರಾ.ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳಿ. | ೧೯೯೪ |
| 13. | ಅ.ನ.ಕೃಷ್ಣರಾವ | ಸಾಹಿತ್ಯ ಮತ್ತು ಕಾಮ ಪ್ರಚೋದನೆ | ಸಾಗರ ಪ್ರಕಾಶನ, ಬೆಂಗಳೂರು. | ೧೯೯೬ |

| | | | | |
|---|---|---|---|---|
| 14. | ಡಾ. ವಿಜಯಶ್ರೀ ಸಬರದ (ಸಂ.) | ವಿಚಾರ ಸಾಹಿತ್ಯ 1999 | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. | ೧೯೯೯ |
| 15. | ಡಾ.ರಾಗೌ (ಸಂ.) | ಬೇಂದ್ರೆ ಸಾಹಿತ್ಯ ಸಮಾಲೋಚನೆ | ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. | ೧೯೯೬ |
| 16. | ಪ್ರೊ. ಸುಗಯ್ಯಾ ಹಿರೇಮಠ (ಸಂ.) | ಚಿಂತನ ಲೇಖನಗಳು | ಪ್ರಸಾರಂಗ ಗುಲಬರ್ಗಾ | ೨೦೦೫ |
| 17. | ಪ್ರೊ. ಕೆ.ಎಸ್. ನಾಯಕ (ಸಂ.) | ಕಥಾ ಸಂಗಮ | ಪ್ರಸಾರಂಗ ಗುಲಬರ್ಗಾ | ೨೦೦೩ |
| 18. | ಪ್ರೊ. ಮಲ್ಲೆಪುರಂ ಜಿ. ವೆಂಕಟೇಶ | ತಿಳಿವ ತೇಜದ ಮುಂದೆ | ಸಾಹಿತ್ಯ ಪ್ರಕಾಶನ ಹುಬ್ಬಳಿ. | ೧೯೯೬ |
| 19. | ದೇಶಾಂಶ ಹುಡಗಿ | ಧರಿನಾಡ ಜಾನಪದ ಗಾದೆಗಳು | ಧರಿನಾಡು ಕನ್ನಡ ಸಂಘ, ಬೀದರ. | ೨೦೦೫ |
| 20. | ಯಶೋದಮ್ಮ ಸಿದ್‌ಬಟ್ಟೆ | ಮಂಗಳಾ | ಕಾವ್ಯಶ್ರೀ ಪ್ರಕಾಶನ, ಬೀದರ. | ೧೯೯೫ |
| 21. | ಯಶೋದಮ್ಮ ಸಿದ್‌ಬಟ್ಟೆ | ವಿಶ್ವಮೇಘ | ಕರ್ನಾಟಕ ಲೇಖಕಿಯರ ಸಂಘ, ಬೀದರ. | ೨೦೦೫ |
| 22. | ಯಶೋದಮ್ಮ ಸಿದ್‌ಬಟ್ಟೆ (ಸಂ.) | ಚೈತನ್ಯಶ್ರೀ | ಕರ್ನಾಟಕ ಲೇಖಕಿಯರ ಸಂಘ, ಬೀದರ. | ೨೦೦೫ |
| 23. | ಯಶೋದಮ್ಮ ಸಿದ್‌ಬಟ್ಟೆ (ಸಂ.) | ಸಾಹಿತ್ಯ ಸೌರಭ | ಕರ್ನಾಟಕ ಲೇಖಕಿಯರ ಸಂಘ, ಬೀದರ. | ೨೦೦೬ |
| 24. | ಯಶೋದಮ್ಮ ಸಿದ್‌ಬಟ್ಟೆ | ಪ್ರಗತಿಯ ಪಥದಲ್ಲಿ ಭಾರತೀಯ ನಾರಿ | ಕಾವ್ಯಶ್ರೀ ಪ್ರಕಾಶನ, ಬೀದರ. | ೨೦೦೩ |
| 25. | ಯಶೋದಮ್ಮ ಸಿದ್‌ಬಟ್ಟೆ | ಬೀದರ ಜಿಲ್ಲಾ ಮಹಿಳಾ ಸಾಹಿತಿಗಳು | ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. | ೨೦೦೭ |
| 26. | ಯಶೋದಮ್ಮ ಸಿದ್‌ಬಟ್ಟೆ | ಹೊಸ ಹೆಜ್ಜೆ | ಕರ್ನಾಟಕ ಲೇಖಕಿಯರ ಸಂಘ, ಬೀದರ. | ೨೦೦೭ |

| | | | | |
|---|---|---|---|---|
| 27. | ದೇಶಾಂಶ ಹುಡಗಿ | ನಾಕಂಡ ನನ್ನವರು | ಕನ್ಯಾಕುಮಾರಿ ಪ್ರಕಾಶನ, ಬೀದರ. | ೧೯೯೫ |
| 28. | ಡಾ.ರಹಮತ್ ತರಿಕೇರಿ | ವಿಶ್ವಕೋಶ-3 (ಧರ್ಮ) | ಕನ್ನಡ ವಿಶ್ವವಿದ್ಯಾಲಯ, ಹಂಪಿ. | ೨೦೦೩ |
| 29. | ಡಾ. ಡಿ.ಬಿ. ನಾಯಕ | ದೇಶಿ ಸಂಸ್ಕೃತಿ | ಬಂಜಾರ ಪ್ರಕಾಶನ, ಗುಲಬರ್ಗಾ. | ೨೦೦೨ |
| 30. | ಡಾ.ಚಂದ್ರಶೇಖರ ಬಿ.ದಾಮ್ಲೆ | ಭಾರತೀಯ ಸಾಮಾಜಿಕ ಅಧ್ಯಯನ | ನವಿನ ಪ್ರಕಾಶನ, ಬೆಂಗಳೂರು. | ೧೯೯೭ |
| 31. | ಬೀದರ ಉತ್ಸವ | ಸ್ಮರಣ ಸಂಚಿಕೆ | ಜಿಲ್ಲಾ ಸಂಸ್ಕೃತಿ ಪರಿಷತ್ ಬೀದರ | ೨೦೦೬ |
| 32. | ಬೀದರ ಉತ್ಸವ | ಸ್ಮರಣ ಸಂಚಿಕೆ | ಜಿಲ್ಲಾ ಸಂಸ್ಕೃತಿ ಪರಿಷತ್ ಬೀದರ | ೨೦೦೭ |